


# "ನನ್ನ ಸ್ವಾದಿಷ್ಟಮಯ ಆಯ್ಕೆ... ಎಲ್‌ವಿಟಿ"




**ಎಲ್‌ವಿಟಿ ಗ್ಲೂಕೋಸ್:-**
ರುಚಿಕರ ಮತ್ತು ಆಹ್ಲಾದಮಯ ಪುಷ್ಠಿದಾಯಕ ತಿನಿಸು.




**ಎಲ್‌ವಿಟಿ ಮಾರಿ:-**
ಅತಿ ಸಿಹಿಯಲ್ಲ. ಕಾಫಿಯೊಂದಿಗೂ ಚೆನ್ನಾಗಿ ಹೊಂದಿಕೆಯಾಗುತ್ತದೆ.




**ಎಲ್‌ವಿಟಿ ಪಿಕ್‌ಮಿ:-**
ಮಧುರ ಉಪ್ಪಿನ ರುಚಿಗಾಗಿ

**ಎಲ್‌ವಿಟಿ ಟಾಪ್‌ನಾಚ್-**
ಏಲಕ್ಕಿ ಕ್ರೀಮ್ ಬಿಸ್ಕಟ್, ಆರೆಂಜ್, ಪೈನಾಪಲ್ ಸ್ವಾದಗಳಲ್ಲೂ ಸಹ ಲಭ್ಯ

## "ಹಾಲೂ ಇಷ್ಟು ರುಚಿಯಾಗಿಲ್ಲ"




"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾ ಹಾ ಹಾ ಹಾಲು!"







ಬಿಸ್ಕಟ್‌ಗಳ ಜನತೆ

ಎಲ್‌ವಿಟಿ ಪ್ರಾಡಕ್ಟ್ಸ್ ಹುಬ್ಬಳ್ಳಿ 580 030

Imageads/LVT 861

# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :

ಕೆ. ಶಾಮರಾವ್

**

ಸಹಸಂಪಾದಕ :

ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :

ಹಾಲುಗಲ್ಲಿನಲಿ ಕಲೆ

**

ಛಾಯಾಚಿತ್ರ :

ಡಿ. ಎಸ್. ಮಂಜುನಾಥ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

**KASTURI, June 1986**

# ಬೆಳಕಿಂಡಿ

ಚಟವೆಂಬುದೊಂದು ಉಕ್ಕಿನ ಚಿಲಕತ್ತು.

—ಝೂಕ್ ಗಾದೆ

*

ವಿಮರ್ಶಕನ ಹೊಗಳಿಕೆಗೂ, ನೇಣುಹಾಕುವವ, "ನಿಮ್ಮ ಕುತ್ತಿಗೆ ಬಹಳ ಸುಂದರವಾಗಿದೆ" ಎನ್ನುವುದಕ್ಕೂ ಅಂತರವೇನಿದೆ?

—ಎಲಿ ವಾಲಾಚ್

*

ದೊರೆಯಬೇಕಾದದ್ದೆಲ್ಲ ಎಲ್ಲರಿಗೂ ದೊರೆತೇ ದೊರೆಯುತ್ತದೆ. ಆದರೆ ಅದನ್ನು ಗಣನೆಗೆ ತಂದುಕೊಳ್ಳುವವರೇ ವಿರಳ.

—ಜಾರ್ಜಸ್ ಸೈಮನ್ಸ್

*

ಯುವಕನೊಬ್ಬ ಕಲಿಯಬೇಕಾದ ಅತಿ ಕಠಿಣ ಪಾಠವೆಂದರೆ ತಾನು ಇತರರಿಗಿಂತ ಭಿನ್ನವಾಗಿಲ್ಲ ಎನ್ನುವುದು.

—ಡಿಬಿ

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ

# ಸಹಚಿಂತನ

**ಬತ್ತಲೆ...ಭಕ್ತಿಯಲ್ಲಿ...**

ಮೇ ೮೬ರ ಸಂಚಿಕೆಯಲ್ಲಿ 'ಬತ್ತಲೆ: ಮಂತ್ರದಲ್ಲಿ, ಮಾಟದಲ್ಲಿ, ಭಕ್ತಿಯಲ್ಲಿ' ಈ ಶೀರ್ಷಿಕೆಯಡಿಯ ಲೇಖನದಲ್ಲಿ ಹಿರಿಯರಾದ ಶ್ರೀ ಷಾ. ಷೆಂ. ಆಚಾರ್ಯರು 'ಬತ್ತಲೆ'ಯನ್ನು ಚೆನ್ನಾಗಿ ವಿಶ್ಲೇಷಿಸಿದ್ದಾರೆ. ಇತ್ತೀಚಿಗಿನ ಚಂದ್ರಗುತ್ತಿಯ ಹಗರಣದ ಹಿನ್ನೆಲೆಯಲ್ಲಿ ಈ ಲೇಖನವು ವಿಚಾರಕ್ಕೆಡೆಮಾಡಿಕೊಟ್ಟಿದೆ. ಚಂದ್ರಗುತ್ತಿಯ ಬತ್ತಲೆ ಸೇವೆಯ ಬಗ್ಗೆ ಸಚಿತ್ರ ವರದಿಗಳನ್ನು ಪ್ರಕಟಿಸಿ ಪ್ರಚಾರಮಾಡಿ ಪತ್ರಿಕೆಗಳು ತಪ್ಪು ಕೆಲಸ ಮಾಡಿವೆ. ವಿದ್ಯಾ ಪ್ರಚಾರದಿಂದ ತಾನಾಗಿಯೇ ಈ ನಡವಳಿಕೆಯನ್ನು ನಿಲ್ಲಿಸಬೇಕಲ್ಲದೆ ಒತ್ತಾಯದ ಶಾಸನಗಳಿಂದಾಗಲೀ ಕಾನೂನಿನ ಚೌಕಟ್ಟಿನಿಂದಾಗಲೀ ಇದನ್ನು ನಿಲ್ಲಿಸಿಬಿಡುತ್ತೇವೆನ್ನುವುದು ಮೂರ್ಖತನವಾದೀತು.

ಮಲ್ಪೆ (ದ. ಕ) —ವಿಲ್‌ಹೆಲ್ಮಿನಾ ರೋಸಿ

**ಡಾ. ಲೂಯಿಸ್**

ಮೇ ತಿಂಗಳಿನ 'ಕಸ್ತೂರಿ'ಯಲ್ಲಿ ಶ್ರೀ ಟಿ. ಆರ್. ತಿಪ್ಪೇಸ್ವಾಮಿಯವರು ಬರೆದಿರುವ ಡಾ. ವೈ. ಎಸ್. ಲೂಯಿಸ್ ಎಂಬ ವ್ಯಕ್ತಿ ಪರಿಚಯ ಎಲ್ಲರ ಕಣ್ತೆರೆಸುವಂತಿದೆ. ಎಷ್ಟೋ ಜನ ವಿದ್ಯಾರ್ಥಿಗಳು ವಿಜ್ಞಾನವನ್ನು ವಿಶೇಷವಾಗಿ ಅಧ್ಯಯನ ಮಾಡಿದರೂ ಅದರೊಂದಿಗೆ ಕನ್ನಡ ಸಾಹಿತ್ಯದ ಅಭಿರುಚಿಯನ್ನು ಬೆಳೆಸಿಕೊಂಡು ತಮ್ಮ ಶಕ್ತ್ಯಾನುಸಾರವಾಗಿ ಕನ್ನಡದಲ್ಲಿಯೂ ಗ್ರಂಥಗಳನ್ನು ಬರೆದಿರುವುದುಂಟು. ಡಾ. ವೈ. ಎಸ್. ಲೂಯಿಸ್ ಅವರನ್ನು ನಾನು ಕವಿಯಾಗಿ ಬಲ್ಲೆನಾದರೂ ಅವರು ವಿಜ್ಞಾನ ಕ್ಷೇತ್ರದಲ್ಲಿ ಎಷ್ಟು ಕೆಲಸ ಮಾಡಿರುವರೆನ್ನುವುದನ್ನು ತಿಳಿದಿರಲಿಲ್ಲ.

ಮೈಸೂರು —ಜಿ. ವರದರಾಜರಾವ್

ಮೇ 'ಕಸ್ತೂರಿ'ಯಲ್ಲಿ ಡಾ. ವೈ. ಎಸ್. ಲೂಯಿಸರ ಬಗೆಗೆ ಟಿ. ಆರ್. ತಿಪ್ಪೇಸ್ವಾಮಿಯವರು ಬರೆದ ಲೇಖನ ಓದಿದಾಗ ನನ್ನ ನೆನಪು ನನ್ನ ಹೈಸ್ಕೂಲು ದಿನಗಳೆಡೆಗೆ ಸಾಗಿಹೋಯಿತು. ಸುಮಾರು ೧೯೪೩ ರಿಂದ ೪೬ರ ಅವಧಿಯಲ್ಲಿ ಅವರ ಒಳ್ಳೆಯ ಕವಿತೆಗಳನ್ನು ಕನ್ನಡ ಪತ್ರಿಕೆಗಳಲ್ಲಿ ಓದಿದ್ದ ನೆನಪು ಮರುಕಳಿಸಿತು.

ಸಂಪಾಜೆ —ಸರವು ರಾಮಭಟ್ಟ

ಟಿ. ಆರ್ ತಿಪ್ಪೇಸ್ವಾಮಿ ಅವರ 'ಅಪರೂಪದ ಕವಿ ವಿಜ್ಞಾನಿ ಡಾ. ವೈ. ಎಸ್. ಲೂಯಿಸ್' ಎಂಬ ಲೇಖನ ತುಂಬಾ ಮೆಚ್ಚುಗೆ ಆಯಿತು. ಲೂಯಿಸ್ ಅವರ ಅನೇಕ ಸಾಧನೆಗಳು ಕನ್ನಡಿಗರಿಗೆ ಗೊತ್ತಿರಲಿಲ್ಲ. ಕನ್ನಡ ವಿಜ್ಞಾನಿಗಳು ಕವಿಗಳಾಗಿರುವುದು ತುಂಬಾ ವಿರಳ. ಲೂಯಿಸ್ ಅಂಥ ವಿರಳರಲ್ಲಿ ಒಬ್ಬರು.

ಮೈಸೂರು —ಮಳಲಿ ವಸಂತಕುಮಾರ್

**ಉತ್ತಮ ಲೇಖನಗಳು**

ಮೇ 'ಕಸ್ತೂರಿ'ಯ ಮುಖಪುಟ ಮುದ್ದಾಗಿದೆ.

ವಾಲ್ಟರ್ ಲಾಸ್ಸಾದೊ ಅವರ 'ಕೊಲೆಗೈದೂ ನಿರ್ದೋಷಿ'ಯು ಒಂದೆಡೆ ಮೂಢ ನಂಬಿಕೆಯ ಅನಾಹುತದ ಬಗ್ಗೆ ಎಚ್ಚರಿಸುತ್ತ, ಇನ್ನೊಂದೆಡೆ ನ್ಯಾಯಾಲಯದ ಮಿತಿಯಲ್ಲಿ ದೌರ್ಜನ್ಯದ ಬಗೆಗಿನ ತೀರ್ಪು ನ್ಯಾಯಸಮ್ಮತವಾಗಿರಲು ಸಾಧ್ಯವಿಲ್ಲದಿರಬಹುದೆಂಬುದನ್ನು ಹೇಳುತ್ತದೆ.

ಪುಸ್ತಕ ವಿಭಾಗದಲ್ಲಿ ಪ್ರಕಟವಾದ 'ಗೋವಾ ಸ್ವಾತಂತ್ರ್ಯ ವೀರ ಟೆಲೋ ಡಿ ಮ್ಯಾಸ್ಕರೇಞಸ್' ಓದಿ ಪುಳಕಿತನಾದೆ.

ಬೆಂಗಳೂರು —ನ. ಕೃ. ಮೂರ್ತಿ

**ಉತ್ತರ**

ಶ್ರೀ ತಿಪ್ಪೇಸ್ವಾಮಿಯವರು ಮೇ ತಿಂಗಳ ಸಂಚಿಕೆಯಲ್ಲಿ ನನ್ನ ಲೇಖನ(ಎಪ್ರಿಲ್-೮೫ 'ಹಿಂದೂ' ಶಬ್ದ ಹೇಗೆ ಬಂತು)ದ ಬಗೆಗೆ ವ್ಯಕ್ತಪಡಿಸಿದ ಅಭಿಪ್ರಾಯದ ಬಗೆಗೆ ನೊಂದು ಈ ಪ್ರತಿಕ್ರಿಯೆ ಬರೆಯುತ್ತಲಿದ್ದೇನೆ. ತಿಪ್ಪೇಸ್ವಾಮಿಯವರು ಬರೆದಂತೆ ಶ್ರೀ ಭಗವಾನ್‌ರು ತರಂಗ ಸಾಪ್ತಾಹಿಕದಲ್ಲಿ 'ಹಿಂದೂ' ಶಬ್ದದ ಅರ್ಥವಿವರಣೆ ಎಂಬ ತಲೆಬರಹದಡಿ ಹಿಂದೂ ಶಬ್ದದ ಬಗೆಗೆ ವಿವೇಚಿಸಿದ್ದು ಸತ್ಯ. ಆದರೆ ಅವರ ಆ ಲೇಖನದಲ್ಲಿಯ ಸಾಲುಗಳನ್ನೇ ಯಥಾವತ್ತಾಗಿ ಆರಿಸಿಕೊಂಡು ನನ್ನ ಲೇಖಕೀಯ ಪ್ರತಿಭೆ ಮೆರೆಯಲಿಕ್ಕೆ ಹೊರಟಿದ್ದೇನೆ ಎಂದು ತಿಪ್ಪೇಸ್ವಾಮಿಯವರು ಹೇಳಿದ್ದು ನನಗೆ ವ್ಯಥೆ ತಂದಿತು.

ಇಲ್ಲಿ ಅವರಿಗೆ ಹೆಚ್ಚು ಅನುಮಾನ ತಂದ ಸಂಗತಿ ಎಂದರೆ ನಮ್ಮಿಬ್ಬರ ಲೇಖನಗಳ ಪ್ರಾರಂಭ ಒಂದೇ ಇದ್ದದ್ದು. ಅಷ್ಟಕ್ಕೇ ಶ್ರೀ ಭಗವಾನರ ಲೇಖನದ ಸಾಲುಗಳೇ ಇವು ಎಂದು ತಿಪ್ಪೇಸ್ವಾಮಿಯವರು ಹೇಳಿದ್ದು ಸತ್ಯಕ್ಕೆ ಸಮೀಪವೆ? 'ರಾಮಕೃಷ್ಣ ಮಿಷನ್ ಹಿಂದೂ ಅಲ್ಲ' ಎಂದು ಹೇಳಿದ ಕಲ್ಕತ್ತಾ ಹೈಕೋರ್ಟು ತೀರ್ಪು ಸರ್ವವಿದಿತ. ಇಂತಿದ್ದೂ ಈ ನನ್ನ ಲೇಖನವನ್ನು ಕೋರ್ಟಿನ ಈ ತೀರ್ಪಿನೊಂದಿಗೆ ಪ್ರಾರಂಭಿಸಿದ್ದು ನನ್ನ ತಪ್ಪೆ? ಅಥವಾ ತಿಪ್ಪೇಸ್ವಾಮಿಯವರ ದೃಷ್ಟಿಯಲ್ಲಿ ಅದು ಕೇವಲ ಶ್ರೀ ಭಗವಾನರ ಸೊತ್ತೆ? ನನ್ನ ಲೇಖನದಲ್ಲಿ ಇದ್ದದ್ದು ಹಿಂದೂ ಶಬ್ದದ ಅರ್ಥ ವಿವರಣೆ ಅಲ್ಲ. ಅದಕ್ಕೆ ಬದಲಾಗಿ ಹಿಂದೂ ಶಬ್ದದ ಉಗಮದ ಮೂಲದ ಬಗೆಗೆ ವಿವರಣೆ ಇದೆ. ಸಾರ್ವಜನಿಕ ವಿಷಯಗಳನ್ನೆತ್ತಿ ಬರೆಯುವ ಹಕ್ಕು ಯಾರಿಗಾದರೂ ಇದೆ ಎಂಬುದು ತಿಪ್ಪೇಸ್ವಾಮಿಯವರಿಗೆ ಗೊತ್ತೆ?

ಹೊಸಪೇಟೆ —ಚಿಂತಕ

ಮಾರ್ಚ್ 'ಕಸ್ತೂರಿ'ಯಲ್ಲಿ ನಾನು ಬರೆದ ಪೈಲವಾನ್ ಪಾಪಯ್ಯನವರ ಲೇಖನದ ಬಗ್ಗೆ ಮಿತ್ರ ನಂಜರಾಜಪ್ಪ ಮತ್ತು ಪುರುಷೊತ್ತಮರ ಪ್ರತಿಕ್ರಿಯೆ ಕುರಿತು ನನ್ನ ವಿವರಣೆ.

೧. ಪಾಪಯ್ಯನವರ ಪುತ್ರರೊಬ್ಬರು ನನಗೆ ನೀಡಿದ ಲಿಖಿತ ಮಾಹಿತಿಗಳೇ ಲೇಖನಕ್ಕೆ ಆಧಾರ.

೨. ನಾನು ಪೈಲವಾನ್ ಪಾಪಯ್ಯನವರ ಬಗ್ಗೆ ಬರೆದ ಲೇಖನವನ್ನು 'ಕಸ್ತೂರಿ'ಗೆ ಕಳಿಸಿ ಸುಮಾರು ನಾಲ್ಕೈದು ವರ್ಷಗಳಾಗಿತ್ತು. ಕೆಲವು ದಿನಗಳ ಹಿಂದೆ, ನಂಜರಾಜಪ್ಪನವರು ನನಗೆ ಪಾಪಯ್ಯನವರ ಬಗ್ಗೆ ಕೆಲವು ಉಪಯುಕ್ತ ವಿಚಾರಗಳನ್ನು ತಿಳಿಸಿದ್ದರು. ಲೇಖನ ನನ್ನ ಕೈಬಿಟ್ಟು ಹೋಗಿದ್ದುದರಿಂದ, ಅವರ ವಿಚಾರಗಳನ್ನು ಲೇಖನದಲ್ಲಿ ಸೇರಿಸಲು ಸಾಧ್ಯವಾಗಲಿಲ್ಲ.

ಗರಡಿ ಉಸ್ತಾದ್ ಯಾರೇ ಇರಲಿ, 'ಫಕೀರ್ ಅಹಮದ್ ಸಾಹೇಬರ ಗರಡಿ' ಎಂಬ ದಾಖಲೆಗಳಿದ್ದರೂ ಈಗ 'ಪಾಪಯ್ಯನ ಗರಡಿ' ಎಂದೇ ಜನಪ್ರಿಯವಾಗಿರುವುದಂತೂ ಸತ್ಯ.

೩. ಪ್ರತಿಭೆಗೆ ಮಾತ್ರ ಪುರಸ್ಕಾರ ದೊರೆಯುತ್ತಿದ್ದ ಆ ಕಾಲದಲ್ಲಿ ಪಾಪಯ್ಯನವರನ್ನು ರಾಜರು ಜೊತೆಯಲ್ಲಿ ದೆಹಲಿಗೆ ಕರೆದುಕೊಂಡು ಹೋಗಿದ್ದೂ ಗಮನಿಸಬೇಕಾದ ಸಂಗತಿ. ಇದನ್ನು ಪುರುಷೋತ್ತಮರೂ ಒಪ್ಪಿದ್ದಾರೆ.

ದೆಹಲಿಯ ದರ್ಬಾರನ್ನು ನೋಡಲು ಅಭಿಲಾಷೆಯನ್ನು ವ್ಯಕ್ತಪಡಿಸಿದ ಮಾತ್ರಕ್ಕೆ ಮಹಾರಾಜರು ಪಾಪಯ್ಯನವರನ್ನು ಕರೆದೊಯ್ಯಬೇಕೆಂದೇನೂ ಇಲ್ಲ. ಈ ಅಂಶದಿಂದ ಮಹಾರಾಜರಿಗೂ ಪಾಪಯ್ಯನವರಿಗೂ ಇದ್ದ ಗಾಢ ಆತ್ಮೀಯತೆ ಯಾರಿಗಾದರೂ ಅರ್ಥವಾದೀತು. ಮಹಾರಾಜರೊಡನೆ ಸಾಮಾನ್ಯ ವ್ಯಕ್ತಿಯೊಬ್ಬ ಆತ್ಮೀಯನಾಗಿರಲು ಸಾಧ್ಯವೆ? ಆದರೆ ಪಾಪಯ್ಯನವರನ್ನು 'ಚಿತ್' ಮಾಡಿ ಸೋಲಿಸಿದರು ಇತ್ಯಾದಿ ಸಂಗತಿ ಬಗ್ಗೆ ಆಧಾರಗಳನ್ನು ಪುರುಷೋತ್ತಮರು ನೀಡಬೇಕಿತ್ತು.

ಮೈಸೂರು —ಪಿ. ಆರ್. ತಿಪ್ಪೇಸ್ವಾಮಿ

**ಸತ್ಯವಂತ**

ಎಪ್ರಿಲ್ ಸಂಚಿಕೆಯಲ್ಲಿ ಇರ್ಷಾದ್ ಮೂಡಬಿದ್ರಿ ಅವರ 'ಸತ್ಯವಂತ' ನೋಡಿ ತುಂಬಾ ಖುಷಿಯಾಯಿತು. ಹಜರತ್ ಅಬ್ದುಲ್ ಕಾದರ್ ಜಿಲಾನಿಯವರು ಪ್ರವಾದಿ ಸಂತರಲ್ಲ, ಕೇವಲ ಒಬ್ಬ ಸಂತ. ಇಂದು ಈ ಸಂತರ ಆದರ್ಶವೆಲ್ಲ ಮಾಯವಾಗಿ ಅವರ ಹೆಸರಲ್ಲಿ ಅವರೇ ವಿರೋಧಿಸಿದ ಕಂದಾಚಾರಗಳು ಮಾತ್ರ ಜಾರಿಯಲ್ಲಿವೆ.

ತೊಕ್ಕೋಟು —ಫಾತಿಮ ತಸ್‌ನೀಮ್

ಮೇ ತಿಂಗಳ 'ಕಸ್ತೂರಿ' ಸಂಚಿಕೆಯಲ್ಲಿ ಮೂಡಿ ಬಂದ ದೊಡ್ಡರಂಗೇಗೌಡರ 'ಈಗಿನ ಯುವಜನರ ಒರಟು ವರ್ತನೆಗೆ ಕಾರಣ?' ಲೇಖನ ಸಮಯೋಚಿತ.

ವಿಟ್ಲ —ಬಾಲಗೋಪಾಲ

---

'ಅಜ್ಞಾತ ವಿಜ್ಞಾನಿಯ ದುರಂತ ಕಥೆ' (ಮೇ ೧೯೮೬, ಪುಟ ೪೧)ಯ ಲೇಖಕರ ಹೆಸರು ಕಣ್ತಪ್ಪಿನಿಂದ ಪಿ.ಕೃಷ್ಣಪ್ಪ ಎಂದು ಪ್ರಕಟವಾಗಿದೆ. ಅದನ್ನು ಬರೆದವರು ಪಿ. ಕೃಷ್ಣಪ್ರಸಾದ ಅವರು. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ. —ಸಂಪಾದಕ

---

# ಕಸ್ತೂರಿ

ವರ್ಷ : ೩೦ | ಜೂನ್ ೧೯೮೬ | ಸಂಚಿಕೆ : ೧೧


## ಪಶು ಸಂಸತ್ತು

-ವಿದ್ಯಾಶಂಕರ

ಪಶುಗಳೆಲ್ಲ ಒಮ್ಮೆ ಸೇರಿ ಪ್ರಜಾತಂತ್ರವನ್ನು ಆಳವಡಿಸಿಕೊಳ್ಳಲು ಯೋಚಿಸಿದುವು. ಕಾಡಿನಲ್ಲಿ ಪಶುತಂತ್ರ ಸ್ಥಾಪನೆಯ ಚಟುವಟಿಕೆಗಳು ತೀವ್ರವಾದವು. ಪರಿಣಾಮವಾಗಿ ವಿಪಿನವಾಸಿಗಳೆಲ್ಲ ಸಮಾನರೆಂಬ ನಂಬಿಕೆ ಮೂಡಿತು. ಸಾಮ್ರಾಜ್ಯವಾದಿ ಸಿಂಹಗಳ ಶಾಸನ ಪರಿಸಮಾಪ್ತಿ ಹೊಂದಿ, ಅಲ್ಲಿ ಪಶು ಕಲ್ಯಾಣಕಾರಿಯಾದ ಪಶುರಂಜನ-ಪಶುತಂತ್ರ ಸ್ಥಾಪಿಸಲ್ಪಟ್ಟಿತು.

ಪಶು ಸಂಸತ್ತಿನ ಸ್ಥಾಪನೆಗೂ ತಯಾರಿ ನಡೆಯಿತು. ಕಾಡಿನಲ್ಲಿಯ ಮತದಾರ ಪಶುಗಳ ಪಟ್ಟಿಯೂ ಪ್ರಕಟಿಸಲ್ಪಟ್ಟಿತು. ಸಮಾನ ಧರ್ಮ, ಸಮಾನ ಸ್ವಭಾವದ ಪ್ರಾಣಿಗಳೆಲ್ಲ ಸೇರಿ

ಪಕ್ಷಗಳನ್ನು ಕಟ್ಟಿಕೊಂಡವು. ಚುನಾವಣಾ ಕಣಕ್ಕೆ ತಮ್ಮ ಪ್ರತಿನಿಧಿಯನ್ನು ದೂಡಿದವು.

ಅಧಿಕ ಸಂಖ್ಯಾತ ಪ್ರಾಣಿಗಳೆಂದರೆ ತೋಳಗಳು. ನಾಯಿಗಳು ತೋಳಗಳ ಬಳಿ ಬಂದು ತಮಗೆ ಬೆಂಬಲ ನೀಡಿ ಬಹುಮತದಿಂದ ಆಯ್ಕೆ ಮಾಡಿದರೆ ತೋಳಗಳ ಮೇಲೆ ತಾವು ಏರಿ ಹೋಗುವುದನ್ನೂ, ಕಚ್ಚಿ ಸಾಯಿಸುವುದನ್ನೂ ಬಿಟ್ಟುಬಿಡುವುದಾಗಿ ಆಶ್ವಾಸನೆ ಇತ್ತವು. ತೋಳಗಳಿಗೆ ಈ ಮಾತು ಸರಿ ಎನಿಸಿತು. ಬೆಂಬಲಿಸುವುದಾಗಿ ಮಾತು ಕೊಟ್ಟವು.

ಚುನಾವಣೆಯ ಫಲಿತಾಂಶ ಹೊರಬಂತು. ಪಶು ಸಂಪತ್ತಿನಲ್ಲಿ ನಾಯಿಗಳದೇ ಬಹುಮತದ ಪಕ್ಷವಾಯಿತು. ಹೀಗಾಗಿ ಕಲಾಪದ ಸಮಯದಲ್ಲಿ ವಿರೋಧೀ ಸದಸ್ಯ ಪ್ರಾಣಿಗಳು ಏನೇ ಹೇಳಿದರೂ ಅವಕ್ಕೆ ಬೊಗಳಿಕೆಯೇ ಉತ್ತರವಾಗುತ್ತಿತ್ತು. ಅಲ್ಲದೆ ನಾಯಿಗಳ ನಾಯಕ ಏನಾದರೂ ಪ್ರಸ್ತಾಪಿಸಿದರೆ ಅದನ್ನು ಸಮರ್ಥಿಸಿ ಉಳಿದ ನಾಯಿಗಳೂ ಬೊಗಳತೊಡಗುತ್ತಿದ್ದವು.

ನಾಯಿಯೊಂದು ಎಲ್ಲೇ ಬೊಗಳಲಿ, ಅದಕ್ಕೆ ನೂರಾರು ನಾಯಿಗಳು ದನಿಗೂಡಿಸುವ ರೀತಿ ಎದೆಗೆಡಿಸುವಂಥದು. ಆ ಗಗನಭೇದಿ ಬೊಗಳುವಿಕೆಯ ಎದುರು ಬಡಪಾಯಿಯ ಕೂಗೆಲ್ಲಿ ಕೇಳಬೇಕು? ಪಶು ಸಂಸತ್ತಿನಿಂದ ತಮ್ಮ ಬೀಡಿನವರೆಗೂ ಹೋಗುತ್ತ ಬರುತ್ತ ಬೊಗಳುತ್ತಲೇ ಸಾಗಿತು ಶ್ವಾನಾಡಳಿತ. ✡


# ಕಸ್ತೂರಿ

## ವಿಶೇಷಾಂಕ

ಮೂವತ್ತೊಂದರ ಹೊಸ್ತಿಲಲ್ಲಿ ಅಡಿಯಿಡುತ್ತಿರುವ ಸಂದರ್ಭದಲ್ಲಿ

**ಸೆಪ್ಟಂಬರ್ ೮೬ರ ಸಂಚಿಕೆ**

ಹಿಗ್ಗಿನೊಡನೆ ಹಿಗ್ಗಿ ಬರುತ್ತಲಿದೆ.



**ಕಥೆ – ಕವನ – ಲೇಖನ – ಪುಸ್ತಕ ವಿಭಾಗ – ಪರಿಚಯ**

ಇತ್ಯಾದಿಗಳೆಲ್ಲ ವಿಶೇಷ.



ನಾಡಿನ ಎಲ್ಲ ಕಡೆಯ ಲೇಖಕರು ಹುರುಪಿನಿಂದ ನೀಡುವ ಹೂರಣ

ಮುಖಪುಟವಂತೂ ತುಂಬ ಓರಣ.

---

ಸಂಗ್ರಹಿಸಲು ಮರೆಯಬೇಡಿ




# ಇಂಗ್ಲಿಷ್ ಗೀತಗಳು/ ಗ್ರಾಮಾಯಣ/ ಮಾಟಗಾತಿ

**ದೇಶಪಾಂಡೆ ಸುಬ್ಬರಾಯ**

೯

## ಶ್ರೀ/ಇಂಗ್ಲಿಷ್ ಗೀತಗಳು

ಅನುವಾದಕರು ಕೊಲೆಗಡುಗರು ಎನ್ನುವ ಹಳೆಯ ಮಾತೊಂದಿದೆ. ಈ ಹಳೆಯ ಮಾತಿಗೆ ಮತ್ತೆ ಮತ್ತೆ ಹೊಸ ಜೀವ ತುಂಬುವ ಶ್ರಮವನ್ನು ಕೈಕೊಂಡವರು ಸಾವಿರಾರು ಜನ. ಆದರೆ ಈ ಸಾವಿರಗಳ ಮಧ್ಯದಲ್ಲೇ ಇದ್ದು, ಕೆಲ ಸಲ ಮೂಲದ ಮೆರಗೂ ಮಸುಕಾಗುವಂತೆ, ಅನುವಾದದಲ್ಲಿಯೇ ಅತ್ಯುತ್ತಮವನ್ನು ಅರಳಿಸಿದ ಶ್ರೇಯಸ್ಸು ಶ್ರೀ ಅವರಿಗಿದೆ. ಅತ್ಯುತ್ತಮ ಅನುವಾದ ಮುಖೇನ ಮೂಲವನ್ನು ಮಸುಕಾಗಿಸುವದಿರಲಿ, ಕನ್ನಡ ನವೋದಯದ ಒಂದು ಹೊಸ ಇತಿಹಾಸದ ನಸುಕನ್ನೇ ಅನಾವರಣಗೊಳಿಸಿದ ಆದ್ಯ ಸ್ಥಾನವೇ ಅವರ 'ಇಂಗ್ಲಿಷ್ ಗೀತಗಳು' ಸಂಗ್ರಹಕ್ಕಿದೆ.

"ಚಿಮ್ಮುತ ನಿರಿಯನು ಬನದಲಿ ಬಂದಳು/ ಬಿಂಕದ ಸಿಂಗಾರಿ/ಹೊಮ್ಮಿದ ಹಸುರಲಿ ಮೆರೆಯಿತು ಹಕ್ಕಿ/ಕೊಳಲಿನ ದನಿದೋರಿ" ಎಂದು ಆರಂಭವಾಗುವ 'ಬಿಂಕದ ಸಿಂಗಾರಿ' ಕವಿತೆ ಮತ್ತು "Proud Maisie is in the wood / Walking so early/Sweet Robin sits on the branch/Singing so rarely" ಎಂದು ಆರಂಭವಾಗುವ 'Proud Maisie' ಕವಿತೆ ಈ ಎರಡನ್ನೂ ಪೂರ್ತಿಯಾಗಿ ಓದಿದರೆ, ಶ್ರೀ ಅವರ 'ಬಿಂಕದ ಸಿಂಗಾರಿ' ಎನ್ನುವ ಕನ್ನಡದ ಅತ್ಯುತ್ತಮ ಕವಿತೆಯೊಂದನ್ನು Sir Walter Scott ಎನ್ನುವವ ತೀರ ಸಾಧಾರಣವೆನ್ನಬಹುದಾದ ರೀತಿಯಲ್ಲಿ ಇಂಗ್ಲಿಷಿಗೆ ಭಾಷಾಂತರಿಸಿದ' ಎನ್ನಬೇಕೆಂದು ಯಾರಿಗಾದರೂ ಅನಿಸಿದರೆ ಸಾಕು, ಇದೇ ಶ್ರೀ ಅವರ ಸಾಧನೆ.

'ಇಂಗ್ಲಿಷ್ ಗೀತಗಳ' ಕೆಲವು ಕವನಗಳು, ಚಿಕ್ಕ ಪುಸ್ತಕದ ರೂಪದಲ್ಲಿ ೧೯೨೧ರಷ್ಟು ಹಿಂದೆಯೇ ಪ್ರಕಟವಾಗಿದ್ದರೂ, ಇಂದು ನಾವು ಕಾಣುವ ಪೂರ್ಣ ಪ್ರಮಾಣದ ಸಂಕಲನ ಪ್ರಕಟವಾದದ್ದು ೧೯೨೬ರಲ್ಲಿ. ಗಮನಿಸಬೇಕಾದ ಸಂಗತಿ ಎಂದರೆ 'ಇಂಗ್ಲಿಷ್ ಗೀತಗಳು' ಸಂಗ್ರಹದ ಪ್ರಕಟನೆಗೆ ಮುಂಚೆಯೇ ಅನೇಕರು, ವಿಭಿನ್ನ ಇಂಗ್ಲಿಷ್ ಕವಿತೆಗಳನ್ನು ಕೆಲವಾದರೂ ಸಂಖ್ಯೆಯಲ್ಲಿ ಕನ್ನಡಕ್ಕೆ ತಂದೇ ಇದ್ದರು ಎನ್ನುವುದು.

ವರ್ಡ್ಸ್‌ವರ್ಥ್‌ನ 'ಟು ದ ಕಕೂ' ಮಿಸೆಸ್ ಎಫ್. ಹೆಮಸ್‌ನ, 'ದಿ ಬೆಟರ್ ಲ್ಯಾಂಡ್'

ಮುಂತಾದ ಕವಿತೆಗಳನ್ನು ಭಾಷಾಂತರಿಸಿದ ಎಸ್. ಜಿ. ನರಸಿಂಹಾಚಾರ್ಯರು, 'ನಕ್ಷತ್ರ' 'ಅಣ್ಣನ ವಿಲಾಪ' ಮುಂತಾದ ಕವಿತೆಗಳನ್ನು ಕೊಟ್ಟ ಪಂಜೆ ಮಂಗೇಶರಾಯರು, 'ಚಿಟ್ಟೆಗೆ', 'ಬಾನಕ್ಕಿಗೆ' ಇತ್ಯಾದಿ ತಂದ ಗೋವಿಂದ ಪೈ ಅವರೂ ಅಂಥವರಲ್ಲಿ ಪ್ರಮುಖ ಭಾಷಾಂತರಕಾರರು. ಹಟ್ಟಿಯಂಗಡಿ ನಾರಾಯಣರಾಯರಂತೂ, ಗ್ರೇ, ಮಿಲ್ಟನ್, ಶೇಕ್ಸ್‌ಪಿಯರ್, ಶೆಲ್ಲಿ, ಕೀಟ್ಸ್, ಮೊದಲಾದ ಕವಿಗಳ ಭಾಷಾಂತರಗಳನ್ನೊಳಗೊಂಡ 'ಆಂಗ್ಲ ಕವಿತಾಸಾರ' ಎಂಬ ಚಿಕ್ಕ ಸಂಗ್ರಹವನ್ನೇ ಪ್ರಕಟಿಸಿಬಿಟ್ಟಿದ್ದರು ಎಂಬುದು ಐತಿಹಾಸಿಕವಾಗಿ ಒಂದು ಮಹತ್ವದ ಸಂಗತಿಯೇ. ಹಾಗಿದ್ದೂ, ಈ ಎಲ್ಲ ಹಿನ್ನೆಲೆಗಳ ನಂತರ ಪ್ರಕಟವಾದ ನಂತರವೂ, ಇಷ್ಟೊಂದು ಜನಪ್ರಿಯವಾಗಲೂ ಮತ್ತು ಮುಖ್ಯವಾಗಿ ಒಂದು ಐತಿಹಾಸಿಕ ಮಹತ್ವದ ಸಂಕಲನ ಎನಿಸಲೂ 'ಇಂಗ್ಲಿಷ್ ಗೀತಗಳು' ಸಂಗ್ರಹಕ್ಕಿದ್ದ ಹೆಗ್ಗಳಿಕೆಯಾದರೂ ಏನು? ಎನ್ನುವ ಪ್ರಶ್ನೆ ಉದ್ಭವಿಸಿಯೇ ತೀರುತ್ತದೆ.

ಉತ್ತರವಿಷ್ಟೇ: ಕವಿಯ ಭಾಷೆಗೂ ಜನತೆಯ ಭಾಷೆಗೂ ಹೆಚ್ಚು ಅಂತರವಿರಬಾರದೆಂಬ ಶ್ರೀ ಅವರ ದೃಢವಾದ ಪ್ರತಿಪಾದನೆ ಮತ್ತು ಅದಕ್ಕನುಗುಣವಾದ ಸಮರ್ಥ ಭಾಷಾಂತರ ಸಾಧನೆಯೇ ಪ್ರಾಯಶಃ ಈ ಸಂಗ್ರಹದ ಯಶಸ್ಸಿನ ಮೊದಲ ಕಾರಣ ಎನ್ನಬಹುದು. ಎರಡನೆಯದಾಗಿ, ಮುಖ್ಯವೆನ್ನಬಹುದಾದ—ಅದರಲ್ಲಿಯೂ, ಕಥನ ಶಕ್ತಿ ಮತ್ತು ಚಿತ್ರಕ ಶಕ್ತಿಗಳಿರಬಹುದಾದ—ಎಲ್ಲ ಕವನಗಳನ್ನೂ ನಮ್ಮ ನೆಲ, ನೀರು ಮತ್ತು ಗಾಳಿಗನುಗುಣವಾದ ವಾತಾವರಣಕ್ಕೆ ಅನುಕೂಲಕರ ರೀತಿಯಲ್ಲಿ ತುಂಬ ಸಮರ್ಥ ರೀತಿಯಲ್ಲಿ ಮತ್ತು ಅಷ್ಟೇ ಸ್ವಾಭಾವಿಕ ರೀತಿಯಲ್ಲಿ ಬದಲಾಯಿಸಿಕೊಂಡು, ಅದಕ್ಕೊಂದು ಆತ್ಮೀಯ ಸ್ಪರ್ಶವನ್ನಿತ್ತಿರುವುದು; ಮೂರನೆಯದಾಗಿ, ಬಹುಶಃ ಅಂದಿನ ಸಾಹಿತ್ಯಕ ಮತ್ತು ಸಾಮಾಜಿಕ ವಾತಾವರಣದಲ್ಲಿ ಎಂತಹ ಮೌಲ್ಯಗಳ ಪ್ರತಿಪಾದನೆಗಳಿಗಾಗಿ ನಮ್ಮ ಬರಹದ ಬದುಕು ಕಾದಿತ್ತೋ ಅಂತಹ ಪ್ರತಿಪಾದನೆಗಳನ್ನೇ ಒಳಗೊಂಡಂತಹ ಕಾವ್ಯಗಳನ್ನೇ ಹೆಚ್ಚಿನ ಶ್ರಮ, ಸತ್ವ ಮತ್ತು ಸಾರ್ಥಕ್ಯಗಳೊಂದಿಗೆ ಕನ್ನಡದಲ್ಲಿ ತಂದದ್ದು. ಬಹುಶಃ ಈ ಕಾರಣಗಳಿಂದಾಗಿಯೇ, ಈ ಕವನ ಸಂಗ್ರಹ ಸ್ವಯಂ ಯಶಸ್ವಿಯಾದದ್ದು ಮಾತ್ರವಲ್ಲ, ಒಂದು ಹೊಸ ಸಂಪ್ರದಾಯವನ್ನೇ ನಿರ್ಮಿಸಲು ಶಕ್ಯವಾಯಿತು ಎಂದು ಕಾಣುತ್ತದೆ.

ಇಲ್ಲಿಯ ಕೆಲವು ಕವಿತೆಗಳನ್ನು ಕೊಂಚ ವಿಭಿನ್ನ ರೀತಿಯಲ್ಲಿ ವಿಶ್ಲೇಷಿಸಿ ನೋಡುವ ಮುಖಾಂತರ ಮೇಲ್ಕಂಡ ಅಂಶಗಳನ್ನು ವಿವರವಾಗಿ ಗಮನಿಸಬಹುದೇನೋ.

ಉದಾ : ಮುದಿಯ ರಾಮುಗೌಡ. ಪ್ರೀತಿ ಮತ್ತು ಕರ್ತವ್ಯ, ಆದರ್ಶ ಮತ್ತು ವಾಸ್ತವತೆ, ಸೆಳೆತ ಮತ್ತು ವಿಶ್ವಾಸಗಳನ್ನು ಒಂದು ನೈತಿಕ ನೆಲೆಗಟ್ಟಿನ ಮೇಲೆ, ತುಂಬ ಸ್ಪಷ್ಟವಾಗಿ, ಚಿತ್ರಕವಾಗಿ, ಆರ್ದ್ರವಾಗಿ ಚಿತ್ರಿಸಿದ ಇಲ್ಲಿಯ ಪರಿ, ಆಧುನಿಕ ಸಾಹಿತ್ಯಕ್ಕೆ ಆದರ್ಶಮಯ ಮೌಲ್ಯಗಳ ಒಂದು ಹೊಸ ಭೂಮಿಕೆಯನ್ನೇ ಒದಗಿಸಿತು ಎಂದು ಹೇಳಬಹುದೇನೋ. ಒಂದು ದೃಷ್ಟಿಯಿಂದ, ಮೂಲತಃ ಈ ನೆಲದ್ದೆಂದೇ ಹೇಳಬಹುದಾದಷ್ಟು ಗಟ್ಟಿಯಾದ ನೈತಿಕ ನೆಲಗಟ್ಟನ್ನು ಪ್ರತಿಪಾದಿಸಿದ ಶ್ರೇಯಸ್ಸು 'ಮುದಿಯ ರಾಮುಗೌಡ' ಕವಿತೆಗಿದೆ.

ಕಥೆಯಂತೂ ಗೊತ್ತಿದ್ದದ್ದೇ : ಚಾಮು, ಚೆನ್ನಿ ಪ್ರೇಮಿಗಳು. ಮದುವೆಗೆ ತೆರವ ತೆರಲು ಅನುಕೂಲವಿಲ್ಲದ ಚಾಮು ಹಣ ಸಂಪಾದಿಸಲು ಹಡಗು ಸೇರಿಕೊಂಡ. ಇತ್ತ, ಎಲ್ಲ ರೀತಿಯಿಂದಲೂ ನಿರ್ಗತಿಕರಾದ ಚೆನ್ನಿ, ಆಕೆಯ ತಂದೆ ತಾಯಿಗಳಿಗೆ 'ಕಷ್ಟಕಾದ' ಚೆನ್ನಿಯ ಕೈ ಹಿಡಿಯಬಯಸಿದವನು ಮುದಿಯ ರಾಮುಗೌಡ; ಗದರಿಕೊಂಡ ಅಪ್ಪನಿಗಿಂತ 'ಎದೆಯನಿರಿಯುವ' ಅವ್ವನ ನೋಟದಿಂದಾಗಿಯೇ ರಾಮುಗೌಡನನ್ನು ಮದುವೆಯಾದಳು ಚೆನ್ನಿ. ನಂತರ ಬಂದ ಚಾಮುನಿಗೆ ಬಿಕ್ಕಿ ಬಿಕ್ಕಿ ವಿಷಯ ತಿಳಿಸಿ, ಆತನನ್ನು 'ಅಟ್ಟಿಬಿಟ್ಟು' ಒಳ್ಳೆ ಗರತಿಯಾಗಿ ಬದುಕಲು 'ಎದೆಯನೆಷ್ಟೋ ಗಟ್ಟಿ' ಮಾಡುತ್ತಾಳೆ ಚೆನ್ನಿ.

ಇಲ್ಲಿ ಕಥೆ ಮುಖ್ಯವಲ್ಲ. ಅದನ್ನು ಹೇಳಿದ, ಮಿಡಿಯುವ ಶೈಲಿಯೂ ಅಷ್ಟು ಮುಖ್ಯವಲ್ಲ. ಅದರ ಭಿತ್ತಿಗಳಲ್ಲಿ ದಟ್ಟವಾಗಿ ತೊಡೆದುಕೊಂಡ

ನೈತಿಕ ನಿಲುವು, ಕರ್ತವ್ಯಪ್ರಜ್ಞೆ, ವಾಸ್ತವದ ಜವಾಬ್ದಾರಿ, ಸತ್ಯವನ್ನೆದುರಿಸುವ ದೃಢತೆ ಇವುಗಳ ತೀವ್ರ ಮಂಡನೆ ತುಂಬ ಮುಖ್ಯವಾದದ್ದೆಂದು ನಾನು ಭಾವಿಸುತ್ತೇನೆ.

'ತೆರವ ತಂದೆ; ಮದುವೆಯಾಗಲು ಬಂದೆ, ಚೆನ್ನಿ' ಎಂದು ಚಾಮ ಬಂದಾಗ : ತನ್ನ ಎಲ್ಲ ದುರ್ದೆಶೆಗಳನ್ನೂ ಹೇಳಿ, 'ಒಂದು ಮುತ್ತನ್ನು ಸೆಳೆದುಕೊಂಡೆವು,' ಎಂದು ಚೆನ್ನಿ ಹೇಳುವಾಗಿನ ಇಡಿಯ ಚಾಮ, ಪ್ರೀತಿ ಸಳೆತ ಮತ್ತು ಆದರ್ಶಗಳ ಹಿಂದಿರುವ ಚಾಮ, ಎಷ್ಟೆಲ್ಲವೂ ಚೆನ್ನಿಯ ಒಳಗೆ ಸೇರುತ್ತಾನೋ, ಅಷ್ಟೇ ಮಟ್ಟಿಗಿನ ಚಾಮ : 'ಆಟ್ಟಿಬಿಟ್ಟೆ' ಎಂದು ಚೆನ್ನಿ ಹೇಳುವಾಗ ಕರ್ತವ್ಯ, ವಾಸ್ತವತೆ ಮತ್ತು ವಿಶ್ವಾಸಗಳ ಹಿಂದಿರುವ ರಾಮಗೌಡನಿಂದಾಗಿ ಅಷ್ಟೆಲ್ಲವೂ ಚೆನ್ನಿಯಿಂದ ಹೊರಬೀಳುವುದು ಇಲ್ಲಿಯ ಒಂದು ದೊಡ್ಡ ನೈತಿಕ ಗೆಲುವು; ನವೋದಯ ಮೌಲ್ಯಗಳು ಕೊಡುವ ನೀತಿ ಸಂಹಿತೆಯ ಗೆಲುವು. ತತ್‌ಕ್ಷಣವೇ ಪ್ರಯೋಗಿತವಾಗುವ (ಅಟ್ಟಿಬಿಟ್ಟೆ ಎಂಬ) ಒಂದು ಶಬ್ದಪ್ರಯೋಗ ಮಾತ್ರದಿಂದಲೇ ಇಡಿಯ ಚಿತ್ರವನ್ನು, ಇಡಿಯ ಅನಿಸಿಕೆಯನ್ನು, ಇಡಿಯ ಭಾವಲೋಕವನ್ನು ಪೂರ್ತಿಯಾಗಿ ಬದಲಿಸಿಬಿಡುವ ಈ ಗೆಲುವು ಶ್ರೀ ಅವರ ಒಂದು ಶ್ರೇಷ್ಠ ಮೌಲಿಕ ಸಾಧನೆ. ಕಾವ್ಯಕ್ಕೊಂದು ನೈತಿಕ ಕುಮ್ಮಕ್ಕು.

ಈ ಒಂದು ಗೆಲುವಿನಿಂದಾಗಿಯೇ 'ರಾಮ ಗೌಡನ ಪ್ರೀತಿ ನಂಬಿಕೆಗೆಂತು ದ್ರೋಹವ ಬಗೆವೆನು' ಎಂಬ ಸಾಲಿಗೆ ವಿಶೇಷ ಒತ್ತು- ನೈತಿಕ ಒತ್ತು- ಬರುತ್ತದೆ. ಮುಂಬರುವ ಸಾಹಿತ್ಯಕ, ಸಾಮಾಜಿಕ ಪರಂಪರೆಗೆ ಇದು ಒಂದು ಭದ್ರವಾದ ಬುನಾದಿಯಾದದ್ದು ಆಶ್ಚರ್ಯವಲ್ಲ.

ಈಗ ಇನ್ನೊಂದು ಕವಿತೆ : 'ಕಾರಿ ಹೆಗ್ಗಡೆಯ ಮಗಳು.'

ಮುತ್ತಿಕೊಂಡು, ನೆತ್ತರು ಹರಿಸಲು ಒತ್ತರಿಸಿ ಬರುತ್ತಿರುವ ತಂದೆ ಒಂದೆಡೆ : ನೊರೆಗಪೆದೆದ್ದು ಕುದಿದು ಅರಚುವ ಕಡಲದೆವ್ವ ಇನ್ನೊಂದೆಡೆ; ನಡುವೆ, ತೊಂಡು ತೆರೆಗಳ ಮುಸುಕಲ್ಲಿ ಮುಳುಗಿ ಏಳುವ ಮಗಳು. ದೃಶ್ಯ ಕಂಡು, ಮುಳಿಸು ಕರಗಿ ಅತ್ತ ತಂದೆ, ಮರಳು ಮರಳು ಮಗಳೇ ಎಂದ. ಉತ್ತರ ರೂಪವಾಗಿ, ಮಗಳು, ಒಂದು ಕೈಯಿಂದ ತಾನು ನಂಬಿದ ನಲ್ಲನನ್ನು ಆಸರೆಯಾಗಿ ತಬ್ಬಿಕೊಂಡರೆ, ಇನ್ನೊಂದು ಕೈಯನ್ನು ಇನ್ನೊಂದು ಬಗೆಯ ಆಸರೆಗಾಗಿ ತಂದೆಯತ್ತ ಚಾಚುವ ದೃಶ್ಯ ತುಂಬ ಹೃದಯಸ್ಪರ್ಶಿ ಚಿತ್ರವಾಗಿ ಮೂಡಿ ಬಂದಿದೆ.

ಇದು ಕುದಿದೆದ್ದ ತಂದೆ ತಣ್ಣಗಾಗಿ, ಕೊನೆಗೆ ಎಲ್ಲವೂ ಸುಖಾಂತವಾಗಬೇಕಾದ ಚಿತ್ರ. ಆದರೆ ತಡೆಯಬಲ್ಲ ಮುಳಿದ ಮುಗಿಲು, ತಡೆಯಲಾಗದ ಮುಳಿದ ತಂದೆಯನ್ನು ಕೊನೆಗೂ ಉಳಿಸುವದು, ಕೊನೆಯಿಲ್ಲದ ಕೊರಗಲ್ಲಿ ಮಾತ್ರ.

ಈ ಇಡೀ ಕವಿತೆಯಲ್ಲಿ ಮೂಡಿಬಂದ ಚಿತ್ರಕ ಶಕ್ತಿ, ಚಿತ್ರಣಕ್ಕೊಂದು ಹೊಸ ಹೊಳಪು ನೀಡಿದ ಭಾಷೆ ಇವೆರಡನ್ನೂ ತೊಡೆದು ನಿಂತ ಮಾನವೀಯ ಭಾವಗಳ ಏರಿಳಿವು, ಇವೆಲ್ಲವನ್ನು ಮಿಕ್ಕುವ ಪ್ರಕೃತಿಯ ಅದ್ಭುತತೆ, ರೌದ್ರತೆ, ಇವೆಲ್ಲವೂ ಒಂದು ಹೊಸ ಲೋಕವನ್ನೇ ನಮ್ಮೆದುರು ನಿಲ್ಲಿಸುತ್ತವೆ. ಈ ಎಲ್ಲದರ ಹಿನ್ನೆಲೆಯಲ್ಲಿಯೂ, ಕೊನೆಗೂ ಒತ್ತು ಬೀಳುವುದು ಮನುಷ್ಯನ ಅಂತಃಕರಣಕ್ಕೆ, ಆರ್ದ್ರತೆಗೆ, ಕ್ಷಮಾಗುಣಕ್ಕೆ ಎಂಬುದನ್ನು ಗಮನಿಸಬೇಕು. ಇಂಥ ಅನೇಕ ಮಾತುಗಳನ್ನು, ಇಲ್ಲಿಯ ಅನೇಕ ಕವಿತೆಗಳ ಹಿನ್ನೆಲೆಯಲ್ಲಿ ಹೇಳಬಹುದು ಎಂದೂ ನನಗೆ ಗೊತ್ತಿದೆ.

'ಇಂಗ್ಲಿಷ್ ಗೀತಗಳ' ಸಂದರ್ಭದಲ್ಲಿ ಹೇಳಬೇಕಾದ ಇನ್ನೊಂದು ಮಾತು: ಪ್ರತಿಭೆಯ ಅರಳುವಿಕೆಗೆ ಪ್ರಚೋದನೆಗಳೂ ವಿಚಿತ್ರವಾಗಿರುತ್ತವೆ ಎಂಬುದು. Sir Walter Scottನ 'Gathering Song' ಕನ್ನಡದಲ್ಲಿ 'ಕಾಳಗದ ಪದ'ವಾಗಿ ಕಾಣಿಸಿಕೊಳ್ಳಲು ಕೊಡವರ ಕುಣಿತವೊಂದು ಶ್ರೀ ಮನಸ್ಸಿನ ಮಧ್ಯ ನುಗ್ಗಬೇಕಾಯಿತು. ಪರಿಣಾಮ: Scottನ ಕವಿತೆಗೆ ಕೊಡವರ ವೀರಗಾಸೆಯ ಒಂದು ಹೊಸ ನಿಶಿತತೆಯೇ ಪ್ರಾಪ್ತವಾಯಿತು. ಕಾಳಗದ ಕಾಳೆ, ಹರೆ, ಕೊಂಬುಗಳ, ಕಣೆ, ಬಿಲ್ಲು, ಕುದುಗೋಲುಗಳ, ಬಿಚ್ಚುಗತ್ತಿಯ ರಥಂಳಗಳ ಲೋಕ; 'ಕಾಡ ಸೀಳುತ ಗಾಳಿ, ಬರುವಂತೆ, ಭಾಷೆಯಲ್ಲಿ, ಸಾಭಿನಯವಾಗಿ, ಮೂಡಿ ಬಂದ

ರೀತಿ ಅಂದಿನ ಕನ್ನಡಕ್ಕೆ ಒಂದು ಹೊಸ ಅನುಭವ.

ಪ್ರತಿಯೊಂದು ಪರಿಣತ ಪ್ರಯತ್ನದ ಹಿಂದೆಯೂ, ಅದನ್ನು ಮಿಕ್ಕುವ ಪರಮೋದ್ದೇಶ ಒಂದರ ಸಾಧ್ಯತೆ ಇರುತ್ತದೆ. 'ಇಂಗ್ಲಿಷ್ ಗೀತಗಳು' ಅನುವಾದ ಇದಕ್ಕೆ ಹೊರತಲ್ಲ. ಹೋಮರನನ್ನು ಕನ್ನಡಕ್ಕೆ ತರಬೇಕೆನ್ನುವ ತವಕ ಶ್ರೀ ಅವರಿಗಿತ್ತು. ಅದಕ್ಕಾಗಿ ನಡೆದ ಪ್ರಯೋಗಗಳ ಫಲ 'ಇಂಗ್ಲಿಷ್ ಗೀತಗಳು.' ಆದರೆ, ಈ ಪ್ರಯೋಗಗಳಷ್ಟೇ ಫಲ ಮಾತ್ರವಾಗಿ ಉಳಿದು, ಹೋಮರ್ ಕನ್ನಡಕ್ಕೆ ದೂರವೇ ಆಗಿ ಉಳಿದುಬಿಟ್ಟಿದ್ದು ಕನ್ನಡಿಗರ ದುರ್ದೈವ.

ಆದರೇನು; ಹೋಮರ್ ಕನ್ನಡಕ್ಕೆ ಬರಲಿ, ಬಾರದಿರಲಿ, ಹೋಮರನ ಬರುವನ್ನು ಸಾರಲು ಬಂದ ಈ 'ಇಂಗ್ಲಿಷ್ ಗೀತಗಳೇ' ಕನ್ನಡ ಸಂದರ್ಭದಲ್ಲಿ ಒಂದು ಹೊಸ ವ್ಯೋಮವನ್ನೇ ತೆರೆದದ್ದು ಕಡಿಮೆ ಶ್ರೀಮಂತ ಕೊಡುಗೆ ಏನಲ್ಲ.

## ೧೦

## ರಾವಬಹಾದ್ದೂರ/ಗ್ರಾಮಾಯಣ

ಸಮೂಹ ಬೇಡಿಕೆಗಳಿಗನುಗುಣವಾಗಿ ಬದಲಾಗುವ ವ್ಯಕ್ತಿಗಳ ಗೊತ್ತು ಗುರಿಗಳು, ವ್ಯಕ್ತಿಗಳ ನೀತಿ ನಡಾವಳಿಗಳಿಂದಾಗಿ ಬದಲಾಗುವ ಸಾಮೂಹಿಕ ಕ್ರಿಯೆ–ಪ್ರಕ್ರಿಯೆಗಳು: ಇವೆರಡರ ಬದಲಾವಣೆಗಳಿಂದಾಗಿ ಮೂಡಿ ಬರುವ ಅನಿವಾರ್ಯ ಒಳಿತು ಕೆಡಕುಗಳು, ಏಳು ಬೀಳುಗಳು: ಹೀಗೆ,–ಸಮಷ್ಟಿ ಮತ್ತು ವ್ಯಕ್ತಿ–ಯಾವುದನ್ನೂ ಯಾವುದರಿಂದಲೂ ಪ್ರತ್ಯೇಕಿಸಲಾಗದಂತೆ ಹುರಿಗೊಂಡು ನಿಂತ 'ಬದುಕು' ಮಾತ್ರವೇ ರಾವಬಹಾದ್ದೂರರ 'ಗ್ರಾಮಾಯಣ' ಕಾದಂಬರಿಯ ಮುಖ್ಯ ಪಾತ್ರವಾಗಿದೆ ಎನ್ನಬಹುದು. ಆದ್ದರಿಂದ ಒಂದರಿಂದ ಇನ್ನೊಂದನ್ನು ಅಲಾಯದವಾಗಿ ಪ್ರತ್ಯೇಕಿಸದೆ, ಒಂದರೊಟ್ಟಿಗಿನ ಇನ್ನೊಂದರ ಸಂಬಂಧವನ್ನು ಗಮನದಲ್ಲಿಟ್ಟುಕೊಂಡೇ ವಿವೇಚಿಸಿದರೆ ಮಾತ್ರವೇ ಪ್ರಾಯಶಃ, ಈ ಕಾದಂಬರಿಯ ಒಟ್ಟು ಮೌಲ್ಯವನ್ನು ಗ್ರಹಿಸಲು ಸಾಧ್ಯವಾಗುವುದೇನೋ.

ಇಲ್ಲಿಯ ಒಂದು ಇಡಿಯ ಹಳ್ಳಿಗೆ–ಪಾದಳ್ಳಿಗೆ ಅಭಿಮಾನದ ಕೇಂದ್ರವಾದ ಜಹಾಗೀರದಾರರ ವಾಡೆ, ಧಾರ್ಮಿಕ ಕೇಂದ್ರವಾದ ಮಠ, ಪೋಷಕ ಕೇಂದ್ರವಾದ ಗೌಡರ ಮನೆತನ, ಹೊರನೋಟಕ್ಕೆ ಎಲ್ಲವನ್ನೂ ಅತ್ಯಂತ ವ್ಯವಸ್ಥಿತ ರೀತಿಯಲ್ಲಿಟ್ಟ ಸಾಮಾಜಿಕ ಕಟ್ಟುಪಾಡುಗಳ, ನೀತಿ ನಡಾವಳಿಗಳು, ಸಂಗತಿ ಸಂಪ್ರದಾಯುಗಳು ಹೀಗೆಲ್ಲ ಇದ್ದೂ ಇಡಿಯ ಪಾದಳ್ಳಿಯ ಒಂದು ಮಹಾ ದುರಂತಕ್ಕೆ ಕಾರಣವೇನು ಎನ್ನುವ ಪ್ರಶ್ನೆಯೊಂದಿಗೇ ಈ ಕಾದಂಬರಿಯ, ಇಲ್ಲಿಯ ಬದುಕಿನ ಒಳ ಪದರುಗಳನ್ನು ಅರ್ಥ ಮಾಡಿಕೊಳ್ಳಬಹುದು.

ಈ ಕಾದಂಬರಿ ಆರಂಭವಾಗುವುದು ಸವತಿಯರಿಬ್ಬರ ಅಂತಃಕಲಹದಿಂದ ಮತ್ತು ಕೊನೆಗೊಳ್ಳುವುದು ಇಡೀ ಹಳ್ಳಿಯ ಒಂದು ಮಹಾ ದುರಂತದಿಂದ.

ಹೊರ ನೋಟಕ್ಕೆ, ಆರಂಭದ ಈ ಅಂತಃಕಲಹ ಕೇವಲ ಸವತಿಯರಿಬ್ಬರ ನಡುವಿನ ಕಲಹದಂತೆ ಕಂಡರೂ ಅದು ಜಹಾಗೀರದಾರರ ವಾಡೆಗೆ ಸಂಬಂಧಿಸಿದ್ದರಿಂದ, ಮತ್ತು ವಾಡೆ ಹಾಗೂ ಹಳ್ಳಿಯ ಸಾಮಾಜಿಕ ಬದುಕು ಇವು ಒಂದರೊಳಗೊಂದು ಹಾಸು ಹೊಕ್ಕಾಗಿರುವುದರಿಂದ, ವಾಡೆಯ ಕಲಹದ ಏರಿಳಿವುಗಳೆಲ್ಲದರ ಪರಿಣಾಮ ಇಡಿಯ ಹಳ್ಳಿಯ ಮೇಲೆ ಆಗಿಯೇ ಆಗುತ್ತದೆ. ಪರೋಕ್ಷವಾಗಿ ಹಳ್ಳಿಯಲ್ಲಿ ಮತಭೇದಗಳೇಳುತ್ತವೆ. ಈ ಮತಭೇದಗಳೇ ಮುಂದೆ ಹಳ್ಳಿಯ ಧಾರ್ಮಿಕ ಕೇಂದ್ರವಾದ ಮಠ, ಮತ್ತು ಪೋಷಕ ಕೇಂದ್ರವಾದ ಗೌಡರ ಮನೆತನ ಇವುಗಳ ಸಾಮುದಾಯಿಕ ವಜನುಗಳಿಂದಾಗಿ ಮತ್ತು ರಾಜಕೀಯುಗಳಿಂದಾಗಿ, ಬಣಗಳೂ ಆಗಿ ಬೆಳೆದು ಪರಸ್ಪರ ಕತ್ತಿ ಹಿರಿಯುವದರಿಂದ ಅದರ ದುಷ್ಪರಿಣಾಮವೂ ಹಳ್ಳಿಯ ಮೇಲೆ ಆಗುತ್ತದೆ.

ಇವೆಲ್ಲದರ ಮೇಲೆ ಕಳಸವಿಟ್ಟಂತೆ, ಒಂದು ಕ್ರಮವಾದ ಹಂತದಲ್ಲಿ ಗುರುತಿಸಿದರೆ; ವಾಡೆ, ಮಠ ಮತ್ತು ಗೌಡರ ಮನೆತನ ಈ ಮೂರೂ ಸ್ಥಳಗಳ ಗುರುತರ ಜಾಗೆಗಳಲ್ಲಿ ಅಯೋಗ್ಯರು ಬಂದು ಅಧಿಕಾರ ವಹಿಸಿಕೊಳ್ಳುವುದರಿಂದಲೇ ಮೂರೂ ಮೂರಾಬಟ್ಟೆಯಾಗುತ್ತವೆ. ಎಂತಲೇ ಈ ಮೂರೂ ಸ್ಥಳಗಳ ಆಗುಹೋಗುಗಳನ್ನು

ಆಶ್ರಯಿಸಿದ ಹಳ್ಳಿಯ ಬದುಕೂ ಮೂರಾಬಟ್ಟೆ-ಯಾಗುತ್ತದೆ.

ಮಠ ಇಲ್ಲಿಯ ಒಂದು ಸಾಮುದಾಯಿಕ ಶ್ರದ್ಧಾಕೇಂದ್ರ. ಇಂಥಲ್ಲಿಯ ಅವ್ಯವಹಾರ-ಗಳಿಂದಾಗಿ ತಮ್ಮ ಶ್ರದ್ಧೆಗೆ ಧಕ್ಕೆ ತಗುಲಿದಾಗ, ಕೆಲವಾದರೂ ತಮ್ಮ ನೈತಿಕ ಆಸರೆಯನ್ನು ಕಂಡುಕೊಳ್ಳುವುದು, ಸ್ವಾಭಾವಿಕವಾಗಿಯೇ ಬಾಳಾಚಾರ್ಯರಂಥವರಲ್ಲಿ.

ಬಾಳಾಚಾರ್ಯರಂಥವರ ಪ್ರವೃತ್ತಿ ಒಂದು ಮೌಲ್ಯವಾಗುವುದು ಅವರ ನಿಲುವಿನ ಹಿಂದಿರುವ ಒಂದು ನಿಸ್ಪೃಹತೆಯಿಂದಾಗಿ ಎಂಬುದನ್ನು ನೆನಪಿಡಬೇಕು. ಹಾಗೆಯೇ, ಹಳ್ಳಿಯ ಕೆಲವರಾದರೂ, ಪಡದಯ್ಯನ ಮಾತುಗಳಲ್ಲಿ ವಿಶ್ವಾಸವಿಟ್ಟು ಆತ ಹೇಳಿದಂತೆ ಕೇಳುವುದು, ಅವರು ಮಠದ ಗದ್ದುಗೆಯ ಮೇಲಿಟ್ಟ ನಂಬುಗೆಯಿಂದಲೇ ವಿನಾ ಪಡದಯ್ಯನ ಮೇಲಿನ ವೈಯಕ್ತಿಕ ವಿಶ್ವಾಸ-ದಿಂದಾಗಿ ಅಲ್ಲ ಎಂಬುದನ್ನೂ ನೆನಪಿಡಬೇಕು.

ಇಲ್ಲಿ ಇನ್ನೊಂದು ಮುಖ್ಯ ಮಾತನ್ನೂ ಗಮನಿಸಬೇಕು. ಈ ಹಿಂದೆ, ಅನೇಕ ಸಲ, ಅನೇಕ ಬಗೆಗಳಲ್ಲಿ, ಲಂಚ ಸ್ವೀಕಾರ, ಗುನ್ಹೆ ಛಪಾವಣೆ ಇತ್ಯಾದಿಗಳಲ್ಲಿ ಭಾಗವಹಿಸಿದವರೇ ಆಗಿದ್ದರೂ, ಬಾಳಾಚಾರ್ಯರ ಧ್ವನಿಗೆ ಬೆಲೆ ಬಂದುದರ ಹಿನ್ನೆಲೆಯನ್ನೂ ಗಮನಿಸಬೇಕು. ಒಂದು ಇಡಿಯ ಹಳ್ಳಿಗೆ– ಪಾದಳ್ಳಿಗೆ– 'ನೈತಿಕ ಧುರೀಣ'ನಾಗ ಬೇಕಾಗಿದ್ದ ಮಠದ ವ್ಯಕ್ತಿಯೊಬ್ಬ, ಕೇವಲ ಹಳ್ಳಿಯ 'ಬಣ' ಒಂದರ ಖಳನಾಯಕನಾಗುವುದ ರಿಂದಲೇ ಬಾಳಾಚಾರ್ಯರಂಥವರ ನೈತಿಕ ನಿಲುವಿಗೆ ವಿಶೇಷ ತೂಕ ಪ್ರಾಪ್ತವಾಗುತ್ತದೆ ಎಂಬುದೇ ಆ ಅಂಶ.

ಆದರೆ, ಯಾವುದೇ ಸಾಮಾಜಿಕ ವ್ಯವಸ್ಥೆ ಯಲ್ಲೂ ಸಮಷ್ಟಿ ಮೊದಲು ಮತ್ತು ವ್ಯಕ್ತಿ ಅನಂತರ. ಎಂತಲೇ ಪರಸ್ಪರ ಪೋಷಿಸುವ ಗೌಡರು ಮತ್ತು ಬಾಳಾಚಾರ್ಯರು ಒಟ್ಟೊಟ್ಟಿಗೆ ಇರುವ ವರೆಗೆ ಅವರ ಮಾತುಗಳನ್ನು ಗೌರವಿಸುವ ಜನ, ಮುಂದೆ ಗೌಡರ ನಿರ್ಗಮನದ ನಂತರ ಬಾಳಾಚಾರ್ಯರನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳು-ವುದಿಲ್ಲ. ಒಂದು ಹಂತದಲ್ಲಿ ಅವರ ಅವಮಾನ ಮಾಡುವುದಕ್ಕೂ ಹೇಸುವುದಿಲ್ಲ. ಬಾಳಾಚಾ-ರ್ಯರೂ ಬೆಲೆ ಕಳೆದುಕೊಳ್ಳುತ್ತಾರೆ.

ಮೇಲ್ಕಂಡಂತಹ ತಿರುವುಗಳಿಗೆ ಇನ್ನೊಂದು ಮಹತ್ವದ ಮುಖವಿರುವುದನ್ನು ಇಲ್ಲಿ ನೋಡ-ಬೇಕು, ಒಂದು ದೃಷ್ಟಿಯಿಂದ ಇಲ್ಲಿ ಮಂಡಿತವಾ ಗುವ, ಪ್ರತಿಪಾದಿತವಾಗುವ, ಮೌಲ್ಯಗಳೆಲ್ಲ 'ಉಳ್ಳವರ' ಮೌಲ್ಯಗಳೇ ಆಗಿವೆ. ಎಂತಲೇ ಯಾವುದಕ್ಕೂ ಈ 'ಉಳ್ಳವರ'ನ್ನೇ ಆಶ್ರಯಿಸುವ ಕೆಳ ಸ್ತರದ ಜನಗಳಿಗೆ ಈ ಮೌಲ್ಯಗಳಿಗೆ ಅರ್ಥವೇ ಕಾಣಿಸುವುದಿಲ್ಲ. ಎಂತಲೇ, ಪಡದಯ್ಯನ ಎಲ್ಲ ಕೃತ್ಯಗಳಿಗೂ ಬೆಂಬಲವೀಯುವವರು ಈ ಜನರೇ ಎಂಬುದನ್ನು ನೋಡಬೇಕು. ಒಂದು ವರ್ಗೀಕೃತ ಸಮಾಜ ಉಳ್ಳವರು ಮತ್ತು ಇಲ್ಲದಿರುವವರನ್ನು ಭಿನ್ನವಾಗಿ ತೂಗಿ ನೋಡುವ ಸಮಾಜ, ಭಿನ್ನವಾಗಿ ಪೋಷಿಸುವ ಸಮಾಜ ಇಂತಹ ದುರಂತವನ್ನು ಎದುರಿಸುವುದು ಅನಿವಾರ್ಯವೇ. ನೆಲೆ ನೆಲ ಎರಡೂ ಇಲ್ಲದವರು ಎಲ್ಲಿಯುವರೆಗೆ ಇರುತ್ತಾರೋ ಅಲ್ಲಿಯವರೆಗೆ ಸರ್ವರಿಗೂ ಸಾಮುದಾಯಿಕ ಎನ್ನಬಹುದಾದ 'ಮೌಲ್ಯ'ಗಳ ಅಸ್ತಿತ್ವವೂ ಅಸಾಧ್ಯ ಎಂಬುದನ್ನು ಈ ಕಾದಂಬರಿ ಹೇಳುತ್ತಿರಬಹುದು.

ಇಲ್ಲಿ ಇನ್ನೊಂದು ಮಾತು: ಈ ಮೇಲ್ಕಂಡ ಅಂಶದಿಂದಾಗಿ ಹೇಳುವುದಾದರೆ, ಭೂಮಿ ಇದ್ದವರಿಗೆ ಮಾತ್ರ ಭೂಮಿಯ ಬೆಲೆ ಗೊತ್ತು; ಭೂಮಿಯ ಗೌರವ ಗೊತ್ತು. ಅದು ಇಲ್ಲದವರಿಗೆ ಯಾವುದೂ ಇಲ್ಲ. ಎಂತಲೇ ಭೂಮಿ ಇಲ್ಲದವರೇ ಒಮ್ಮೆ ಬಿತ್ತಿದ ಹೊಲವನ್ನು ಹರಗಿ ಕಬಜಾ ಪಡೆಯಲು ಸಿದ್ಧರಾಗುತ್ತಾರೆ. ಒಂದು ನಂಬಿಕೆಗೆ ಒಂದು ಸಾಮೂಹಿಕ 'ಮೌಲ್ಯ'ದ ಸ್ವರೂಪ ಬರಬೇಕಾದರೆ, ಅದು ಸಮಾಜದ ಎಲ್ಲ ಸ್ತರ ಗಳಿಂದಲೂ ಸ್ವೀಕೃತವಾಗಿರಬೇಕು. ಹಾಗೆ ಸ್ವೀಕೃತ ವಾಗಿರಲು ಸಮಾಜದಲ್ಲಿ ಸಕಲರಿಗೂ ಸಮಾನ ಪಾಲುಗಳಿರಬೇಕು. ಹಾಗಿಲ್ಲದೇ ಹೋದಲ್ಲಿ, ಭೂಮಿಯ ಮೇಲಿನ ಗೌರವಾದಿಗಳ ಮಾತು ಕೇವಲ ಕೆಲವರ ಅನುಕೂಲೀ ವಾದವಾಗಿ, ಪಾದಳ್ಳಿ ಯಂತಹ ದುರಂತಕ್ಕೆ ದಾರಿಯಾಗುವುದೇ ಅನಿವಾರ್ಯವಾಗುತ್ತದೆ.

ಇಲ್ಲಿ ಇನ್ನೊಂದು ಮಾತನ್ನು ನೋಡಬೇಕು. ಬಾಳಾಚಾರ್ಯರು ತಮ್ಮ ಬೆಲೆಯನ್ನು ಹೆಚ್ಚಿಸಿ

ಕೊಳ್ಳುವುದು, ಮೇಲೆ ಕಾಣಿಸಿದಂತಹ 'ಮೌಲ್ಯ'ಗಳ ಪ್ರತಿಪಾದನೆಯಿಂದಲ್ಲ, ಆದರೆ ಅವರಲ್ಲಿಯ ಮಾನವೀಯತೆಯಿಂದಾಗಿ ಎಂಬುದು. ಎಷ್ಟೋ ಸಲ ಅವರ ಮಾನವೀಯತೆ, ಅವರ ಕರ್ಮಠತನವನ್ನೂ ಮೀರಿ ಮುಂದುವರೆಯುತ್ತದೆ ಎಂಬುದನ್ನು ಗಮನಿಸಬೇಕು. ಉದಾ: ದಾದನನ್ನು, ಒಂದು ಸಂದರ್ಭದಲ್ಲಿ ಆತನ ಕೆರ ಸಹಿತವಾಗಿ ಆತನನ್ನು ತಮ್ಮ ದೇವರ ಮನೆಯಲ್ಲಿ ಬಚ್ಚಿಟ್ಟ ಪ್ರಸಂಗ ಇಲ್ಲಿ ಉಲ್ಲೇಖಾರ್ಹ. ಹಾಗೆಯೇ ಚಿಮಣಾಳ ಕೂಸನ್ನು ತಮ್ಮ ಮನೆಗೇ ಒಯ್ಯುವಾಗಿನ ಸಂದರ್ಭ ಕೂಡ.

ಆದರೆ ಇಂಥ ವೈಯಕ್ತಿಕ ನಿಲುವುಗಳ ನೆಲೆ ಮತ್ತು ಮಿತಿ ಸ್ವತಃ ಆಚಾರ್ಯರಿಗೆ ಗೊತ್ತು. ಎಂತಲೇ, ಅವರೂ ಕೊನೆಗೆ ಕೈ ಸೋಲುತ್ತಾರೆ. ಪ್ರವಾಹ ಎದುರು ಈಜುವುದು ವ್ಯರ್ಥ ಎಂದು ಹೇಳುತ್ತಾರೆ.

ಇದಕ್ಕೆ ಕಾರಣವಿದೆ. ಅಂತಃಕರಣ ಸೂಕ್ಷ್ಮ-ವಾದಷ್ಟೂ ಆವರಣದ ಭದ್ರತೆಯ ಆವಶ್ಯಕತೆ ಅದಕ್ಕೆ ಎಂದಿಗಿಂತಲೂ ಹೆಚ್ಚಾಗುತ್ತದೆ. ಆದ್ದ-ರಿಂದ, ಆವರಣದ ಆಸರೆ ತಪ್ಪಿದ ಅಂತಃಕರಣ ಗಾಳಿಗೆ ಒಡ್ಡಿದ ದೀಪವಾಗುತ್ತದೆ. ಎಂತಲೇ; ಗೌಡರಂಥವರ ಭದ್ರ ಆಸರೆ ತಪ್ಪಿದ ಬಾಳಾಚಾರ್ಯ ರಂಥವರ ಅಂತಃಕರಣ ಕೂಡ ಕರ್ಪೂರದಂತೆ ಸುಮ್ಮನೆ ಉರಿದುಹೋಗಿಬಿಡುತ್ತದೆ.

ಅನೇಕ ಸಂಗತಿಗಳು ತುಂಬ ಸಮರ್ಥನೀಯ ರೀತಿಯಲ್ಲಿ ಇಲ್ಲಿ ಸಾಂಕೇತಿಕವಾಗಿ ಕಾರ್ಯ ನಿರ್ವಹಿಸುತ್ತವೆ. ಊರಲ್ಲಿ, ಸಾಮೂಹಿಕವಾಗಿ ಕಾಲರಾ ಬಂದು ಎಲ್ಲರೂ ಸಾಯುತ್ತಿರುವಾಗ, ಬಾಳಾಚಾರ್ಯರು ಎಲ್ಲರಿಗೂ ಚಕ್ರಾಣಿ ಬೇರನ್ನು ತೇಯ್ದು ಕೊಡುತ್ತಿರುತ್ತಾರೆ. ಎಲ್ಲರಿಗೂ ಕೊಟ್ಟು, ಕೊನೆಗೆ ಉಳಿದ ಚೂರನ್ನು ಕೂಡ ಮಾದರ ಚೆನ್ನನಿಗೆ ಕೊಟ್ಟನಂತರವೇ ಅವರಿಗೆ ಗೊತ್ತಾಗುತ್ತದೆ, ಊರ ಗೌಡರು ಕೂಡ ಕಾಲರಾದಿಂದ ಪೀಡಿತರಾಗಿದ್ದಾರೆ ಎಂಬುದು. ಇಲ್ಲಿ ಬೇರು ತೀರುವುದು — ಅದು ಚಕ್ರಾಣಿ ಬೇರು ತೀರುವುದು — ಗೌಡರ ಮನೆತನದ ಬೇರು ಸಂಪುಷ್ಟಕ್ಕೆ ಬಂತು ಎಂಬುದರ ಸಂಕೇತವಷ್ಟೇ, ಕ್ರಮಶಃ ನಡೆದು ಬಂದ ಚಕ್ರ ನಿಂತುಹೋಗಿ, ಈ ಊರಿಗೆ ಸಂಬಂಧವೇ ಇಲ್ಲದ ಯಾರೋ ಒಬ್ಬ— ಬೇರೇ ಇಲ್ಲದ ಒಬ್ಬ— ಅಧಿಕಾರಕ್ಕೆ ಬರುವುದರ ಸಂಕೇತವೂ ಹೌದು ಅದು.

ಪಾದಳ್ಳಿಯ ದುರಂತಕ್ಕೆ ಇನ್ನೊಂದು ಕಾರಣ: ನ್ಯಾಯದಾನದಲ್ಲಿಯ ಅಸಮಾನತೆ. ಸಾಮಾಜಿಕ ಅನ್ಯಾಯ ಮತ್ತು ವೈಯಕ್ತಿಕ ದುಃಖ. ಇವೆರಡೂ ಒಂದೇ ಮೂಲದಿಂದ ಬಂದಾಗ, ಇವೆರಡಕ್ಕೂ ಉತ್ತರಗಳನ್ನು ಒಂದೇ ಮೊತ್ತದಲ್ಲಿ ಹುಡುಕ ಬೇಕಾಗುತ್ತದೆ. ಉದಾ: ಚಿಮಣಾಳ ಅವಮಾನದ ಪ್ರಸಂಗ ಮತ್ತು ನಾನಾನ ಮರಣದ ಘಟನೆ. ಆದರೆ ಇಲ್ಲಿ, ಸಾಮುದಾಯಿಕ ಪರಿಹಾರ ಮಾತ್ರವನ್ನು (ನೆನಪಿಡಿ: ಪರಿಹಾರ ಮಾತ್ರ, ನ್ಯಾಯವಲ್ಲ) ನೀಡಿ, ವೈಯಕ್ತಿಕ ದುಃಖವನ್ನು ಶಮನಿಸುವತ್ತ ಯಾರೂ ಗಮನವೀಯದ್ದರಿಂದ ಅದು ನಿರಂತರವಾಗಿ ಪ್ರವಹಿಸುತ್ತಲೇ ಇದ್ದು, ಕೊನೆಗೆ ಇಡಿಯ ಹಳ್ಳಿಯನ್ನೇ ಕೊಚ್ಚಿಕೊಂಡು ಹೋಗುವಷ್ಟು ಬಲಿಷ್ಠವಾಗುತ್ತದೆ ಎಂಬುದೂ ಅಷ್ಟೇ ಮುಖ್ಯ ಅಂಶ.

ಕೊನೆಯ ಮಾತು, ಊರಿಗೆ ಊರೇ ನಾಶ ವಾದರೂ, ಇಡಿಯ ವಿನಾಶದ ಆಟಕ್ಕೆ ಆರಂಭ ದಿಂದಲೂ ಮುಖ್ಯ ಗುರಿಯಾದ ದಾದಾ, ಕಾರಣಿಗನಾದ ಪಡದಪ್ಪ, ಸಿಗುವೆಡೆಗೆ ಕೈಯೊಡ್ಡುವ ಕರಿಯಪ್ಪ, ಅಸಹಾಯಕ ಲಕ್ಷ್ಮಣ, ಊರು ಸುಟ್ಟರೂ ಹೊರಗಿರುವ ಹನುಮ ಶೇಷಪ್ಪ, ಯಾರಿಗೋ ಹುಟ್ಟಿ ಹೇಗೋ ಉಳಿದು ಎಲ್ಲಿಯೋ ಬೆಳೆಯುವ ಚಿಮಣಾಳ ಕೂಸು, ಹೊಟ್ಟೆ ಕರೆ ಕೊಟ್ಟಂತೆ ವೇಷ ಕಟ್ಟುವ ಚೆನ್ನ, ಇವರಷ್ಟೇ ಈ ಎಲ್ಲ ದುರಂತದ ನಂತರವೂ ಉಳಿದುಕೊಳ್ಳುವುದರ ಅರ್ಥವೇನು? ಬಸಿರಲ್ಲಿಯ ಪಾದಳ್ಳಿಯ ಹೊಸ ಸೃಷ್ಟಿಯನ್ನು ಆವರಿಸು ವವರು ಇವರು ತಾನೇ? ಎಂದರೆ ಮತ್ತೆ ಅದೇ ಬಗೆಯ ಬದುಕೇ ಮರಕಳಿಸುವುದೇ? ಅದೇ ದ್ವೇಷ, ರಾಗ, ದುರಂತಗಳು ನಾಳೆಗಳಲ್ಲೂ ಕಾದಿವೆಯೇ? ಮತ್ತೆ ಮತ್ತೆ ಕೃಷ್ಣೆಯ ಪೂರವೇ ಇದಕ್ಕೆ ಉತ್ತರವಾಗಬೇಕೆ?

ಎಷ್ಟೆಲ್ಲ ರಾಮಾಯಣಗಳು ಉರುಳಿದರೂ ಉತ್ತರ ಉಳಿಯುವುದು ಉತ್ತರರಾಯಣದಲ್ಲಿ

ಮಾತ್ರ, ಹಾಗೆಯೇ; ಮೇಲಿನ ಎಲ್ಲರ ಜೊತೆಯಲ್ಲಿ, ಇಂದುಪುರದಲ್ಲಿ ಓದುತ್ತಿರುವ ಶಿವಯೋಗಿ ಸ್ವಾಮಿಗಳೂ ಇದ್ದಾರಲ್ಲವೆ? ಇಂದಿಲ್ಲ ನಾಳೆ ಇಲ್ಲಿ ಬಂದಾರಲ್ಲವೆ?

ಎಲ್ಲ ಕೆಟ್ಟದರ ಬದಿಯುಲ್ಲೂ ಅಷ್ಟೇ ಮೊತ್ತದ ಒಳ್ಳೆಯದೂ ತಳಕು ಹಾಕಿಕೊಂಡೇ ಇರುತ್ತದೆ.

ಸಾಂಕೇತಿಕವಾಗಿಯಾದರೂ, ಸಮತೂಕದಲ್ಲಿ ನೀಡಲಾದ ಸಂಯಮದ ಈ ಸಮದರ್ಶಿತ್ವ 'ಗ್ರಾಮಾಯಣ'ದ ಪಕ್ವತೆಗೆ ಒಂದು ತೂಕದ ಸಾಕ್ಷಿ.

## ೧೧

## ಆನಂದ/ಮಾಟಗಾತಿ

ಆನಂದರ— ಅಜ್ಜಂಪುರದ ಸೀತಾರಾಮರ— 'ಮಾಟಗಾತಿ ಮತ್ತು ಇತರ ಕಥೆಗಳು' ಮೊದಲು ಪ್ರಕಟವಾದದ್ದು ೧೯೩೪ರಲ್ಲಿ. ಈ ಸಂಗ್ರಹದಲ್ಲಿ ಒಟ್ಟು ಐದು ಕಥೆಗಳಿವೆ. ಇಲ್ಲಿಯ 'ಅಶ್ವಾರೋಹಿ' ಎಂಬ ಆಧಾರಿತ ಕಥೆಯೊಂದನ್ನು ಬಿಟ್ಟರೆ ಉಳಿದ ನಾಲ್ಕು ಆನಂದರ ಸ್ವತಂತ್ರ ರಚನೆಗಳು.

ಆದರೆ ಈ ನಾಲ್ಕು ಕಥೆಗಳಲ್ಲಿ ಉಲ್ಲೇಖಿಸಲೇ ಬೇಕಾದ ಕಥೆಗಳು ಎರಡು ಮಾತ್ರ. ಒಂದು: ನಾನು ಕೊಂದ ಹುಡುಗಿ, ಮತ್ತು ಇನ್ನೊಂದು, ಹೆಂಡತಿಯ ಕಾಗದ. ಈ ಎರಡೂ ಕಥೆಗಳು, ವಸ್ತುವಿನ ದೃಷ್ಟಿಯಿಂದ, ಕಥೆಗಾರಿಕೆಯ ದೃಷ್ಟಿಯಿಂದ, ಉದ್ದೇಶದ ದೃಷ್ಟಿಯಿಂದ, ಎಲ್ಲ ಬಗೆಗಳಿಂದಲೂ ಭಿನ್ನವಾದವುಗಳು. ಮತ್ತು, ಮುಖ್ಯವಾಗಿ, ಆನಂದರ ಬದುಕಿನ ದೃಷ್ಟಿಕೋನ ಮತ್ತು ಸಾಹಿತ್ಯೋದ್ದೇಶ ಕುರಿತಂತೆ ವಿಭಿನ್ನ ಮುಖಗಳನ್ನು ಮೂಡಿಸುವಂತಹವು.

'ನಾನು ಕೊಂದ ಹುಡುಗಿ' ನಮ್ಮ ದೇವದಾಸಿ ಪದ್ಧತಿಯ ಹಿನ್ನೆಲೆಯುಲ್ಲಿ ಬರೆಯಲಾದ ಕಥೆ. ಶಿಲ್ಪಗಳನ್ನು ಅಭ್ಯಸಿಸಲು ಮನೆಯಿಂದ ಹೊರಬಿದ್ದ ಅಭ್ಯಾಸಿಯೊಬ್ಬನಿಗೆ ಇಂತಹ, ದೇವದಾಸಿ ಹಿನ್ನೆಲೆಯ ಮುಗ್ಧೆಯೊಬ್ಬಳ ಸಂಪರ್ಕ ಬರುತ್ತದೆ. 'ಅಜ್ಞಾನದ ಪಾಪಕ್ಕೆ ದೇಹ ಮಾತ್ರ ಭಾಗಿಯಾದ' ಈ ಹೆಣ್ಣಿನ ಬಗ್ಗೆ ಆತನಿಗೆ ಅಪಾರ ಕನಿಕರ ಉಕ್ಕಿ ಬರುತ್ತದೆ. 'ಮದುವೆಯಾದ ಹೆಂಗಸಿನಲ್ಲಿ ಯಾವ ಕೃತ್ಯವನ್ನು ಅವಳು ಕೆಟ್ಟದು ಎಂದು ಹೇಳುವಳೋ ಆ ಕೃತ್ಯವನ್ನು ತನ್ನ ಜೀವನದ ಧರ್ಮ ಎಂದು ಅನುಸರಿಸುವ' ಅವಳು ಕಥಾನಾಯಕನಿಗೊಂದು ದಿಗ್ಭ್ರಮೆಯಾಗುತ್ತಾಳೆ. 'ಒಂದು ದಿನ, ಒಂದು ಕ್ಷಣದಲ್ಲಿ ಸಾಯುವ ಬದಲು, ಈಗ ದಿನದಿನವೂ, ಕ್ಷಣಕ್ಷಣವೂ, ಸ್ವಲ್ಪಸ್ವಲ್ಪವಾಗಿ ಸಾಯುತ್ತಿರುವಳಲ್ಲಾ!' ಎಂದು ಆತ ಸಂಕಟಪಟ್ಟುಕೊಳ್ಳುತ್ತಾನೆ. ಈ ಎಲ್ಲ ಭಾವಸಾಂದ್ರತೆಗಳನ್ನೇ, ತನ್ನ, ವಿಚಾರಗಳ ಪ್ರೇರಣೆಯೊಂದಿಗೆ ವಿವರಿಸುತ್ತ, ಆಕೆ ಮಾಡುತ್ತಿರುವ ಕೆಲಸ ಎಷ್ಟು ಹೇಯವಾದದ್ದೆಂದೂ ವಿವರಿಸುತ್ತಾನೆ. ಆಕೆ ಗೈಯ್ಯುತ್ತಿರುವ ಪಾಪವನ್ನು ಕುರಿತು ಆಕೆಗೆ ಮನದಟ್ಟು ಮಾಡಿಕೊಡುತ್ತಾನೆ. ಪರಿಣಾಮ ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಕೆಯ ಹೇಯ ಜೀವನ, ಹೇರಲಾದ ಹೇಯ ಜೀವನ ಕುರಿತು ಆ ವರೆಗೂ ಸಂಕಟಪಟ್ಟಿದ್ದ ಆತ, ಆಕೆಯ ಅಷ್ಟೇ ಹೇಯ ಮರಣ, ಪ್ರಾಯಶಃ ಹೇರಲಾದ ಹೇಯ ಮರಣ ಕುರಿತು ಇನ್ನಷ್ಟು ಸಂಕಟಪಡುತ್ತಾನೆ.

ಇಲ್ಲಿಯ ಕಥೆಗಳ ರೂಪರೇಷೆಗಳು, ಭಾವನೆಗಳ ಪರಿಳಿವುಗಳು, 'ಓದುಗನೊಬ್ಬನ ಊಹೆಯ ಚೌಕಟ್ಟಿನೊಳಗೇ ಬರುವಂತಹವಾದರೂ ಅವನ್ನು ಮಂಡಿಸಿದ ರೀತಿ ಮಾತ್ರ, ವಿಸ್ಮಯಕರ ರೀತಿಯಲ್ಲಿ ಮಾನವೀಯತೆಯನ್ನು ತೊಡೆಮುಕೊಂಡಿರುವಂತಹವು. ಎತ್ತಿಕೊಂಡ ಸಮಸ್ಯೆ ಕುರಿತ ಲೇಖಕನ ತಳಮಳ, ಅಂತಃಕರಣ, ಮಾನವೀಯ ನಿಲುವು ಇವು ಮೂರ್ತರೂಪವಾಗಿ ಓದುಗರನ್ನು ತಾಗುವ ಇಲ್ಲಿಯ ಬರವಣಿಗೆಯ ಮಾದರಿ ಆಗಿನ ಕನ್ನಡ ಸಂದರ್ಭದಲ್ಲಿಯೇ ಅಪೂರ್ವ ಎನಿಸುವಂತಹವು.

'ಓ ಹೆನ್ರಿ'ಯ ಕಥಾತಂತ್ರವನ್ನು ನೆನಪಿಗೆ ತರುವಂತಹ 'ಹೆಂಡತಿಯ ಕಾಗದ' ಹೆಚ್ಚು ಆಳಕ್ಕಿಳಿಯದ ಕಥೆಯಾದರೂ, ತನ್ನ ತೀವ್ರ ಲವಲವಿಕೆಯಿಂದ, ಹಿಡಿದಿಡುವ ಶೈಲಿ ಮಾತ್ರದಿಂದಲೇ ಮುಕ್ತಾಯದ ವರೆಗೂ ಜೀವದಿಂದಿರಬಲ್ಲ ಮಾದರಿಯದು.

ಆನಂದರ ಮೊದಲ ಗುಂಪಿನ ಕಥೆಗಳ– 'ಹೆಂಡತಿಯ ಕಾಗದ'ದಂತಹ ಕಥೆಗಳ— ವೈಶಿಷ್ಟ್ಯವೆಂದರೆ, ನವಿರಾದ ಹಾಸ್ಯ, ನಯವಾದ ಭಾವಲಹರಿಗಳು, ಮಿತವಾದ, ಲಘು ಹಾಸ್ಯದ ಮಾತು, ಕನಸುಗಾರಿಕೆಗೆ ಸಮೀಪವೆನ್ನಬಹುದಾದ ಬದುಕುಗಳ ಚಿತ್ರಣ, ಮೆಲುದನಿಯಲ್ಲಿ ಆಡಿಕೊಳ್ಳಬಹುದಾದ ಮಾತುಗಳು, ಲಘುವಾದ ಮುಕ್ತಾಯ ಇತ್ಯಾದಿ.

ಅವರ ಎರಡನೆಯ ಗುಂಪಿನ ಕಥೆಗಳು— 'ನಾನು ಕೊಂದ ಹುಡುಗಿ'ಯಂತಹ ಕಥೆಗಳು— ಮೇಲ್ಕಂಡ ವರ್ಗಕ್ಕೆ ವ್ಯತಿರಿಕ್ತವಾಗಿ, ತುಂಬ ಗಂಭೀರ ಸಮಸ್ಯೆಗಳನ್ನು ಆವರಿಸಿಕೊಂಡಿರುವಂತಹವು. ಚೋದ್ಯವೆಂದರೆ ಆನಂದರು, ತಮ್ಮ ಭಾಷೆಯ ಧಾಟಿಯನ್ನು ಕೂಡ ಕಥೆಯ ವಸ್ತುವಿಗೆ ತಕ್ಕಂತೆ ಗಂಭೀರವಾಗಿ ಬದಲಾಯಿಸಿಕೊಳ್ಳಬಲ್ಲರು ಎಂಬುದು. 'ನಾನು ಕೊಂದ ಹುಡುಗಿ' ಕಥೆಯ ಭಾಷೆ ಇದಕ್ಕೆ ಒಂದು ಉದಾಹರಣೆ. ಆದರೆ, ಹಾಗಿದ್ದೂ, ಗಾಂಭೀರ್ಯದ ನೆವದಲ್ಲಿ, ಭಾಷೆ ಪೆಡಸಾಗದೆ, ತನ್ನ ಪ್ರವಹನ ಗುಣವನ್ನು ಸಲೀಸಾಗಿಟ್ಟುಕೊಂಡಿರುವುದು ಇನ್ನೊಂದು ಚೋದ್ಯ.

ಆನಂದರ ಭಾಷೆ ಕುರಿತು, ಬರವಣಿಗೆಯ ಶೈಲಿ ಕುರಿತು ಅವರ ಭಾಷೆಯಲ್ಲಿಯೇ ಹೇಳುವುದಾದರೆ, ಅವರ ಬರವಣಿಗೆ, 'ನಾನು ಕೊಂದ ಹುಡುಗಿ' ಚೆನ್ನಮ್ಮನ ಮುಗುಳ್ನಗೆಯಂತಹದು. 'ಅದು, ಮೃದುವಾಗಿ ಅಲ್ಲಿ ಸುಳಿದು, ಇಲ್ಲಿ ಸುಳಿದು, ಚಿಗುರುಗಳಲ್ಲಿ ತೂರಿ, ಹೂಗೊಂಚಲನ್ನು ಹಾಯ್ದು, ಪರಿಮಳವನ್ನು ಹೊತ್ತು ತರುವ ತಂಗಾಳಿಯಂತೆ, ಹೃದಯದಲ್ಲಿ ಚಿಕ್ಕ ಚಿಕ್ಕ ತರಂಗಮಾಲೆಯನ್ನು ಹುಟ್ಟಿಸುವ ಸರಳವಾದ ಮುಗುಳ್ನಗೆ.'

ಆದರೆ, ಆನಂದರ ಎರಡನೆಯ ಗುಂಪಿನ ಕಥೆಗಗಳಲ್ಲಿ ಬರುವ ಸಾಮಾಜಿಕ ಕಳಕಳಿ ಮತ್ತು ಮುಗ್ಧತೆ ಹಾಗೂ ಮೌಢ್ಯಗಳನ್ನು ಕುರಿತಾದ ಕಳವಳ, ಒಂದು ದೃಷ್ಟಿಯಿಂದ ನಿಜಕ್ಕೂ ಅಚ್ಚರಿಯನ್ನು ತರುವಂತಹವು. ಏಕೆಂದರೆ, ಕೇವಲ ನವುರಿಗಾಗಿ ಹೆಸರಾದ ಆಗಿನ ಅನೇಕ ಬರಹಗಾರರಂತೆ, ಅಂತಹ ಕಥೆಗಳನ್ನೇ ಸ್ವತಃ ಬರೆದಿದ್ದರೂ ಅದರಲ್ಲಿಯೇ ಮುಳುಗಿ ಅಲ್ಪ ಸಂತೃಪ್ತರಾಗದೆ, ತಮ್ಮ ಸಾಮಾಜಿಕ ತಳಮಳಗಳನ್ನೂ, ಅನಿಸಿಕೆಗಳನ್ನೂ 'ನಾನು ಕೊಂದ ಹುಡುಗಿ'ಯಂತಹ ಕಥೆಗಳ ಮುಖಾಂತರ ವ್ಯಕ್ತಪಡಿಸಿದ್ದು.

ಬಹುಶಃ ಇಂಥ ಕಳಕಳಿಯುಕ್ತ ಸೋಪಜ್ಞತೆಯೇ ಇಂದಿಗೂ ಆನಂದರನ್ನು, ನಮ್ಮ ಮುಖ್ಯ ಕಥೆಗಾರಲ್ಲಿ ಒಬ್ಬರು ಎಂದು ಇತಿಹಾಸಕ್ಕೆ ಸೇರಿಸುವಂತೆ ಮಾಡಿರಬಹುದು. ✡



❋ ರೆಕ್ಕೆಗಳಿಲ್ಲದ ದ್ವಿಪಾದಿಯೇ ಮಾನವ –ಪ್ಲೇಟೋ

❋ ಮಾನವ ಸಾಮಾಜಿಕ ಪ್ರಾಣಿ –ಸೆನೆಕ

❋ ನಾಚುವ ಅಥವಾ ನಾಚಿಕೊಳ್ಳುವ ಆವಶ್ಯಕತೆಯುಳ್ಳ ಏಕೈಕ ಪ್ರಾಣಿ – ಮನುಷ್ಯ –ಮಾರ್ಕ್ ಟ್ವೇನ್

❋ ತನ್ನ ಅಂಗಗಳ ಸೇವೆಯಲ್ಲಿರುವ ಬುದ್ಧಿವಂತಿಕೆಯೇ ಮಾನವ –ಅಲ್ಡಸ್ ಹಕ್ಸ್ಲೀ

❋ 'ಎಂಟ್ರೊಪಿ'(Entropy)ಯನ್ನು ಕಡಿಮೆ ಮಾಡುವವನೇ ಮನುಷ್ಯ –ಭೌತಶಾಸ್ತ್ರಜ್ಞ

❋ ಇಂಗಾಲ ಪರಮಾಣುಗಳಿಂದಾದ ಪದಾರ್ಥವೇ ಮನುಷ್ಯ –ರಸಾಯನಶಾಸ್ತ್ರಜ್ಞ

❋ ನ್ಯೂಕ್ಲೀಕ್ ಆಮ್ಲ/ಎನ್‌ಜೈಮ್‌ಗಳ ವಿಕ್ರಿಯಾಣರಕ್ ಮನುಷ್ಯ –ಜೀವರಸಾಯನಶಾಸ್ತ್ರಜ್ಞ

(ಕೃಪೆ: ಸೈನ್ಸ್ ಡೈಜೆಸ್ಟ್)

–ಡಾ. ಸಿ. ಎಸ್. ಸುನಂದನ

ಡಾ. ವೈ. ಎಫ್.
ನೀಲಗುಂದ

# ಇಂಥ ಹಸುಗಳೂ ಉಂಟು

ಆಕಳು, ತುರು, ಗೋವು, ಕಾಮಧೇನು, ಕಲ್ಪತರು ಮುಂತಾಗಿ ಕರೆಯಲ್ಪಡುವ ಹಸು ಎಲ್ಲರಿಗೂ ಪರಿಚಯವಿರುವ ಸಭ್ಯ, ಸಾಕು ಪ್ರಾಣಿಗಳಲ್ಲೊಂದು. ಜಗತ್ತಿನಾದ್ಯಂತ ಹಸುವನ್ನು ಉಪಯುಕ್ತ ಪ್ರಾಣಿಯಾಗಿ ಸಾಕುತ್ತಾ ಬಂದಿದ್ದಾರೆ. ಹಸು ನಮ್ಮ ಧರ್ಮ, ಸಂಸ್ಕೃತಿ, ಜೀವನದಲ್ಲಿ ಹಾಸು ಹೊಕ್ಕಾಗಿ ಬೆರೆತಿದ್ದು, ಇದನ್ನು ಪವಿತ್ರಭಾವನೆಯಿಂದ ಕಾಣುತ್ತೇವೆ. ಪುರಾಣ ಪುಣ್ಯ ಕಥೆಗಳಲ್ಲಿ ಗೋವಿನ ಶ್ರೇಷ್ಠತೆಯನ್ನು ತೋರಿಸುವ ಸಂದರ್ಭಗಳು ಅನೇಕ.

ಕಾಡಿನಲ್ಲಿ ಹದಿನೇಳನೇ ಶತಮಾನದ ವರೆಗೆ, ಬಲಿಷ್ಠ ಕೊಂಬುಗಳ ಬೃಹತ್ ದೇಹೀ ಕಾಡು ದನಗಳು ಸ್ವೇಚ್ಛೆಯಿಂದ ತಿರುಗಾಡಿಕೊಂಡು ಜೀವಿಸುತ್ತಿದ್ದವು. ಹದಿನೆಂಟನೆಯ ಶತಕದ ಆದಿಯಿಂದ ಈ ಪ್ರಾಣಿಸಮುದಾಯ ವಿರಳವಾಗುತ್ತ ಕ್ರಮೇಣ ಇಲ್ಲದಂತಾಯಿತು. ಈ ಬೃಹತ್ ದೇಹದ ಕಾಡುವಾಸಿ ದನಗಳೇ ನಮ್ಮ ಇಂದಿನ ಹಸುವಿನ ಸಂತತಿಯ ಪೂರ್ವಜರು; ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಹಸುಗಳು ಎತ್ತರವಾಗಿದ್ದವು. ಎದ್ದು ನಿಂತು ಅವುಗಳ ಹಾಲನ್ನು ಕರೆಯಬೇಕಿತ್ತು. ಯುರೋಪಿನ ಕೆಲ ಭಾಗಗಳಲ್ಲಿ, ಹದಿನೆಂಟನೇ ಶತಮಾನದಲ್ಲಿ ಬಹು ಚಿಕ್ಕ ದೇಹದ, ಇಂದಿನ ಹಸುವಿನ ಕರುವಿನಷ್ಟೇ ಎತ್ತರದ ಕೆಲವು ತಳಿಯ ಹಸುಗಳು ಜೀವಿಸಿದ್ದವು ಎಂಬುದರ ಬಗ್ಗೆಯೂ ದಾಖಲೆಗಳವೆ.

ಮಾನವ ತನ್ನ ಸಾರ್ಥಕ್ಯೋಸ್ಕರ, ಅವುಗಳ ಹಾಲು, ಮಾಂಸ ಮತ್ತು ಚರ್ಮ ಮುಂತಾದವುಗಳನ್ನು ತನ್ನ ಉಪಯುಕ್ತತೆಗೆ ಬಳಸಿಕೊಳ್ಳಲು ಕಾಡಿನ ಹಸುವನ್ನು ಅನಾದಿಕಾಲದಿಂದ ಸಾಕಿ ಸಲಹುತ್ತಾ ನಾಡ ಪ್ರಾಣಿಯನ್ನಾಗಿ ಪಳಗಿಸಿಕೊಂಡಿದ್ದಾನೆ. ಇತಿಹಾಸಕಾರರ ಅಭಿಪ್ರಾಯದಂತೆ, ಸುಮಾರು ೮,೦೦೦ ವರ್ಷಗಳ ಹಿಂದಿನಿಂದಲೇ ಕಾಡ ಹಸುವನ್ನು ಸಾಧುಗೊಳಿಸಿ ಉಪಯೋಗ ಪಡೆಯುವ ಕಲೆ ನಮ್ಮ ಪೂರ್ವಜರಿಗೆ ಗೊತ್ತಿತ್ತು. ಹಸುವನ್ನು ಸಾಕು ಪ್ರಾಣಿಯನ್ನಾಗಿ ಬಳಸಿದವರಲ್ಲಿ ಭಾರತೀಯರೇ ಪ್ರಥಮರು. ಆರ್ಯರ ಕಾಲದಿಂದಲೂ ಹಸು ನಮ್ಮ ಜೀವನದಲ್ಲಿ ಬಹು ಮಹತ್ವದ ಸಾಕು ಪ್ರಾಣಿ. ಪಶು ಸಂಗೋಪನೆಯೇ ನಮ್ಮ ಪೂರ್ವಜರ ಮೂಲ ಉದ್ಯೋಗ ಹಾಗೂ ಜೀವನಾಧಾರವಾಗಿತ್ತು. ಕೃಷಿಯ ಜ್ಞಾನಕ್ಕಿಂತ ಮೊದಲೇ ಹಸು, ಆಡು, ಕುರಿ ಮುಂತಾದ ಉಪಯುಕ್ತ ಪ್ರಾಣಿಗಳನ್ನು ಸಾಕಿ, ಸಲಹಿ.

ಅವುಗಳ ಹಾಲು, ಮಾಂಸವನ್ನು ಆಹಾರದಂತೆಯೂ ಚರ್ಮ, ತುಪ್ಪಳಗಳನ್ನು ಹೊದಿಕೆ, ಬಟ್ಟೆಯಂತೆಯೂ ಉಪಯೋಗಿಸಲಾಗುತ್ತಿತ್ತು. ಮುಂದೆ ಕೃಷಿಯು ಕಲೆ ತಿಳಿಯುತ್ತ ಬಂದಂತೆ, ಮಾನವ ಹಸುವಿನ ಗಂಡು ಸಂತತಿ— ಹೋರಿಯನ್ನು ಹೊಲ ಉಳಲು, ಸಾರಿಗೆಯಂತೆ ಉಪಯೋಗಿಸಲಾರಂಭಿಸಿದ. ಹೀಗೆ ಹಸುಗಳು ನಮ್ಮ ಬಾಳಿನ ಮಹತ್ವದ ಸಂಗಾತಿಯಾಗಿ ಅನಾದಿ ಕಾಲದಿಂದಲೂ ಬೆಳೆದುಬಂದಿವೆ.

ಹಸುವಿನ ಅತಿ ಮುಖ್ಯ ಉಪಯುಕ್ತತೆ ಎಂದರೆ ಸಾಕಷ್ಟು ಪ್ರಮಾಣದಲ್ಲಿ ದೊರೆಯುವ ಅದರ ಹಾಲು. ಹಾಲನ್ನು ನೀಡುವುದು ಹಸುವಿನ ಸಹಜ ಸಾಮರ್ಥ್ಯ. ಹಸು ತನ್ನ ೨೦ ವರ್ಷದ ಜೀವನಾವಧಿಯಲ್ಲಿ ೧೨, ೧೩ ವರ್ಷಗಳ ವರೆಗೆ ಸತತವಾಗಿ ಹಾಲನ್ನು ನೀಡಬಲ್ಲದು. ಸಾಮಾನ್ಯವಾಗಿ ಹಸು ಒಂದು ಸಲಕ್ಕೆ ಒಂದೇ ಕರುವನ್ನು ಹಾಕಿದರೂ, ಒಂದೇ ಹೆರಿಗೆಯಲ್ಲಿ ಎರಡು ಇಲ್ಲವೆ ಮೂರು ಕರುಗಳನ್ನು ಹಾಕಿದ ಸಂದರ್ಭಗಳೂ ಉಂಟು. ಉತ್ತಮ ತಳಿಯ ಹಸು ತನ್ನ ಮೂರು ಇಲ್ಲವೆ ನಾಲ್ಕು ವರ್ಷ ವಯಸ್ಸಿನಲ್ಲಿ ೫೦೦-ಕಿಲೋದಿಂದ ಒಂದು ಟನ್ನಿನ ವರೆಗೂ ತೂಗುವ ದೇಹದಾರ್ಢ್ಯವನ್ನು ಹೊಂದಿರುತ್ತದೆ. ಸಮೃದ್ಧವಾಗಿ ಹಾಲನ್ನೀಯುವ ಉತ್ತಮ ತಳಿಯ ಎರಡು ಇಲ್ಲವೆ ಮೂರು ಹಸುಗಳಿದ್ದರೆ ಅವುಗಳ ಹಾಲು ಮಾರಿ ಬಂದ ಹಣದಿಂದ ಒಂದು ಕುಟುಂಬ ಸಂಪೂರ್ಣವಾಗಿ ಜೀವನ ಸಾಗಿಸಬಹುದು ಹಾಗೂ ಅವುಗಳ ಕರು-ಆಕಳು ಇಲ್ಲವೆ ಹೋರಿ-ಒಕ್ಕಲಿಗನಿಗೆ ಹೊಲದ ಕೆಲಸಕ್ಕೆ ಇಲ್ಲವೆ ಹಸುವಿನ ಸಂತತಿ ಬೆಳೆಸಲು ಉಪಯೋಗವಾಗುವುದರಿಂದ, ಹಸುವನ್ನು ಒಕ್ಕಲಿಗನ ಕುಟುಂಬದ ಹಿತರಕ್ಷಕ ಎಂದು ಕರೆಯಲಾಗುತ್ತದೆ. "ಹಸುವಿನ ಹಾಲು ನೀಡುವ ಸಾಮರ್ಥ್ಯ ಅದರ ನಾಲಿಗೆಯಲ್ಲಿದೆ" ಎಂಬ ಗಾದೆಯುಂಟು. ಇದು ಅಕ್ಷರಶಃ ಸತ್ಯ. ಚೆನ್ನಾಗಿ ತಿಂದು ತೇಗಿ ಪಚನಮಾಡಿಕೊಂಡಷ್ಟು ಹಸುವಿನ ಹಾಲು ನೀಡುವ ಸಾಮರ್ಥ್ಯ ಹೆಚ್ಚುತ್ತದೆ. ಹಸುವಿಗೆ ಕೊಡುವ ಆಹಾರದ ಮೊತ್ತ ಹಾಗೂ ಗುಣ ಮಟ್ಟ ಹಾಲನ್ನು ಹೆಚ್ಚಿಸುವಂತೆ, ಹಸುವನ್ನು ಸಾಕುವ ಅಥವಾ ಕಟ್ಟುವ ಕೊಟ್ಟಿಗೆಯ ವಾತಾವರಣವೂ ಹಸುವು ನೀಡುವ ಹಾಲಿನ ಪ್ರಮಾಣದ ಮೇಲೆ ಪ್ರಭಾವ ಬೀರುವದು ಎಂಬುದನ್ನು ಗಮನಿಸಬೇಕು. ಹಸುವನ್ನು ದೇವರು ಎಂದು ಪೂಜಿಸಿ ಕೊಂಡಾಡುತ್ತೇವೆಯೇ ಹೊರತು ಅವುಗಳಿಗೆ ಬೇಕಾದಷ್ಟು ಆಹಾರವನ್ನು ಕೊಡಬೇಕು ಎಂಬ ಕಲ್ಪನೆ ನಮಗಿಲ್ಲ. ಪಕ್ಕೆಲವು ಕಾಣುವಂತಹ ಅಶಕ್ತ ಹಸುಗಳು ನಮ್ಮಲ್ಲಿ ಎಷ್ಟೊಂದಿವೆ, ಅವುಗಳಿಂದ ದೊರೆಯುವ ಹಾಲಿನ ಗುಣಮಟ್ಟ ಎಂತಹದು? ಎಂಬುದರ ಕಲ್ಪನೆ ನಮಗಿಲ್ಲ. ಉಳಿದ ದೇಶಗಳ ಹಾಲಿನ ಬಳಕೆಯನ್ನು ಹೋಲಿಸಿದರೆ, ಪ್ರತಿಯೊಬ್ಬನ ದೈನಂದಿನ ಹಾಲಿನ ಬಳಕೆಯು ಅತಿ ಕನಿಷ್ಟವಾಗಿರುವದು ನಮ್ಮ ದೇಶದಲ್ಲಿಯೆ. ರಶಿಯಾದಲ್ಲಿ ಸಾಧಾರಣ ತಳಿಯ ಹಸು ದಿನಕ್ಕೆ ಸರಾಸರಿ ೧೫ ರಿಂದ ೨೦ ಲೀಟರ್ ಹಾಲನ್ನು ನೀಡಬಲ್ಲದು. ಉತ್ತಮ ರಾಸು ಇದರ ನಾಲ್ಕರಷ್ಟು ಅಂದರೆ ಸುಮಾರು ೮೦ ರಿಂದ ೯೦ ಲೀಟರ್ ಹಾಲನ್ನು, ವರ್ಷದಲ್ಲಿ ೨೮೦ ರಿಂದ ೩೨೦ ದಿನಗಳವರೆಗೆ ಉತ್ತಮ ಗುಣಮಟ್ಟದ ಹಾಲನ್ನೀಯುವವು. ನಮ್ಮ ಹಸುಗಳು ಸಾಧಾರಣವಾಗಿ ಅತಿ ಹೆಚ್ಚೆಂದರೆ ದಿನಕ್ಕೆ ಮುಂಜಾನೆ ಹಾಗೂ ಸಾಯಂಕಾಲ ಸೇರಿ ಕೇವಲ ೫ ರಿಂದ ೬ ಲೀಟರಿನಷ್ಟು ಹಾಲನ್ನು ಕೊಡಬಲ್ಲವು. ಜಗತ್ತಿನ ದೇಶವಾರು ದನಗಣತಿಯ ಮೇರೆಗೆ ದನಗಳ ಸಂಖ್ಯೆಯಲ್ಲಿ ಅಗ್ರಸ್ಥಾನ ನಮ್ಮ ದೇಶಕ್ಕಿದ್ದರೂ, ಹಾಲಿನ ಉತ್ಪಾದನೆಯಲ್ಲಿ ನಾವು ಹಿಂದಿದ್ದೇವೆ. ಹಾಲು ಸಂಪೂರ್ಣ ಆಹಾರ, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ, ಖವಾ, ಗಿಣ್ಣ ಮುಂತಾದ ಪದಾರ್ಥಗಳು ಪ್ರತಿಯೊಬ್ಬನ ದೇಹಕ್ಕೆ ಪೋಷಕಾಂಶ ನೀಡುವ ಘಟಕಗಳು. ಆದ್ದರಿಂದ ಹಾಲಿನ ಉತ್ಪಾದನೆಯನ್ನು ಹೆಚ್ಚಿಸುವದು ಇಂದಿನ ಅವಶ್ಯ

ಕತೆಗಳಲ್ಲೊಂದು. ಉತ್ತಮ ತಳಿಯ ಹೆಚ್ಚು ಹಾಲನ್ನೀಯುವ ರಾಸುಗಳು ದೇಶದ ಸಂಪತ್ತು.

ಹಸುವಿಗೆ ಆಹಾರದಷ್ಟೇ ಮುಖ್ಯವಾದದ್ದು ನೀರು. ಪ್ರತಿದಿನಕ್ಕೆ ಸುಮಾರು ೮೦-೧೩೦ ಲೀಟರಿನಷ್ಟು ನೀರು ಅದಕ್ಕೆ ಬೇಕು. ಸೊಪ್ಪು, ಸೆದ, ದಂಟು, ಒಣ ಹುಲ್ಲು, ತವಡು, ಮುಂತಾದ ಒಣ ಪದಾರ್ಥಗಳನ್ನು

ಪ್ರಯಾಗದಲ್ಲೊಮ್ಮೆ ಕೈವರ್ತರು ಮೀನು ಹಿಡಿಯಲೆಂದು ಗಂಗೆಯಲ್ಲಿ ಬಲೆ ಬೀಸಿದರು. ಬಲೆ ಭಾರವಾಯಿತು. ಮೇಲೆಳೆದರು. ಮೀನುಗಳೊಂದಿಗೆ ಚ್ಯವನ ಋಷಿಗಳೂ 'ಬಲೆಯಲ್ಲಿ ಸಿಕ್ಕಿಬಿದ್ದಿದ್ದರು. 'ಉದವಾಸ ವ್ರತ' ಹಿಡಿದ ಚ್ಯವನರು ಹನ್ನೆರಡು ವರ್ಷಗಳ ವರೆಗೆ ನೀರಿನಲ್ಲೇ ವಾಸಿಸುತ್ತಿದ್ದರು.

ಮೀನುಗಾರರು ತಾವು ಮಾಡಿದ ತಪ್ಪನ್ನು ದಯವಿಟ್ಟು ಕ್ಷಮಿಸಬೇಕೆಂದು ಚ್ಯವನರನ್ನು ಬೇಡಿಕೊಂಡರು. "ಈ ಪಾಪಕ್ಕೆ ಪ್ರಾಯಶ್ಚಿತ್ತವೇನು?" ಎಂದೂ ಮುನಿಯನ್ನು ಅವರು ಕೇಳಿದರು.

"ಇದರಲ್ಲಿ ನಿಮ್ಮ ತಪ್ಪೇನಿಲ್ಲ. ಮೀನು ಹಿಡಿಯುವುದು ನಿಮ್ಮ ವೃತ್ತಿ, ಕರ್ತವ್ಯ ಕೂಡ. ನಿಮ್ಮ ವೃತ್ತಿ ಕರ್ತವ್ಯವನ್ನು ನೀವು ಮಾಡಿದ್ದೀರಿ. ಬಲೆಯಿಂದ ತೆಗೆದದ್ದನ್ನೆಲ್ಲ ಹೇಗೆ ಮಾರುತ್ತೀರೊ, ಹಾಗೆಯೆ, ಮೀನುಗಳೊಂದಿಗೆ ನನ್ನನ್ನೂ ಮಾರಿಬಿಡಿ," ಎಂದರು ಚ್ಯವನರು.

"ಅಯ್ಯಯ್ಯೋ, ಮುನಿವರನನ್ನು ಮೀನುಗಳೊಂದಿಗೆ ಮಾರುವುದೆ? ಸಲ್ಲದು" ಎಂದುಕೊಂಡ ಮೀನುಗಾರರು ತಕ್ಷಣ ತಮ್ಮ ರಾಜನಾದ ನಹುಷನಲ್ಲಿಗೆ ಹೋದರು. ಈ ಸಂಕಟದಿಂದ ತಮ್ಮನ್ನು ಪಾರುಮಾಡಬೇಕೆಂದು ದೊರೆಯಲ್ಲಿ ಮೊರೆಯಿಟ್ಟರು.

ಧರ್ಮಭೀರುವಾದ ನಹುಷ ತನ್ನ ಗುರುಹಿರಿಯರು, ಮಂತ್ರಿ ಮುಂತಾದವರೊಂದಿಗೆ ಚ್ಯವನರಿದ್ದಲ್ಲಿಗೆ ಬಂದು, "ಪೂಜ್ಯರೆ, ನಾವು ಈ ಸಂದರ್ಭದಲ್ಲಿ ಏನು ಮಾಡಬೇಕು, ದಯವಿಟ್ಟು ಅಪ್ಪಣೆಯಾಗಬೇಕು." ಎಂದ.

"ಬಹು ಪ್ರಯಾಸದಿಂದ ಅವರು ಮೀನುಗಳೊಂದಿಗೆ ನನ್ನನ್ನೂ ಹಿಡಿದಿದ್ದಾರೆ. ಅವರ ಸಾಹಸ ವ್ಯರ್ಥವಾಗಬಾರದು.ನನಗೆ ಒಂದು ಬೆಲೆ ಕಟ್ಟಿ ಅಷ್ಟು ಹಣವನ್ನು ಈ ಮೀನುಗಾರರಿಗೆ ಕೊಡಿ," ಎಂದರು ಚ್ಯವನರು.

"ಪೂಜ್ಯರೆ, ತಮ್ಮಂಥವರಿಗೆ ಬೆಲೆ ಕಟ್ಟುವುದೆ? ಶಾಂತಂ ಪಾಪಂ" ಎಂದು ನಹುಷ ಮಹಾರಾಜ ಗೋಳಾಡಿದ. ಬಹಳ ಹೊತ್ತಿನವರೆಗೆ ಈ ಸಮಸ್ಯೆಯನ್ನು ಬಿಡಿಸಲು ಗುರುಹಿರಿಯರಾದಿಯಾಗಿ ಮಂತ್ರಿಗಳೊಂದಿಗೆ ಆತ ಚರ್ಚಿಸಿದ. ಕೊನೆಗೊಂದು ಉಪಾಯವನ್ನು ಗುರುಜನರಲ್ಲೊಬ್ಬ ಮಹಾರಾಜನಿಗೆ ಹೇಳಿದ, "ರಾಜನ್, ಚ್ಯವನರು ಮಾನವತೆಗೆ ಅತ್ಯುನ್ನತ ಉದಾಹರಣೆಯಾದವರು, ದೈವಸಮಾನರು, ತಪೋನಿಷ್ಠರು, ಗೋವಿನಂತೆ ಅಮೂಲ್ಯರು. ಆದ್ದರಿಂದ ಅವರಿಗೆ ಸರಿದೂಗುವ ಬೆಲೆ ಎಂದರೆ ಗೋವು ಮಾತ್ರ," ಎಂದು.

ಚ್ಯವನರೂ ಇದಕ್ಕೆ ಒಪ್ಪಿದರು. ನಹುಷ ಮಹಾರಾಜ ಮೀನುಗಾರರಿಗೆ ಗೋದಾನ ಮಾಡಿದ.

ಜಗಿದು ಜಗಿದು ತಿಂದು ಪಚನಮಾಡಿಕೊಳ್ಳಲು ಇಷ್ಟೊಂದು ಪ್ರಮಾಣದ ನೀರು ಹಸುವಿಗೆ ಅವಶ್ಯ. ನೀರು ಕುಡಿದಷ್ಟೂ ಹಸುವಿನ ಹಾಲು ಕೊಡುವ ಸಾಮರ್ಥ್ಯ ಹೆಚ್ಚುತ್ತದೆ. ಹಾಲು ಕರೆಯುವ ಮೊದಲು ಎರಡು ಮೂರು ತಾಸು ಹಸುವಿಗೆ ಸಾಕಷ್ಟು ನೀರನ್ನು ಕುಡಿಯಲು ಕೊಡುವುದರಿಂದ ಹಾಲಿನ ಪ್ರಮಾಣ ಹೆಚ್ಚುವುದು ಎಂದು ಕಂಡುಬಂದಿದೆ.

ಹಸುವಿನ ಕೊಟ್ಟಿಗೆ ಶಾಂತವಾಗಿರಬೇಕು. ಕೊಟ್ಟಿಗೆಯ ಸ್ಥಳಾವಕಾಶಕ್ಕನುಗುಣವಾಗಿ ಹಸುಗಳ ಸಂಖ್ಯೆ ಇರಬೇಕು. ಕಡಿಮೆ ಸ್ಥಳದಲ್ಲಿ ಬಹಳ ಹಸುಗಳನ್ನು ಕಟ್ಟುವುದರಿಂದ ಅವುಗಳಿಗೆ ಮಾನಸಿಕ ಹಿಂಸೆಯಾಗುತ್ತದೆ. ಹಸು ಶಾಂತ ವಾತಾವರಣವನ್ನು ಪ್ರೀತಿಸುವ ಪ್ರಾಣಿ. ಕೊಟ್ಟಿಗೆಯ ಸಮೀಪ ಯಾವುದೇ ಗದ್ದಲ, ಗಲಾಟೆಯಾಗುತ್ತಿದ್ದಲ್ಲಿ, ಅದರ ಪರಿಣಾಮ ನೇರವಾಗಿ ಹಸುವಿನ ಹಾಲಿನ ಉತ್ಪಾದನೆಯ ಮೇಲೆ ಆಗುತ್ತದೆ. ಹಸು ಬಲು ಮೃದು ಸ್ವಭಾವದ, ಸೂಕ್ಷ್ಮಗ್ರಾಹಿ ಪ್ರಾಣಿ. ಹಸುವನ್ನು ಒಂದು ಸ್ಥಳದಿಂದ ಬೇರೊಂದು ಸ್ಥಳಕ್ಕೆ ಬದಲಾಯಿಸಿದರೆ, ಇಲ್ಲವೆ ದಿನಾಲು ಹಾಲು ಕರೆಯುವ ವ್ಯಕ್ತಿ ಬದಲಾದರೆ, ಹಸು ಹಾಲನ್ನು ಕೊಡದೆ ಮೊಂಡಾಟ ಮಾಡುವುದು ಬಹು ಜನರಿಗೆ ಗೊತ್ತಿರುವ ಸಂಗತಿ.

ಹಸು ಬಣ್ಣಗಳನ್ನು ಗುರುತಿಸಲಾರದು, ಒಂದು ವೇಳೆ ಬಣ್ಣದ ಕಲ್ಪನೆ ಇದ್ದರೂ ಕೇವಲ ಬಿಳಿ ಬಣ್ಣವನ್ನು ಗುರುತಿಸಬಲ್ಲದು. ಹಸುವಿಗೆ ಉಳಿದ ಪ್ರಾಣಿಗಳಿಗೆ ಹೋಲಿಸಿದರೆ ಹಸುವಿನ ಘ್ರಾಣ ಶಕ್ತಿ ಕಡಿಮೆ. ಆದರೂ ತನ್ನ ಕರುವನ್ನು ಮೂಸಿ ನೋಡಿಗು ಗುರುತಿಸಬಲ್ಲದು. ಹುಲ್ಲನ್ನು ತಿನ್ನುವಾಗ ಹುಲ್ಲಿನ ಬೇರಿಗೆ ಅಂಟಿದ ಮಣ್ಣಿನಲ್ಲಿಯ ರಸಾಯನಿಕ ಗೊಬ್ಬರದಂಶ ಇರುವ ಹುಲ್ಲನ್ನು ಮೂಸಿ, ತಿನ್ನದೆ ಬಿಡಬಲ್ಲದು. ಹಸುವಿಗೆ ಉಳಿದ ಸಸ್ಯಾಹಾರಿ ಪ್ರಾಣಿಗಳಂತೆ ಲವಣಾಂಶ ಪ್ರಿಯವಾದರೂ ಉಪ್ಪು, ಹುಳಿ, ಒಗರು, ಹಾಗೂ ಸಿಹಿ ಪದಾರ್ಥಗಳನ್ನು ನೀಡಿದರೆ, ಅವುಗಳಲ್ಲಿ ಸಿಹಿ ಪದಾರ್ಥವನ್ನು ಆಯ್ಕೆ ಮಾಡುವುದು. ಅಷ್ಟೊಂದು ಚುರುಕು ಮತ್ತು ಚಾಕಚಾಕ್ಯತೆಯು ಪ್ರಾಣಿಯಲ್ಲದಿದ್ದರೂ, ೧.೫ ಮೀಟರ್ ಎತ್ತರದ ಬೇಲಿಯನ್ನು ಸಹಜವಾಗಿ ಜಿಗಿಯಬಲ್ಲದು. ಆಪತ್ತು ಬಂದರೆ ತಾಸಿಗೆ ೪೦ ಕಿಲೊಮೀಟರ್ ವೇಗದಿಂದಲೂ ಓಡಬಲ್ಲದು. ಹಸುವಿನ ಧ್ವನಿ ಏಕಪ್ರಕಾರವೆನಿಸಿದರೂ, ಧ್ವನಿಯಲ್ಲಿ ಹನ್ನೊಂದು ಪ್ರಕಾರದ ಧ್ವನಿ ತರಂಗಾಂತರ ವ್ಯತ್ಯಾಸಗಳಿವೆ. ಸಂಗೀತಕ್ಕೂ ಹಸು ತಲೆಹಾಕುತ್ತದೆ. ಸಂಗೀತದ ಧ್ವನಿ ಸರಿಯಾಗಿ ಕೇಳದಾದರೆ ಧ್ವನಿ ಬಂದ ದಿಕ್ಕಿನೆಡೆ ಕಿವಿಯನ್ನು ಹೊರಳಿಸಿ ಆಲಿಸುವುದು ಹಸುವಿನ ಸ್ವಭಾವ. ವರ್ತನೆಗಳನ್ನು ಅಭ್ಯಸಿಸಿದ ವಿಜ್ಞಾನಿಗಳು, ಪ್ರಾಯೋಗಿಕವಾಗಿ ಮೂರು ವಿಧ ಸಂಗೀತ ಸಂಜ್ಞೆಗಳನ್ನು ೪೦ ಹಸುಗಳಿಗೆ ಪ್ರತಿದಿನ ರೂಢಿಸಿ, ಆಯಾ ಸಂಜ್ಞೆಗೆ ರೂಢಿಯಾದ ಹಸುಗಳೇ, ಸಂಜ್ಞೆ ಕೇಳಿದೊಡನೆ, ಹಾಲನ್ನು ಕರೆಯುವ ಸ್ಥಾನಕ್ಕೆ ಬಂದವು. ನಂತರ ಹೀಗೆ ರೂಢಿಯಾದ ಹಸುಗಳಿಗೆ ಎರಡು ಮೂರು ವಿಧ ಮಿಶ್ರ ಸಂಜ್ಞೆಗಳನ್ನು ನೀಡಿದರೂ ಅವು ಕೇವಲ ತಮಗೆ ರೂಢಿಸಿದ ಸಂಜ್ಞೆಯನ್ನೇ ಗುರುತಿಸಿ ಸ್ಪಂದಿಸಿದವು. ಧ್ವನಿ ತರಂಗಗಳ ವ್ಯತ್ಯಾಸವನ್ನು ಗುರುತಿಸಬಲ್ಲ ಪರಿಜ್ಞಾನ ಹಸುಗಳಿಗಿದೆ.

ಹಸು ಸಾಧು ಹಾಗೂ ಉಪಯುಕ್ತ ಪ್ರಾಣಿಯಾಗಿರುವುದರಿಂದ ಹೆಚ್ಚು ಹಾಲನ್ನೀಯುವ ಇಚ್ಛಿತ ತಳಿಯನ್ನು ಹಾಗೂ ವಿವಿಧ ಗುಣ ಲಕ್ಷಣಗಳಿರುವ ಮಿಶ್ರ ತಳಿಯನ್ನು ವೃದ್ಧಿಗೊಳಿಸುವುದು ಇಂದಿನ ರಾಷ್ಟ್ರೀಯ ಅವಶ್ಯಕತೆ. ಮಿಶ್ರ ತಳಿಯನ್ನು ವೃದ್ಧಿಗೊಳಿಸುವ ಕಲೆಯನ್ನು ೧೮ನೇ ಶತಮಾನದ ಮಧ್ಯದಲ್ಲಿ ಪ್ರಥಮ ಬಾರಿಗೆ ಬ್ರಿಟನ್ನಿನ ಜೀವವಿಜ್ಞಾನಿಯಾದ ರಾಬರ್ಟ್ ಬ್ಯಾಕ್‌ವೆಲ್ ಎಂಬವರು ಬಳಕೆಯಲ್ಲಿ ತಂದರು. ಆಕರ್ಷಕ ಉಪಯುಕ್ತ ಗುಣ ಲಕ್ಷಣ

ಗಳಿರುವ ಹಸು ಹಾಗೂ ಅದರ ಸಮೀಪ ಸಂಬಂಧಿಯಾದ ತಳಿಯ ಹೋರಿಯ ಗರ್ಭಾದಾನದಿಂದ ಹುಟ್ಟಿದ ಹಸು ಸಂತತಿಯು ಇಚ್ಛಿತ ಶ್ರೇಷ್ಠ ಗುಣಗಳನ್ನು ಪಡೆದಿರುವುದರಿಂದ ಇಂತಹ ಗುಣಲಕ್ಷಣಗಳ ಹಸು ತಳಿಯ ಸಮೂಹವನ್ನು ವೃದ್ಧಿಗೊಳಿಸುವುದೇ ತಳಿ ಅಭಿವೃದ್ಧಿ ತಂತ್ರಜ್ಞಾನದ ಉದ್ದೇಶ. ಇಂದಿನ ವರೆಗೆ ಈ ಕಲೆಯಲ್ಲಿ ಅನೇಕ ಸುಧಾರಣೆಗಳಾಗಿದ್ದು ಹೆಚ್ಚು ಹಾಲನ್ನೀಯುವ, ಉತ್ತಮ ದೇಹಧಾರ್ಢ್ಯವಿರುವ, ಜೀವಿತದ ಬಹು ಕಾಲದ ವರೆಗೆ ಸಂತತಿಯನ್ನೀಯುವ ಹಸು ತಳಿಗಳನ್ನು ವೃದ್ಧಿಗೊಳಿಸಲಾಗಿದೆ. ಇಂದು ಜಗತ್ತಿನ ವಿವಿಧ ದೇಶಗಳಲ್ಲಿ ಆಯಾ ದೇಶಗಳ ನೆಲ, ಜಲ, ಹವಾಮಾನಕ್ಕೆ ಹೊಂದಿಕೊಳ್ಳಬಲ್ಲ ಸುಮಾರು ೯೬೦ ವಿವಿಧ ಪ್ರಕಾರದ ಹಸು ತಳಿಗಳು ಇವೆ. ಈ ಎಲ್ಲ ವಿವಿಧ ತಳಿಗಳನ್ನು ಮುಖ್ಯವಾಗಿ ನಾಲ್ಕು ಪ್ರಭೇದಗಳಾಗಿ ವಿಂಗಡಿಸಬಹುದು. ಯುರೋಪಿನ ಉದ್ದ ಕೊಂಬಿನ ಬಯಲು ಸಮತಲ ಪ್ರದೇಶದ ಹಸು, ಮಧ್ಯ ಏಶಿಯದ ಹಸು, ಯುರೋಪಿನ ಗಿಡ್ಡ ಕೊಂಬಿನ ಗುಡ್ಡಗಾಡು ಹಾಗೂ ಅರಣ್ಯ ಪ್ರದೇಶದ ಹಸು, ಹಾಗೂ ಎತ್ತರ ಇಣಿಲಿನ ದಕ್ಷಿಣ ಏಶಿಯ ಮತ್ತು ಉತ್ತರ ಆಫ್ರಿಕದ ಹಸು,

ಭಾರತದ ಹಸು ಗಿಡ್ಡ ಕೊಂಬಿನ ಸಾಧಾರಣ ದೇಹ ಗಾತ್ರದ ಮಧ್ಯ ಏಶಿಯ ಪ್ರಭೇದಕ್ಕೆ ಸೇರಿದ ತಳಿ ಈ ಮೂಲ ತಳಿಯಲ್ಲದೇ ಜರ್ಸಿ, ಹೊಲ್‌ಸ್ಟೈನ್ ಎಂಬ ಹೊಸ ತಳಿಗಳು ಭಾರತದಲ್ಲಿ ಹೆಚ್ಚು ಪ್ರಚಲಿತವಿವೆ. ಜಗತ್ತಿನ ದನಗಳ ಸಂಖ್ಯೆ ೨೦ ಕೋಟಿಗಿಂತ ಹೆಚ್ಚು ಎಂದು ಅಂದಾಜಿಸಲಾಗಿದ್ದು ಸರಾಸರಿಯಾಗಿ ಪ್ರತಿ ೨೩ ಜನರಿಗೆ ಒಂದು ಹಸು ಇದೆ. ಜಾಗತಿಕ ಆಹಾರ ಹಾಗೂ ಕೃಷಿ ಸಂಸ್ಥೆಯ ಪ್ರಕಟನೆಯ ಪ್ರಕಾರ ಪ್ರತಿಯೊಬ್ಬನಿಗೆ ವಾರ್ಷಿಕ ಹಾಲು ಹಾಗೂ ಹೈನದ ಆವಶ್ಯಕತೆ ೪೦೫ ಕಿಲೋದಷ್ಟು ಇದ್ದು, ಇಂದಿನ ಹಾಲಿನ ಉತ್ಪಾದನೆ ಮೇರೆಗೆ ಪ್ರತಿಯೊಬ್ಬನಿರೆ ಕೇವಲ ೯೫ ಕಿಲೋ ಹಾಲು ಮಾತ್ರ ಲಭ್ಯ. ಉರಲ್ಸ ವಿಭಾಗದ ರೋಶಿಯಾ ರಾಜ್ಯದ ಹಸು ಕೇಂದ್ರವು ವೃದ್ಧಿಗೊಳಿಸಿದ ಕಪ್ಪು ಹಾಗೂ ಬಿಳಿ ಬಣ್ಣದ ಪಟ್ಟಿಗಳಿರುವ 'ವೋಲ್ಗಾ' ತಳಿಯು ಅತೀ ಹೆಚ್ಚು ಹಾಲನ್ನೀಯುವ, ರಶಿಯದಲ್ಲಿಯ ಹಾಲಿನ ಉತ್ಪಾನೆಯಲ್ಲಿ ದಾಖಲೆ ಮಾಡಿದ ಹಸು. ದಿನಕ್ಕೆ ೮೫ ಲೀಟರಿನಷ್ಟು ಹಾಲು ನೀಡುವ ಈ ಹಸು ವರ್ಷದಲ್ಲಿ ೩೦೫ ದಿನಗಳ ವರೆಗೆ ೧೭೫೧೭ ಲೀಟರ್ ಹಾಲನ್ನು (ಕೊಬ್ಬಿನ ಅಂಶ ೪.೨%) ಕರೆದು ರಶಿಯದ ಹಸುಗಳಲ್ಲಿಯೇ ಪ್ರಥಮ ದಾಖಲೆಯನ್ನು ಸ್ಥಾಪಿಸಿದೆ. ಕ್ಯೂಬಾದ 'ಲಾ ವಿಕ್ಟೋರಿಯಾ' ಫಾರ್ಮಿನ 'ಉಬ್ರೇ ಬ್ಲಾಂಕಾ' ಎಂಬ ತಳಿಯ ಹಸು ಹಾಲಿನ ಉತ್ಪಾದನೆಯಲ್ಲಿ ಜಾಗತಿಕ ದಾಖಲೆಯನ್ನು ಸ್ಥಾಪಿಸಿದೆ. ಈ ಹಸು ದಿನಕ್ಕೆ ೯೫ ಲೀಟರಿನಂತೆ (ದಿನಕ್ಕೆ ಮೂರು ಸಲ ಹಾಲು ಕೊಡುವುದು), ವರ್ಷದಲ್ಲಿ ೩೦೫ ದಿನಗಳಲ್ಲಿ ಅಂದರೆ ಹತ್ತು ತಿಂಗಳುಗಳ ವರೆಗೆ ಸತತವಾಗಿ ೨೪,೯೬೮.೯ ಲೀಟರ್ ಹಾಲು ಕೊಟ್ಟು, ದಿನದ ಗರಿಷ್ಠ ಹಾಲು ನೀಡಿದ ದಾಖಲೆ ೧೧೦ ಲೀಟರ್ (ಕೊಬ್ಬಿನ ಅಂಶ ೩.೮%) ಇದೆ. ಈ ತಳಿಯು ಹೊಲ್‌ಸ್ಟೈನ್ ಹಾಗೂ ಬ್ರೆಬು ಬಳಿ ಹಸುಗಳ ಮಿಶ್ರ ತಳಿ. ನಮ್ಮ ದೇಶದಲ್ಲಿ ಹಾಲಿನ ಉತ್ಪಾದನೆಯಲ್ಲಿ ಪ್ರಗತಿ ಅವಶ್ಯ. "ಹಸಿರು ಕ್ರಾಂತಿ"ಯಾದಂತೆ "ಬಿಳಿ ಕ್ರಾಂತಿ"ಯ ಬಗ್ಗೆಯೂ ಯೋಚಿಸಲೇಬೇಕು. ❁



# ಉದ್ಯೋಗ ಸೃಷ್ಟಿಯೊಂದಿಗೆ ಗ್ರಾಮೀಣ ಆಸ್ತಿ ನಿರ್ಮಾಣ

ಕರ್ನಾಟಕ ಸಮೃದ್ಧಿಯ ನಾಡು. ಅದು ಇಂದು ತಡೆಯಲಾಗದ, ಮರುಕಳಿಸಿದ ಭೀಕರ ಕ್ಷಾಮದಿಂದ ತತ್ತರಿಸುತ್ತಿದೆ. ನೈರುತ್ಯ ಹಾಗೂ ಈಶಾನ್ಯ ಮಾರುತಗಳ ಸತತ ವೈಫಲ್ಯದಿಂದಾಗಿ ಈ ಪುಣ್ಯಭೂಮಿ ಕಳೆದ ನಾಲ್ಕು ವರ್ಷಗಳಿಂದ ವಿಪತ್ತಿನ ದವಡೆಯಲ್ಲಿ ಸಿಲುಕಿದೆ. ಇಡೀ ಗ್ರಾಮೀಣ ಬದುಕಿನ ಜೀವನಾಡಿಯನ್ನೇ ತಲ್ಲಣಗೊಳಿಸಿದೆ. ಹೆಚ್ಚೂ ಕಡಿಮೆ ಇಡೀ ರಾಜ್ಯ ಇದರ ಹೊಡೆತಕ್ಕೆ ಸಿಲುಕಿದೆ. ರಾಜ್ಯದ ೧೭೫ ತಾಲೂಕುಗಳಲ್ಲಿ ೧೪೮ ತಾಲೂಕುಗಳು, ೨೭,೦೨೮ ಹಳ್ಳಿಗಳ ಪೈಕಿ ೨೦,೯೯೬ ಹಳ್ಳಿಗಳು, ೩೭೧ ಲಕ್ಷದಲ್ಲಿ ೨೨೦ ಲಕ್ಷ ಜನತೆ, ೧೫೦ ಲಕ್ಷದಲ್ಲಿ ೧೧೦ ಲಕ್ಷ ಜಾನುವಾರು ಸಹಿತ ಪ್ರಕೃತಿಯ ವಿಕೋಪಕ್ಕೆ ಸಿಲುಕಿವೆ. ಬೇಸಾಯ ಕ್ಷೇತ್ರದಲ್ಲಿ ಸೇ ೪೭ರಷ್ಟು ಮುಂಗಾರು ಬೆಳೆಯ ಪ್ರದೇಶಗಳು ಮತ್ತು ಶೇ. ೬೬ರಷ್ಟು ಹಿಂಗಾರು ಬೆಳೆಯ ಪ್ರದೇಶಗಳು ತೊಂದರೆಗೆ ಈಡಾಗಿವೆ. ಇದರ ಫಲವಾಗಿ ಆಹಾರದ ಉತ್ಪಾದನೆಯಲ್ಲಿ ಶೇ. ೫೦ರಷ್ಟು ನಷ್ಟವುಂಟಾಗಿದೆ. ಆದ್ದರಿಂದಲೇ ಸರ್ಕಾರ ಈ ಭೀಕರ ಬರಗಾಲದ ವಿರುದ್ಧ ಸಮರವನ್ನೇ ಸಾರಿದೆ. ಅದು ಅವಿರತವಾಗಿ ಎಲ್ಲ ಕ್ಷೇತ್ರಗಳಲ್ಲಿ ಹೋರಾಟ ನಡೆಸಿದೆ. ಕುಡಿಯುವ ನೀರು, ಆಹಾರ ಧಾನ್ಯ, ಮೇವು ಮುಂತಾದ ಜೀವನಾವಶ್ಯಕತೆಗಳು ಹಾಗೂ ಉದ್ಯೋಗ ಒದಗಿಸಲು ಆದ್ಯ ಗಮನ ನೀಡಿದೆ. ಇದರಿಂದಾಗಿ ಕೊಳವೆ ಭಾವಿಗಳು, ಕೆರೆಗಳು, ನೀರಾವರಿ ನಾಲೆಗಳು, ಗ್ರಾಮ ಸಂಪರ್ಕ ರಸ್ತೆಗಳು ಮತ್ತಿತರ ಶಾಶ್ವತ ಆಸ್ತಿಯೂ ನಿರ್ಮಾಣವಾಗುತ್ತಿವೆ.

## ಕೊಳವೆ ಬಾವಿಗಳು :

ಹಳ್ಳಿಗಳಲ್ಲಿ ಕೊಳವೆ ಬಾವಿಗಳನ್ನು ತೋಡುವ ಕೆಲಸ ಶೀಘ್ರಗತಿಯಲ್ಲಿ ಸಾಗಿದೆ. ಕಳೆದ ನಾಲ್ಕು ವರ್ಷಗಳಲ್ಲಿ ೪೧,೦೦೦ಕ್ಕೂ ಹೆಚ್ಚು ಕೊಳವೆ ಬಾವಿಗಳನ್ನು ನಿರ್ಮಿಸಲಾಗಿದೆ. ಇದರಿಂದಾಗಿ, ಈವರೆಗೆ ರಾಜ್ಯದಲ್ಲಿ ಈಗ ೯೨,೫೦೦ ಕೊಳವೆ ಬಾವಿಗಳನ್ನು ನಿರ್ಮಿಸಿದಂತಾಗಿದೆ. ಇದು ಗ್ರಾಮೀಣ ಕರ್ನಾಟಕಕ್ಕೆ ಮಹತ್ವದ ಶಾಶ್ವತ ಆಸ್ತಿಯಾಗಿದೆ:

## ಶಾಶ್ವತ ಆಸ್ತಿ ಮತ್ತು ಗ್ರಾಮೀಣ ಉದ್ಯೋಗ :

ಸರ್ಕಾರದ ನೆರವು ತಾತ್ಕಾಲಿಕ ಸಹಾಯ ಒದಗಿಸುವ ಕ್ರಮ ಮಾತ್ರವಲ್ಲ. ಬರಗಾಲ

ಪೀಡಿತ ಪ್ರದೇಶಗಳ ಜನತೆಗೆ ಉದ್ಯೋಗ ಒದಗಿಸುವುದಲ್ಲದೇ ಅವಶ್ಯಕ ಆಸ್ತಿಗಳನ್ನು ನಿರ್ಮಿಸುವ ದೀರ್ಘಕಾಲೀನ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ.

ಅನೇಕ ರಚನಾತ್ಮಕ ಉದ್ಯೋಗಾವಕಾಶ ನೀಡುವ ಯೋಜನೆಗಳನ್ನು ಕೈಕೊಳ್ಳಲಾಗಿದೆ. ಹೊಸ ರಸ್ತೆಗಳ ನಿರ್ಮಾಣ, ಗ್ರಾಮ ಸಂಪರ್ಕ ರಸ್ತೆಗಳ ನಿರ್ಮಾಣ, ಭೂಸಂರಕ್ಷಣೆ, ಅರಣ್ಯಾಭಿವೃದ್ಧಿ, ಶಾಲೆ ಹಾಗೂ ಇತರ ಕಟ್ಟಡಗಳ ನಿರ್ಮಾಣ. ಈ ಕಾರ್ಯಕ್ರಮಗಳಿಂದ ಕೇವಲ ಕಳೆದ ಒಂದು ವರ್ಷದಲ್ಲಿಯೇ ೧೬೦ ಕೋಟಿ ರೂ.ಗಳಿಗೂ ಹೆಚ್ಚಿನ ವೆಚ್ಚದಲ್ಲಿ, ಪ್ರತಿದಿನ ಸರಾಸರಿ ೬ ಲಕ್ಷ ಜನರಿಗೆ ಗ್ರಾಮೀಣ ಉದ್ಯೋಗ ದೊರೆತಿದೆ. ತನ್ಮೂಲಕ ರಸ್ತೆಗಳು, ಶಾಲೆಗಳು ಮತ್ತು ಇತರ ಕಟ್ಟಡಗಳು ಮುಂತಾದ ಅಮೂಲ್ಯ ಆಸ್ತಿಗಳ ನಿರ್ಮಾಣವಾಗಿದೆ.

೧೯೮೫-೮೬ ರಲ್ಲೇ ೮೭೦ ಕ್ಕೂ ಹೆಚ್ಚು ನೀರಾವರಿ ನಾಲೆಗಳನ್ನು ತೋಡಲಾಗಿದೆ. ಅದರೊಂದಿಗೆ ೧,೫೦೦ ಹಳೆಯ ಕೆರೆಗಳ ದುರಸ್ತಿ ಹಾಗೂ ೧೩೦ ಹೊಸ ಕೆರೆಗಳ ನಿರ್ಮಾಣ ಮಾಡಲಾಗಿದೆ. ಕರ್ನಾಟಕ ಹಳ್ಳಿಗಳಿಗೆ ಇದು ಅತ್ಯಾವಶ್ಯಕ ಕೊಡುಗೆ.

## ತುರ್ತು ಪರಿಹಾರ ಕ್ರಮಗಳು ಕುಡಿಯುವ ನೀರು, ಆಹಾರ ಧಾನ್ಯ, ಮೇವು :

ದೈನಂದಿನ ಅವಶ್ಯಕತೆಗಳಾದ ಆಹಾರ ಧಾನ್ಯ, ಕುಡಿಯುವ ನೀರು, ಮತ್ತು ಮೇವು ಪೂರೈಕೆಗೆ ಹೆಚ್ಚಿನ ಗಮನ ನೀಡಲಾಗುತ್ತಿದೆ. ೧೨,೦೦೦ಕ್ಕೂ ಹೆಚ್ಚು ನ್ಯಾಯಬೆಲೆಯ ಅಂಗಡಿಗಳು, ಪ್ರತಿ ಕಿ. ಗ್ರಾಂಗೆ ರೂ. ೧-೫೦ರಂತೆ ರಿಯಾಯಿತಿ ದರದಲ್ಲಿ ಆಹಾರ ಧಾನ್ಯಗಳ ವಿತರಣೆ, ಸಾವಿರಾರು ಜಾನುವಾರುಗಳಿಗೆ ಮೇವನ್ನೊದಗಿಸಲು ಗೋಶಾಲೆಗಳ ನಿರ್ಮಾಣ, ತೊಂದರೆಗೊಳಗಾದ ಜಿಲ್ಲೆಗಳಿಗೆ ರಾಜ್ಯದ ಅರಣ್ಯದಿಂದ ೧,೨೦೦ ಟನ್‌ಗಳಷ್ಟು ಮೇವು ವಿತರಣೆ, ಪಂಜಾಬ್, ಹರ್ಯಾಣ ಮತ್ತು ಉತ್ತರಪ್ರದೇಶಗಳಿಂದ ಗೋಧಿ, ಹುಲ್ಲು ಮತ್ತು ಭತ್ತದ ಹೊಟ್ಟಿನ ಸಂಗ್ರಹ. ಇವೆಲ್ಲ ಈ ಸಂಕಷ್ಟದ ಪರಿಹಾರಕ್ಕಾಗಿ ಕರ್ನಾಟಕ ಸರಕಾರವು ಕೈಗೊಂಡಿರುವ ತುರ್ತು ಕ್ರಮಗಳಲ್ಲಿ ಹಲವು.

## ಕ್ಷಾಮದ ವಿರುದ್ಧ ಸರ್ಕಾರದ ಅವಿರತ ಹೋರಾಟ ಮುಂದುವರೆದಿದೆ ಎರಡು ಕ್ಷೇತ್ರಗಳಲ್ಲಿ ತುರ್ತು ಪರಿಹಾರ ಉದ್ಯೋಗ ಸೃಷ್ಟಿ ಹಾಗೂ ಆಸ್ತಿ ನಿರ್ಮಾಣ

"ಕರ್ನಾಟಕ ವಾರ್ತೆ"

ಡಿ.ಐ.ಪಿ. 70/86

ಉಳಿಯುಕ್ಕೊಂದು ಸಿದ್ಧಾಂತ

# ಮಾಡೀಲ್‌ಯಾಹ್‌ನೀ ಸಾಧನೆ

**ವಿ. ಬಾಸಿಲ್ ಹನ್ಸ್**

ಹಣದ ಉಳಿತಾಯ ಒಂದು ಸ್ವಾರಸ್ಯಕರವಾದ ಕ್ರಿಯೆ. ಮಾನವನು ತನ್ನ ಆದಾಯದ ಸ್ವಲ್ಪ ಭಾಗವನ್ನು ಉಳಿತಾಯ ಮಾಡುವುದು ಸಹಜ. ಹಾಗೆ ನೋಡಿದರೆ 'ಉಳಿತಾಯ' ಒಂದು ಅಭ್ಯಾಸವೇ ಆಗಿದೆ. ಆದರೆ ಮೇಲು ನೋಟಕ್ಕೆ ಸರಳವೆಂದು ತೋರುವ ಉಳಿತಾಯ ಕ್ರಿಯೆ ಯನ್ನು ಆಳವಾಗಿ ಅಧ್ಯಯನ ಮಾಡಿದಾಗ ಕೆಲವೊಂದು ಕುತೂಹಲಕರ ಸಂಗತಿಗಳು ತಿಳಿದು ಬರುತ್ತವೆ. ಇದರ ಬಗೆಗೆ ಒಂದು ಅಧ್ಯಯನ ವನ್ನು ನಡೆಸಿ ಉಳಿತಾಯದ ಪರಿಕಲ್ಪನೆಗೆ ಸಂಬಂಧಿಸಿದ ಸಿದ್ಧಾಂತವೊಂದನ್ನು ರೂಪಿ ಸಿದ್ದಾರೆ. ಪ್ರೊ। ಫ್ರಾಂಕೋ ಮಾಡೀಲ್ ಯಾಹ್‌ನೀ. ಅಮೇರಿಕದ ಮ್ಯಾಸಾಚ್ಯುಸೆಟ್ಸ್ ತಂತ್ರವಿಜ್ಞಾನ ಸಂಸ್ಥೆಗೆ ಸೇರಿದ ಇವರು ತಾವು ರೂಪಿಸಿದ ಮಾದರಿಯನ್ನು ಅರ್ಥಶಾಸ್ತ್ರದ ಸಿದ್ಧಾಂತಕ್ಕೆ ಅಳವಡಿಸಿ ಅದರಿಂದ ದೊರೆತ ಮುಖ್ಯಾಂಶಗಳನ್ನು ಪರೀಕ್ಷಿಸಿದ್ದಾರೆ. ಅರ್ಥ ಶಾಸ್ತ್ರ ಕ್ಷೇತ್ರದಲ್ಲಿ ೧೯೮೫ರ ನೋಬೆಲ್ ಪಾರಿ ತೋಷಕವನ್ನು ಗೆದ್ದಿದ್ದಾರೆ ಡಾ. ಫ್ರಾಂಕೋ ಮಾಡೀಲ್‌ಯಾಹ್‌ನೀ.

## ಇವರಿಗಿಂತ ಮೊದಲು

ಮಾಡೀಲ್‌ಯಾಹ್‌ನೀ ಅವರ ಸಿದ್ಧಾಂತ ಪ್ರತಿ ಪಾದನೆಗಿಂತ ಮೊದಲು ಅರ್ಥಶಾಸ್ತ್ರದಲ್ಲಿ ಉಳಿತಾಯಕ್ಕೆ ಸಂಬಂಧಿಸಿದ ಸಿದ್ಧಾಂತಗಳನ್ನು ಡಾ. ಜೆ. ಎಂ. ಕೀನ್ಸ್, ಪ್ರೊ. ಜೇಮ್ಸ್ ಡ್ಯೂಸೆನ್‌ಬರಿ, ಪ್ರೊ. ಮಿಲ್ಟನ್ ಫ್ರೀಡ್‌ಮನ್ ಪ್ರೊ. ಜೇಮ್ಸ್ ಟೋಬಿನ್ ಮುಂತಾದವರು ನೀಡಿದರು.

ಪ್ರೊ. ಕೀನ್ಸ್ ನೀಡಿದ್ದು 'ನಿರಾವಲಂಬ ಆದಾಯ ಸಿದ್ಧಾಂತ'ವನ್ನು. ಡ್ಯೂಸೆನ್‌ಬರಿ ಯವರು 'ಸಾಪೇಕ್ಷ ಆದಾಯ' ನಿಲುವನ್ನು ಪ್ರತಿಪಾದಿಸಿದರೆ ಪ್ರೊ. ಫ್ರೀಡ್‌ಮನ್ನರು 'ಶಾಶ್ವತ ಆದಾಯ' ನಿಲುವನ್ನೂ ಪ್ರೊ. ಟೋಬಿನ್ನರು 'ಸಂಪತ್ತಿನ ನಿಲುವನ್ನೂ' ಪ್ರತಿ ಪಾದಿಸಿದರು.

ಉಳಿತಾಯದ ಪ್ರಮಾಣವು ವ್ಯಕ್ತಿಯ 'ಅನುಭೋಗ' ವೆಚ್ಚವನ್ನು ಹೊಂದಿಕೊಂಡಿದೆ ಯಷ್ಟೆ. ವ್ಯಕ್ತಿಯ ಅನುಭೋಗದಲ್ಲಿ ಒಂದು ನಿಯಮಿತತನವನ್ನು ಮಾಡೀಲ್‌ಯಾಹ್‌ನೀ ಗುರುತಿಸಿದರು. ೧೯೬೦ರಲ್ಲಿ ಮಾಡೀಲ್ ಯಾಹ್‌ನೀಯವರು ಆಲ್ಬರ್ಟ್ ಆಂಡೋ ಎಂಬವರ ಜತೆಯಲ್ಲಿ "ಶಾಶ್ವತ ಆದಾಯ ಮತ್ತು ಉಳಿತಾಯ ವರ್ತನೆಯ ಜೀವನ ಚಕ್ರ ನಿಲುವು: ಹೋಲಿಕೆಗಳು ಮತ್ತು ಪರೀಕ್ಷೆಗಳು" ಎಂಬ ಕೃತಿಯನ್ನು ಪ್ರಕಟಿಸಿದರು. ಇದರಲ್ಲಿ ಅವರು ಕುಟುಂಬ-ಗುಂಪುಗಳ ಶಾಶ್ವತ ಆದಾಯವನ್ನು ಗುರುತಿಸಲು ಹೊಸ ವಿಧಾನ ವನ್ನು ಪ್ರಸ್ತಾಪಿಸಿದರು. ಇವರು ಆದಾಯದಲ್ಲಿ ಉಳಿತಾಯ ಮಾಡಲ್ಪಟ್ಟ ಪ್ರಮಾಣವನ್ನು

ಜೀವನ ಕಾಲದ (lifetime) ಆದಾಯಕ್ಕೆ ಹೊಂದಿಸಿ ಸಿದ್ಧಾಂತ ರೂಪಿಸಿದ್ದಾರೆ. ಹೀಗೆ ಉಳಿತಾಯವು ಚಾಲ್ತಿ ಆದಾಯಕ್ಕೆ (current income) 'ನಿರ್ಲಿಪ್ತ'ವಾಗಿರುವಂತೆ ಮಾಡಿದ್ದಾರೆ.

೧೯೬೩ರಲ್ಲಿ ಮಾಡೀಲ್‌ಯಾಹ್‌ನೀ ಮತ್ತು ಆಂಡೋರವರು ಪರಿಪೂರ್ಣವಾಗಿ 'ಜೀವನ ಚಕ್ರ ನಿಲುವನ್ನು' ಪ್ರತಿಪಾದಿಸಿದರು. ಜನರು ತಮ್ಮ ವೃದ್ಧಾಪ್ಯಕ್ಕಾಗಿ ಅಥವಾ ನಿವೃತ್ತ ಜೀವನಕ್ಕಾಗಿ ಹೇಗೆ ಉಳಿತಾಯ ಮಾಡುತ್ತಾರೆ ಎಂಬುದರ ವಿವರಣೆ ಅವರ ಸಿದ್ಧಾಂತದಲ್ಲಿದೆ. ಇವರು ಹೇಳುವಂತೆ ಒಬ್ಬ ವ್ಯಕ್ತಿಯ ಅನುಭೋಗ ಪ್ರವೃತ್ತಿಯು ಅವನ ಜೀವನ ಕಾಲ ಆದಾಯವನ್ನು ಅವಲಂಬಿಸಿದೆ. ಈ ಪ್ರಕಾರ ಅನುಭೋಗ ಪ್ರವೃತ್ತಿಯು ಅವನ ಜೀವನ ಕಾಲದಲ್ಲಿ ಏರಿ, ಬಳಿಕ ಇಳಿಮುಖವಾಗುವುದು ಕಂಡುಬರುತ್ತದೆ. ಇಲ್ಲಿ ಜೀವನಕಾಲ ಎಂದರೆ ಅವನ ದುಡಿಮೆಯ ಕಾಲ ಅಥವಾ ಸಂಪಾದನೆಯ ಕಾಲ. ತನ್ನ ಅನುಭೋಗವಮಟ್ಟವನ್ನು ಒಂದೇ ರೀತಿಯಾಗಿ ಇಟ್ಟುಕೊಳ್ಳುವ ಬಯಕೆಯಿಂದ ಅವನು ದುಡಿಮೆಯ ಕಾಲದಲ್ಲಿ ತನ್ನ ಆದಾಯಕ್ಕಿಂತ ಕಡಿಮೆ ವಿನಿಯೋಗಿಸಿ ಅನುಭೋಗಿಸುತ್ತಾನೆ. ಹೀಗೆ ಅವನ ಸಂಪತ್ತು ಏರುತ್ತಾ ಹೋಗಿ ಅವನ ನಿವೃತ್ತಿಯ ಸಮಯದಲ್ಲಿ ಉಳಿತಾಯತ್ಯಾಗ ('dis-saving') ಉಂಟಾಗುತ್ತದೆ. ಅಂದರೆ ತನ್ನ ಉಳಿತಾಯದ ಭಾಗವನ್ನು ಅವನು ಈಗ ಅನುಭೋಗಕ್ಕಾಗಿ ಬಳಸುತ್ತಾನೆ. ಇದನ್ನು ಚಿತ್ರದಲ್ಲಿ ವಿವರಿಸಲಾಗಿದೆ.

ಅಲ್ಲಿ ಕಂಡುಬರುವಂತೆ ವ್ಯಕ್ತಿಯ ಅನುಭೋಗ ಪ್ರವೃತ್ತಿ ಅವನ ದುಡಿಮೆಯ ಕಾಲದಲ್ಲಿ ಏರುತ್ತಾ ಹೋಗುತ್ತದೆ. ಅವನ ಆದಾಯವಾದರೋ ಮೆಲ್ಲಮೆಲ್ಲನೆ ಏರಿ ತ್ವರಿತವಾಗಿ ಇಳಿಯುತ್ತದೆ. ಹೀಗಾಗಿ ಅವನ ಜೀವನದ ಮೊದಲ ಹಾಗೂ ಕೊನೆಯ ಭಾಗಗಳಲ್ಲಿ 'ಉಳಿತಾಯತ್ಯಾಗ' ಕಂಡುಬರುತ್ತದೆ. ಮಧ್ಯ ಭಾಗದಲ್ಲಿ




ಅ & ಆ = ಅನುಭೋಗ ಮತ್ತು ಆದಾಯ

ಕಾ = ಕಾಲ ಚೌಕಟ್ಟು ನಿ = ನಿರ್ದಿಷ್ಟ ಸಮಯ

ಮೂ = ಮೂಲ ಅಥವಾ ಪ್ರಾರಂಭ

ಉಳಿತಾಯ ಇದೆ. (ದುಡಿಮೆ ಕಾಲದಲ್ಲಿ ಉಳಿತಾಯ ಶಿಖರವನ್ನು ಮುಟ್ಟುತ್ತದೆ). ಅನುಭೋಗವು ಆದಾಯಕ್ಕಿಂತ ಹೆಚ್ಚಾಗಿರುವಾಗ 'ಉಳಿತಾಯ ತ್ಯಾಗ' ಮಾಡಬೇಕಾಗುತ್ತದೆ. ಆದಾಯವು ಅನುಭೋಗಕ್ಕಿಂತ ಹೆಚ್ಚಾಗಿರುವಾಗ ಮಾನವನು ಉಳಿತಾಯವನ್ನು ಮಾಡುತ್ತಾನೆ. ಪ್ರಾರಂಭದ ಹಂತದಲ್ಲಿ ಸಾಲ ಮೊದಲಾದ ಮೂಲಗಳೇ ವ್ಯಕ್ತಿಯ ಉಳಿತಾಯ ತ್ಯಾಗಕ್ಕೆ ಇರುವ ಸಾಧ್ಯತೆ (ಕೆಲಸ ಸಿಗುವ ಮುನ್ನ ಹೆತ್ತವರು-ಸಂಬಂಧಿಕರು ಅವನನ್ನು ನೋಡಿಕೊಳ್ಳುವ ಸಾಧ್ಯತೆಯೂ ಇದೆ.) ಕೊನೆಗಾಲದಲ್ಲಿ ಉಳಿತಾಯದ ಭಾಗವನ್ನು ಅನುಭೋಗಕ್ಕೆ ಬಳಸುತ್ತಾನೆ— ಇದೇ ಉಳಿತಾಯ ತ್ಯಾಗ. ಹೀಗೆ ಅವನ ಅನುಭೋಗವು ಅವನ ಚಾಲ್ತಿ ಆದಾಯವನ್ನಲ್ಲ, ಅವನ ದುಡಿಮೆ ಕಾಲದ ಆದಾಯವನ್ನು ಹೊಂದಿಕೊಂಡಿದೆ. ಹೀಗೆ ವ್ಯಕ್ತಿಯ ಅನುಭೋಗದಲ್ಲಿ ಒಂದು ನಿಯಮಿತತನವಿದೆ. ಹೀಗಾಗಿ ತಮ್ಮ ಸಿದ್ಧಾಂತವನ್ನು "ಜೀವನಚಕ್ರ ನಿಲುವು" ಎಂದು ಮಾಡೀಲ್‌ಯಾಹ್‌ನೀ ಹಾಗೂ ಆಂಡೋ ಕರೆದಿದ್ದಾರೆ.

## ಗಮನಾರ್ಹ ಅಂಶಗಳು :

ಮಾಡೀಲ್‌ಯಾಹ್‌ನೀ ಅವರ ಊಹೆ (hypothesis) ಹಲವು ಸ್ವಾರಸ್ಯಕರ ಅಂಶಗಳನ್ನು ಹೊರಗೆಡಹಿದೆ.

೧ ಉಚ್ಚ ಆದಾಯವು ಉಚ್ಚ ಉಳಿತಾಯವನ್ನೂ ಚಿಕ್ಕ ಆದಾಯವು ಚಿಕ್ಕ ಅಥವಾ ನಕಾರಾತ್ಮಕ ಉಳಿತಾಯವನ್ನೂ ಹೊಂದಿಕೊಂಡಿರುತ್ತದೆ.

೨ ವ್ಯಕ್ತಿಯ ಅನುಭೋಗವು ಅವನ ಚಾಲ್ತಿ ಆದಾಯವನ್ನು ಹೊಂದಿಕೊಂಡಿರದೆ ಅವನ ಜೀವನಕಾಲದ ಆದಾಯವನ್ನು ಹೊಂದಿಕೊಂಡಿರುವುದರಿಂದ ಅವನ ಅನುಭೋಗದಲ್ಲಿ ಒಂದು ನಿಯಮಿತತನ ಇದೆ.

೩ ಅನುಭೋಗವು ಜೀವನಕಾಲದ ಆದಾಯಗಳಿಕೆಯ ವಿಧಾನ ಮತ್ತು ಸಾಧ್ಯತೆಗಳಿಗೆ ತಕ್ಕಂತೆ ಇರುವುದಾದರೆ ಅನುಭೋಗ ಮತ್ತು ವ್ಯಕ್ತಿಗಳ ವಯಸ್ಸಿನ ನಡುವೆ ಸಂಬಂಧವನ್ನು ಕಂಡುಹಿಡಿಯಲು ಸಾಧ್ಯವಾಗಬಹುದು.

೪ ಅನುಭೋಗ ಹಾಗೂ ಆದಾಯಗಳ ಅನುಪಾತ ಸ್ಥಿರವಾಗಿದೆ.

ಮಾಡೀಲ್‌ಯಾಹ್‌ನೀ ಅವರ ನಿಲುವು ಒಬ್ಬ ವ್ಯಕ್ತಿಯ ಇಡೀ ಜೀವನಕಾಲದಲ್ಲಿ ಬರುವ ಆದಾಯದ ವೈಖರಿಯನ್ನು ಸ್ಪಷ್ಟವಾಗಿ ನೋಡುತ್ತದೆ. ಇಲ್ಲಿ ಗಮನಾರ್ಹವಾದ ವಿಚಾರವೆಂದರೆ ಕೊನೆಗಾಲದಲ್ಲಿ ಆಗುವ ಅನುಭೋಗ ಇಳಿಕೆ ಮೊದಲ ಹಂತದಲ್ಲಿ ಆಗಿರುವ ಏರಿಕೆಯಷ್ಟು ವೇಗವಾಗಿರುವುದಿಲ್ಲ.

ಹಳೆಯಸಾಲ ತೀರಿಸಲೂ, ಮುಂದೆ ಬರುವ ನಿವೃತ್ತಿ ಕಾಲಕ್ಕೆ ಬೇಕೆಂದು ಹಣವನ್ನು ಶೇಖರಿಸಿ ಇಡುವುದೂ ನಾವೆಲ್ಲ ಮಾಡುವ ಸಹಜ ಕ್ರಿಯೆ. ಆದರೆ ಇಂಥ ಸಹಜ ಕ್ರಿಯೆಯಲ್ಲೂ ಒಂದು ನಿಯಮಿತತನ— ಒಂದು ಸಿದ್ಧಾಂತವೇ ಇದೆ— ಎಂದರೆ ಸ್ವಾರಸ್ಯವೇ ಸರಿ.

ಮಾಡೀಲ್‌ಯಾಹ್‌ನೀಯವರ ಸಾಧನೆ ಒಂದು ಮೈಲಿಗಲ್ಲು. ಜನರು ತಮ್ಮ ಮುಪ್ಪಿನ ಕಾಲಕ್ಕೆ ಹೇಗೆ ಉಳಿತಾಯ ಮಾಡಿ ಇಡುತ್ತಾರೆ ಎಂಬುದನ್ನು ಕುರಿತು ಒಂದು ಮಾದರಿಯನ್ನು ರಚಿಸಿ ಅದನ್ನು ಅರ್ಥಶಾಸ್ತ್ರದ ಸೂತ್ರಗಳಿಗೆ ಅನ್ವಯಿಸಿ ಆ ಮಾದರಿಯಿಂದ ಹಲವು ಅಂಶಗಳನ್ನು ಹೊರಕ್ಕೆ ತಂದಿದ್ದಾರೆ. ನೋಬೆಲ್ ಪಾರಿತೋಷಕಕ್ಕೆ ಅರ್ಹವಾದ ಸಾಧನೆಯೇ ಇದು. ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಈ ಪಾರಿತೋಷಕದ ೧೭ ವರ್ಷಗಳ ಇತಿಹಾಸದಲ್ಲಿ ಅಮೇರಿಕನ್ನನೊಬ್ಬನು ಅದನ್ನು ಪಡೆದಿರುವುದು ಇದು ೧೩ನೇ ಬಾರಿ ಇಟಲಿಯಲ್ಲಿ ಹುಟ್ಟಿದ ಮಾಡೀಲ್‌ಯಾಹ್‌ನೀ ಈಗ ಅಮೇರಿಕದಲ್ಲಿ ನೆಲೆಸಿದ್ದಾರೆ. ೧೯೧೮ರಲ್ಲಿ ಜನಿಸಿದ ಅವರು 'ಧರ್ಮಶಾಸ್ತ್ರ' ಮತ್ತು 'ಸಮಾಜ ವಿಜ್ಞಾನ'ಗಳಲ್ಲೂ ಡಾಕ್ಟರೇಟ್ ಪದವಿ ಪಡೆದಿದ್ದಾರೆ.

# ಸರಿಗನ್ನಡದ ಸಂಕಲ್ಪ

ವಿಠ್ಠಲ ಕುಲಕರಣಿ

ಕನ್ನಡ ಪ್ರಥಮ ಭಾಷೆ, ದ್ವಿತೀಯ ಭಾಷೆ, ತೃತೀಯ ಭಾಷೆಯೆಂದು ಶಿಕ್ಷಣ ರಂಗದಲ್ಲಿ ಕೇಳಿ ಬರುತ್ತಿದೆ. ಅದು ಎಷ್ಟನೆಯ ಭಾಷೆಯಾದರೂ ಸರಿಯಾದ ಭಾಷೆಯಾಗುವಂತಹ ರೀತಿಯಲ್ಲಿ ಬರೆಯುವ-ನುಡಿಯುವ ರೂಢಿ ನಮ್ಮಲ್ಲಿ ಬೆಳೆಯುತ್ತಿಲ್ಲ. ಅಚ್ಚಗನ್ನಡ, ಸ್ವಚ್ಛಗನ್ನಡ, ಸಿರಿಗನ್ನಡ, ಆಡುಗನ್ನಡ, ಸ್ವಚ್ಛಂದ ಕನ್ನಡ ಇತ್ಯಾದಿ ಹೇಳುವವರೂ ಸರಿಗನ್ನಡದ ಬೇವಣಿಗೆಯತ್ತ ಲಕ್ಷ್ಯ ಪೂರೈಸುತ್ತಿಲ್ಲವೆಂದು ಕಾಣುತ್ತದೆ. ಅಚ್ಚಗನ್ನಡ, ಸ್ವಚ್ಛಗನ್ನಡದ ಜೊತೆಗೆ ತುಚ್ಛ-ಗನ್ನಡ ಎಂದು ಪಂಜೆ ಮಂಗೇಶರಾಯರು ಹಾಸ್ಯ ಮಾಡಿದ್ದರಂತೆ! ಬಿಚ್ಚುಗನ್ನಡ, ಚುಚ್ಚು ಕನ್ನಡ ಇತ್ತೀಚೆಗೆ ಬೆಳೆದದ್ದಿರಬೇಕು.

ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಇತರ ಭಾಷೆಗಳ ಪ್ರಭಾವವನ್ನು ಕಾಣಬಹುದು. ಇದು ಸಹಜವೇ. ಕೆಲಮಟ್ಟಿಗೆ ಕನ್ನಡದ ಪ್ರಭಾವವೂ ನೆರೆ ಭಾಷೆಗಳ ಮೇಲೆ ಕಂಡುಬರುತ್ತದೆ. ಗಡಿ ನಾಡಿನಲ್ಲಿ ಇದನ್ನು ತಪ್ಪಿಸಲಿಕ್ಕಾಗಲಿಕ್ಕಿಲ್ಲ. ಆದರೂ ಇಡೀ ಕನ್ನಡ ನಾಡಿನಲ್ಲಿ ಅರ್ಥವಾಗಬಹುದಾದ ಶಿಷ್ಟ ಕನ್ನಡದ ಬೇವಣಿಗೆಯಾಗಬೇಕು. ಆ ಭಾಗದ ಜನರು ತಮ್ಮ ಸ್ವಚ್ಛಂದ ರೀತಿಯ ಕನ್ನಡವನ್ನು ಉಪಯೋಗಿಸಿದರೂ ಶಿಷ್ಟಗನ್ನಡದ ಮಹತ್ವವನ್ನು ಅಲಕ್ಷಿಸಬಾರದು.

ನೈಜತೆಯನ್ನೂ ಸಹಜತೆಯನ್ನೂ ತೋರಿಸುವ ಅಲ್ಲಲ್ಲಿಯ ಆಡುಗನ್ನಡದಲ್ಲಿ ಸತ್ವ ಇದೆ. ಆ ಸತ್ವವನ್ನು ಹೋಗಲಾಡಿಸಬೇಕೆಂದೇನೂ ಅಭಿ-ಪ್ರಾಯವಲ್ಲ. ಆ ಜಾನಪದದ ಸೌಂದರ್ಯ ಆಡು ಮಾತಿನಲ್ಲಿರಲಿ. ಆದರೂ ಶಿಷ್ಟ ಕನ್ನಡದ ಉಪಯೋಗ ಹೆಚ್ಚಲೇಬೇಕು. ಓದು ಬರಹ ಬಲ್ಲವರ ಸಂಖ್ಯೆ ಹೆಚ್ಚಿದಂತೆ ಕನ್ನಡ ಮಾತಿ-ನಲ್ಲಿಯೂ ನಮಗೆ ಅರಿವಾಗದಂತೆಯೇ ಅಚ್ಚುಕಟ್ಟುತನ ಬೆಳೆಯುತ್ತದೆ; ಬೆಳೆಯಬೇಕು. ಶ್ರೀಮಾನ್ ಆಲೂರು ವೆಂಕಟರಾಯರು ಭಾಷೆಯ ಏಕೀಕರಣಕ್ಕೆ ಮಹತ್ವಕೊಟ್ಟದ್ದು ಈ ದೃಷ್ಟಿಯಿಂದಲೇ.

ಶಕ್ತಿಯುತ ಪ್ರಸಾರ ಮಾಧ್ಯಮಗಳು ಇರುವಾಗ ಕೇವಲ ಮಿತವಾದ ಪ್ರಾದೇಶಿಕ ಆಡು ನುಡಿಗಳು ಕೂಡ ಕ್ರಮೇಣ ಶಿಷ್ಟ ಕನ್ನಡದತ್ತಲೇ ಒಲಿಯುತ್ತವೆ. ಬೇರೆ ಭಾಷೆಗಳ ಸಂಪರ್ಕ ಬಂದಾಗಲೂ ಸರಿಗನ್ನಡದ ಮಹತ್ವ ಹೆಚ್ಚು. ಬೇರೆ ಭಾಷೆಗಳನ್ನು ಕಲಿಯುವ ಆಕಾಂಕ್ಷೆ ಎಲ್ಲರಲ್ಲಿಯೂ ಇದ್ದೇ ಇರುತ್ತದೆ. ಆದರೂ ಇತರ ಭಾಷೆಗಳ ಬೈಗಳನ್ನು ಕಲಿಯಲು ವಿಶೇಷ ಆತುರ ನಮಗೆ! ಇತರರು ನಮ್ಮನ್ನು ಬೈದರೆ ಸುಲಭವಾಗಿ ನಾವು ತಿಳಿದುಕೊಳ್ಳುವಂತಾಗಬೇಕೆಂದು ಪ್ರಾರಂಭವಾಗುತ್ತದೆ, ಈ ಭಾಷಾ

ಆಕರ್ಷಣೆ. ಆದರೆ ಭಾಷೆಯು ಮೇಲ್ಮೆ–ಅದರ ಶ್ರೀಮಂತಿಕೆ–ಇತರರಿಗೆ ಅರ್ಥವಾಗಬೇಕಾದರೆ ಈ ಬೈಗಳ ಸಂಪತ್ತಿನಿಂದಲ್ಲ; ನಮ್ಮ ಕನ್ನಡದ ಚೆಲುವು ಪ್ರಭಾವ ಬೀರುವುದು ಸಂಪನ್ನ ಬೈಗಳಿಂದಲ್ಲ. ನಮ್ಮ ಕನ್ನಡ ಬಾಂಧವರು–ಮುಂಬಯಿಯಂತಹ ನಗರಗಳಲ್ಲಿ ಹೋಗಿ ನೆಲೆಸಿದವರು–ಅಲ್ಲಲ್ಲಿಯ ಭಾಷೆಗಳಿಂದ ಪ್ರಭಾವಿತರಾದವರು ಮನೆಯಲ್ಲಿ ಕನ್ನಡವನ್ನು ಬೈಗಳ ಮಟ್ಟಿಗೆ ಮಾತ್ರ ಉಪಯೋಗಿಸುತ್ತಿದ್ದರೆ, ಮುಂದಿನ ಜನಾಂಗ ಕನ್ನಡವನ್ನು ಬೈಗಳ ಭಾಷೆಯೆಂದೇ ತಿಳಿಯಬಹುದಾಗಿದೆ. ನಮ್ಮ ಸಂಬಂಧಿಕರ ಯುವಕನೊಬ್ಬ ಇದೇ ಅರ್ಥದ ಮಾತನ್ನು ನನ್ನೆದುರು ಪ್ರಕಟಿಸಿದಾಗ ನನಗೆ ಆಶ್ಚರ್ಯವಾಯಿತು. ನಾವು ಸರಿಗನ್ನಡ–ಶಿಷ್ಟ ಕನ್ನಡವನ್ನು ಅಲಕ್ಷಿಸಿದ್ದರಿಂದಲೇ ಇಂತಹ ಅಭಿಪ್ರಾಯಗಳನ್ನು ಎಳೆ ಮಕ್ಕಳಲ್ಲಿ ಬೆಳೆಸುತ್ತಿಲ್ಲವೇ?

ಸಾಮಾನ್ಯವಾಗಿ ಮತ ಪರಿವರ್ತನೆ ಹೊಂದಿದವನು ಹೆಚ್ಚು ಮತಾಭಿಮಾನಿಯಾಗಿರುತ್ತಾನೆಂದು ಹೇಳಲಾಗುತ್ತದೆ. ನಮ್ಮ ಕನ್ನಡಿಗರು ನೆರೆ ನಾಡಿನ ಭಾಷೆ ಕಲಿತು, ಆ ಭಾಷಾಭಿಮಾನಿಗಳಾಗುವದುಂಟು; ಅದಕ್ಕೂ ಹೆಚ್ಚಾಗಿ ಕನ್ನಡವನ್ನು ಕಡೆಗಣಿಸುವದೂ ಉಂಟು. ಮತ್ತು ಕಲಿತ ಭಾಷೆಯ ಶಿಷ್ಟತೆಯ ಬಗ್ಗೆ, ಸ್ವಚ್ಛತೆಯ ಬಗ್ಗೆ ಹೆಚ್ಚು ಲಕ್ಷ್ಯ ಪೂರೈಸುವುದೂ ಉಂಟು. ಇನ್ನೊಂದು ಭಾಷೆಯ ಸಂಪರ್ಕದಿಂದ, ಅಭ್ಯಾಸದಿಂದ, ರೂಢಿಯಿಂದ ನಮ್ಮದನ್ನು ಸುಧಾರಿಸಿಕೊಳ್ಳುವ ಪ್ರವೃತ್ತಿಯೂ ಬರಬೇಕು. ಇದು ಸಾಮಾನ್ಯ ಸ್ವಭಾವವೇ. ಆದರೂ ಇಂತಹ ಪ್ರವೃತ್ತಿ ನಮ್ಮ ಕನ್ನಡಿಗರಲ್ಲಿ ಕಡಿಮೆ ಎಂದು ಹೇಳಬೇಕು. ಹಾಗೆ ನೋಡಿದರೆ, ಕನ್ನಡ ಭಾಷಾಭ್ಯಾಸದಲ್ಲಿ ಹೊಸ ಪಥ ಪ್ರಾರಂಭವಾದದ್ದೇ ಇಂಗ್ಲೀಷ್ ಭಾಷೆಯ ಅಭ್ಯಾಸದಿಂದ. ಮರಾಠಿ, ಇಂಗ್ಲೀಷಿನಲ್ಲಿ ಮಕ್ಕಳು ಮಾತನಾಡುವಾಗ ಕನ್ನಡ ಶಬ್ದ ಬಂದರೆ, ಅದನ್ನು ತಿದ್ದಿ ಸರಿ ಮಾಡಲು ಪ್ರಯತ್ನಿಸುತ್ತೇವೆ. ಆದರೆ ಕನ್ನಡ ಮಾತನಾಡುವಾಗ ಅಂತಹ ಬೇರೆ ಭಾಷೆಗಳ ಶಬ್ದಗಳು ಬಂದರೆ ಅದೇ ರೀತಿ ತಿದ್ದಿಕೊಳ್ಳುವ ಪ್ರಯತ್ನ ಮಾಡುವುದಿಲ್ಲ. ಹೀಗಾಗಿ ನಮ್ಮಲ್ಲಿ ಸ್ವಚ್ಛಂದ ಕನ್ನಡ ಬೆಳೆಯುತ್ತಿದೆ. ಹಿಂದಿನ ತಲೆಮಾರಿನವರಲ್ಲಿದ್ದ, ಸ್ವಾತಂತ್ರ್ಯ ಚಳವಳಿಯ ಮತ್ತು ಅಚ್ಚಕನ್ನಡದ ಛಲದ ಮನೋಭಾವ ಇಂದು ಕಾಣುವುದಿಲ್ಲ. ಕನ್ನಡದ ಬಗೆಗಿನ ನಮ್ಮ ದೃಷ್ಟಿ ಕರ್ನಾಟಕ ರಾಜ್ಯವಾದ ನಂತರ ಸ್ವಲ್ಪ ಶಿಥಿಲಗೊಂಡಿದೆಯೆಂದೇ ಹೇಳಬೇಕು. ನಾವು ಭಾಷೆಯ ಪರಿಶುದ್ಧತೆಯ ಬಗ್ಗೆ ಉದಾಸೀನರಾಗಿದ್ದೇವೆ. ಹಾಗೆ ನೋಡಿದರೆ, ಕನ್ನಡ ನಾಡಿನಲ್ಲಿ ವ್ಯಾಪಾರ ಉದ್ಯೋಗಗಳಿಗಾಗಿ ನೆಲಸಿದ ಗುಜರಾತಿಗಳು, ಸಿಂಧೀ, ಪಂಜಾಬಿ ಜನರೇ ಹೆಚ್ಚು ಪರಿಶುದ್ಧ ಕನ್ನಡ ಮಾತನಾಡುತ್ತಾರೆಂದು ಎನಿಸುತ್ತದೆ.

ಧಾರವಾಡದ ಕನ್ನಡವನ್ನೇ ನೋಡಿದರೆ ಅನೇಕ ಅಚ್ಚಕನ್ನಡದ ಶಬ್ದಗಳು–ಹಿಂದೆ ರೂಢಿಯಲ್ಲಿದ್ದವುಗಳು–ಇಂದು ಬಳಕೆಯಲ್ಲಿಲ್ಲ. ಎಲೆಯಡಿಕೆ ಅಂಗಡಿ, ಬೀಡಾ ಅಂಗಡಿ, ಚುಟ್ಟ ಮೊದಲಾದ ಕನ್ನಡ ಶಬ್ದಗಳು ಈಗ ಕೇಳಿ ಬರುವದಿಲ್ಲ. 'ಪಾನ ಅಂಗಡಿ,' 'ಪಾನ ಶಾಪ'ಗಳು ಬಂದಿವೆ. ಇನ್ನು ಕೆಲ ವರ್ಷಗಳ ಮೇಲೆ ಇವೇ ಶಬ್ದಗಳು ರೂಢಿಯಲ್ಲಿ ಉಳಿದರೆ ಮುಂದಿನ ಪೀಳಿಗೆಯ ಸಂಶೋಧನ ಬುದ್ಧಿಯ ವಿದ್ಯಾರ್ಥಿಗಳು-ಧಾರವಾಡದ ಸೀಮೆಯಲ್ಲಿ ಪಾನ ಪ್ರತಿಬಂಧವಿದ್ದುದನ್ನು ಎಲೆಯಡಿಕೆ-ಗಳ ಮೇಲಿನ ಪ್ರತಿಬಂಧವೆಂದೇ ಅರ್ಥ ಮಾಡಿಕೊಂಡರೂ ಆಶ್ಚರ್ಯವಲ್ಲ. ಪಾನನಿರೋಧ ಕ್ರಮದ ಬಗ್ಗೆ ಹಿಂದಿನ ಪುಟಗಳನ್ನು ಓದಿದರೆ 'ಪಾನ' ಮತ್ತು 'ನಿರೋಧ'ಗಳನ್ನು ಒಂದೆಡೆಗೇ ಮಾರುವ ಕ್ರಮ ಆಗಲೂ ಇತ್ತು ಎಂದು—ಕೊಂಡಾರು! ಇಸ್ಪೀಟು ಆಟದಲ್ಲಿ ಹಿಂದಿನವರು ಎಲೆಕಲಸುತ್ತಿದ್ದರೆ— ಇಂದಿನವರು 'ಪಾನು'ಗಳನ್ನು 'ಟೀಪು'ತ್ತಾರೆ. ಪುಸ್ತಕದ 'ಪುಟ'ಗಳನ್ನು ತಿರುವಿ ನೋಡದೆ 'ಪಾನು'ಗಳನ್ನು ತಿರುವುತ್ತಾರೆ.

ಧಾರವಾಡದ ಮಾತಿನಲ್ಲಿ 'ಸೈ' 'ಸರಿ'ಗಳ ಉಪಯೋಗ ಕೆಲ ದಶಕಗಳ ಹಿಂದೆ ಬಹಳ ರೂಢಿಯಲ್ಲಿತ್ತು. ಅವುಗಳು ಇಂದು 'ಬರೋಬರಿ'ಯಾಗಿ ಅಚ್ಚಕನ್ನಡ ಶಬ್ದಗಳು ಮರೆಯಾಗಿವೆ. 'ತೀರಾ' 'ಅತಿ'ಗಳು ಮಾಯವಾಗಿ 'ಅಗದೀ'

ಬೆಳೆದುಬಿಟ್ಟಿದೆ. ಅತ್ತಿಗೆ, ಚಿಕ್ಕಮ್ಮ (ಚಿಗವ್ವ) ಅಬಚಿಗಳು ಹೋಗಿ ವೈನಿ, ಮಾಂಸಿಗಳು ರೂಢಿಯಲ್ಲಿ ಬಂದಿವೆ. ಮಗ್ಗಲು ಮನೆ 'ಬಾಜೂ' ಮನೆಯಾಗಿದೆ. ಹೋಳಿಗೆಮನೆ, 'ಪೋಳಪಾಟಿ' ಆಗಿದೆ. ಬಟ್ಟಲು 'ವಾಟಿ' ಆಗಿದೆ. ಇಂತಹ ಪರಕೀಯ ಶಬ್ದಗಳು ಕ್ರಮೇಣ ಮಾಯವಾಗಬೇಕು. ಆದರೆ ಪ್ರಸಾರ ಮಾಧ್ಯಮಗಳಲ್ಲಿ ಅವುಗಳೇ ಪ್ರಖರವಾಗಿ ಮಾಯವಾಗುವ ಕ್ರಮ ಪಲ್ಲ.ಆಕ್ರಮಣ ಮಾಡುವ ರೀತಿಯಲ್ಲಿ ಬೆಳೆಯುತ್ತಿವೆ. ಸರಿಗನ್ನಡ-ಶಿಷ್ಟಗನ್ನಡ ಬೆಳೆಯಬೇಕಾದದ್ದು ಈ ಕಾರಣಗಳಿಂದ ಮಹತ್ವದ್ದಾಗಿದೆ. 'ಭಾನಗಡಿ', 'ಖೊಟ್ಟಿ'ಗಳು ನಮ್ಮ ಪತ್ರಿಕೆಗಳಲ್ಲಿ ಧಾರಾಳವಾಗಿ ಬಳಕೆಯಾಗುತ್ತಿರುವಾಗ ಸರಿಗನ್ನಡ ಬೆಳೆಯುವದೆಂತು? ಬೇಂದ್ರೆ-ಸಾಲಿ-ಶಂಬಾ ಕಲಿಸಿದ ವಿದ್ಯಾರ್ಥಿ ವೃಂದ ಬೆಳೆಸಿದ ಹೊಸಪೀಳಿಗೆ ಕನ್ನಡವನ್ನು ಹೀಗೆ ಕಡೆಗಣಿಸುತ್ತಿರಬೇಕೇ? 'ಕಣ್ತೆರೆದ ಕನ್ನಡಿಗರು' ಕನ್ನಡವನ್ನು ಮರೆಯುತ್ತಿರಬೇಕೇ? ಚೆನ್ನಬಸಪ್ಪನವರು, ಚಂದ್ರೋದಯದ ಗದಿಗೆಯ್ಯನವರು, ತಿರುಳ್ಗನ್ನಡದ ತಿರುಕನೆಂದುಕೊಂಡ ಉತ್ತಂಗಿ ಚೆನ್ನಪ್ಪನವರು, ಆಲೂರು ವೆಂಕಟರಾಯರು ಸಾಗುಮಾಡಿದ ನೆಲದಲ್ಲಿ ನಾವು ಇಂಥ ಸಂಕರದ ಬೆಳೆ ಕಾಣುತ್ತಿರಬೇಕೇ?

ಪ್ರಸಾರ ಮಾಧ್ಯಮಗಳಲ್ಲಿ ಪತ್ರಿಕೆಗಳು ಶಿಷ್ಟತೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರವಹಿಸಬೇಕು. ದಿನ ಪತ್ರಿಕೆಗಳು, ವಾರಪತ್ರಿಕೆಗಳು ಕನ್ನಡ ನಾಡಿನಲ್ಲೆಲ್ಲ ಪ್ರಸಾರ ಪಡೆಯಬೇಕಾದರೆ ಸರಿಗನ್ನಡದ ಬಳಕೆ ಅವಶ್ಯ. ಕಾದಂಬರಿ, ಸಣ್ಣ ಕತೆಗಳಲ್ಲಿ ಕೂಡ ಸಂಭಾಷಣೆಯ ವೈಶಿಷ್ಟ್ಯಗಳನ್ನು ಎತ್ತಿ ತೋರಿಸುವ ಪ್ರಸಂಗಗಳನ್ನು ಬಿಟ್ಟು ಉಳಿದೆಡೆಗಳಲ್ಲಿ ಶಿಷ್ಟಕನ್ನಡದ ಪ್ರಯೋಗ ಮಹತ್ವದ್ದಾಗಿದೆ. ಭಾಷೆಯ ವಿವಿಧ ವೈಶಿಷ್ಟ್ಯಗಳನ್ನೇ ತೋರಿಸುವ ಬರೆಹಗಳ ಹೊರತಾದ ಇತರ ಬರವಣಿಗೆಯೆಲ್ಲ ಇಂತಹ ಶಿಷ್ಟಕನ್ನಡದಲ್ಲಿ ಬರುವುದೇ ಹಿತಕರ. ಸಾಹಿತ್ಯದ ಅಭ್ಯಾಸಿಗಳು, ವಿಮರ್ಶಕರು ಇಂದು ಬಳಸುವ ಭಾಷೆ ಸರ್ವಮಾನ್ಯವಾಗಿದೆ. ಸಾಹಿತ್ಯದ ಬೆಳವಣಿಗೆ, ಬರೆಹಗಳ ಪ್ರಸಾರ ಹೆಚ್ಚಿದಂತೆಲ್ಲ ಆಡುಗನ್ನಡ ಬರೆಯುವ ಕನ್ನಡದಲ್ಲಿ ವ್ಯತ್ಯಾಸ ಕಡಿಮೆಯಾಗುತ್ತ ಹೋಗುತ್ತದೆ. ಇಂದಿನ ಬರೆಹಗಳಿಗೆ ವಿಶಾಲ ಸಂಪರ್ಕದ ಅನುಕೂಲತೆಯಿದೆ. ಹಿಂದಿನ ಕಾಲದಲ್ಲಿಯಂತೆ ಪ್ರಾದೇಶಿಕ ಸಂಕುಚಿತತೆ ಉಳಿದಿಲ್ಲ.

ಕನ್ನಡ ಕಾದಂಬರಿಕಾರರನೇಕರು ಪ್ರಾದೇಶಿಕ ಕನ್ನಡವನ್ನು— ಅಲ್ಲಲ್ಲಿ ದೇಶಿ ನುಡಿಗಳನ್ನು— ಬಳಸಿ ಪ್ರಭಾವಯುತವಾಗಿ ಬರೆದಿದ್ದಾರೆ. ಕೆಲವರು ಹಾಸ್ಯಮಾಡಿದ್ದಾರೆ. ಇಂದಿಗೂ ಕನ್ನಡ ಚಲಚಿತ್ರಗಳಲ್ಲಿ ಧಾರವಾಡದ ಕನ್ನಡದ ಅಪಹಾಸ್ಯ ಕಂಡುಬರುತ್ತಿದೆ. ಅಪಹಾಸ್ಯಕ್ಕೆ ಮಾತ್ರ ಉಪಯೋಗವಾಗುವಂತಹ ಕನ್ನಡವನ್ನು ನಾವು ರೂಢಿಸಿಕೊಳ್ಳಬಾರದು. ಭಾಷೆಯ— ಆಡುಮಾತಿನ ಶಕ್ತಿ, ಚೆಲುವನ್ನು ನಾವು ಅರ್ಥಮಾಡಿಕೊಳ್ಳಬೇಕು. ಧಾರವಾಡಕ್ಕೆ ಇರುವ ವೈಶಿಷ್ಟ್ಯದಂತೆ ಇತರ ಪ್ರದೇಶಗಳಲ್ಲಿಯೂ ವೈಶಿಷ್ಟ್ಯಪೂರ್ಣ ಸತ್ವಯುತ ಮಾತುಗಳಿವೆ. ಅವುಗಳನ್ನು ಹೀಯಾಳಿಸುವುದು ನಮ್ಮ ಗುರಿಯಾಗಬಾರದು. ಆದರೆ ಅವುಗಳಲ್ಲಿಯ ಕನ್ನಡ ಸತ್ವವನ್ನು ಅರಿತುಕೊಂಡು ಶಿಷ್ಟಕನ್ನಡವನ್ನು ಪುಷ್ಟಗೊಳಿಸಬೇಕು.

ಬೆಳೆಯುವ ಕನ್ನಡ, ಆಡುವ ಕನ್ನಡದ ಹರಹು ವಿಶಾಲವಾಗಿರಬೇಕು, ಗೌರವಪೂರ್ಣವಾಗಿರಬೇಕು. ಗಂಭೀರವಾಗಿರಬೇಕು. ಸರಳವೂ ಆಗಿರಬೇಕು. ಏಕರೂಪದ ಶಿಷ್ಟಕನ್ನಡದ ಬಳಕೆ ಬೇಕೆಂದರೆ ಪ್ರಾದೇಶಿಕ ಕನ್ನಡದ ಚೆಲುವನ್ನು ಅಲ್ಲಗಳೆದಂತಲ್ಲ. ಇತರ ಭಾಷೆಯನ್ನು ದ್ವೇಷಿಸಿದಂತೂ ಅಲ್ಲ. ಇದು ದುರಭಿಮಾನವೂ ಅಲ್ಲ. ಕನ್ನಡದ ಅನೇಕ ಪತ್ರಿಕೆಗಳಲ್ಲಿ ಅಚ್ಚಿನ ದೋಷಗಳಲ್ಲದೆ ಭಾಷೆಯ ದೋಷಗಳೂ ಅನೇಕ. ವೇಷ-ವೇಶವಾಗುತ್ತದೆ. ದೇಶ-ದೇಸವಾಗುತ್ತದೆ. ಕೆಲವೆಡೆಗೆ ಮಾತಿನಲ್ಲಿ ಇಂಥ ಉಚ್ಚಾರಗಳಿದ್ದುದನ್ನು ನಾವು ಅಲ್ಲಗಳೆಯುವಂತಿಲ್ಲ—ವಾದರೂ ಬರೆಹದಲ್ಲಿ ಬಂದರೆ ದೋಷಗಳೆಂದೇ ಹೇಳಬೇಕಾಗುತ್ತದೆ. "ಕಾರ್ಯೇಶು ದಾಸೀ ಕರುಣೇಶು ಮಂತ್ರಿ" ಎಂದು ಶು, ಷು ಗಳ ಭೇದವಿಲ್ಲದ ಅವತರಣಿಕೆಗಳು ಕನ್ನಡ ಪುಸ್ತಕಗಳಲ್ಲಿ ದೊರಕುತ್ತವೆ. 'ಕರ್ಣ'ವು ಕರುಣವಾದದ್ದು ಕನ್ನಡೀಕರಣವಿರಬೇಕು! ನಾವು

ತಿದ್ದಿ ತೀಡಿ ಮಾತನಾಡಬೇಕೆಂದೇನೂ ಇಲ್ಲ. ಕಾಲಾವಧಿಯಲ್ಲಿ ನಮಗೆ ಅರಿವಾಗದಂತೆಯೇ ಭಾಷೆಯಲ್ಲಿ ಅಚ್ಚುಕಟ್ಟುತನ ಬಂದೇಬಿಡುತ್ತದೆ. ಸ್ವಾಭಾವಿಕವೆಂಬಷ್ಟು ಸುಲಭವಾಗಿಬಿಡುತ್ತದೆ. ಲಿಪಿ-ಬರೆಹಗಳು ಮಾತಿಗೆ ಕೊಡುವ ದೀಕ್ಷೆ ಇದು. ಲಿಪಿಗಳಿಲ್ಲದ ಭಾಷೆಗಳಲ್ಲಿ ಪ್ರಾದೇಶಿಕ ಉಚ್ಚಾರ ವೈವಿಧ್ಯಗಳು ಜಾಸ್ತಿ- ಆದ್ದರಿಂದ ಅಚ್ಚುಕಟ್ಟುತನ ಕಠಿಣ.

ಗೋಡೆ ಬರೆಹಗಳಲ್ಲೂ ತಪ್ಪುಕನ್ನಡವೇ ಕಂಡು ಬರುತ್ತಿರಬೇಕೇ? ನಿಷೇಧ- ನಿಷೇದ ಭೇದ- ಬೇಧವಾಗುತ್ತಿರುವದು ತೀರ ಸಾಮಾನ್ಯ. ಕನ್ನಡ ಜ್ಞಾನವಿಲ್ಲದವರೇ ಇಂಥ ಬರೆಹಗಳ ಕರ್ತೃಗಳಾಗಿರುತ್ತಾರೇನೋ! ಬೆಂಗಳೂರಿನಂಥ ನಗರದಲ್ಲಿಯೂ ಇಂಥ ತಪ್ಪು ಬರೆಹಗಳು ಕಂಡು ಬರುತ್ತವೆ. ಬೆಳಗಾವಿಯಂಥ ನಗರಗಳಲ್ಲಿ ಕನ್ನಡದಲ್ಲಿ ಬರೆಯುತ್ತಾರೆ. ವಾಕ್ಯಗಳೂ ತಪ್ಪಾಗಿರು-ವದು ಅಷ್ಟೇ ಸಾಮಾನ್ಯ. ದೀರ್ಘ-ಮಹಾಪ್ರಾಣಗಳ ತಪ್ಪು ಉಪಯೋಗವೇ ಕಂಡು ಬಂದೀತು.

ದಿ. ಗೋವಿಂದ ಪೈಯವರು ಹೇಳಿದಂತೆ 'ಕಂಡಿತ' ಎಂಬುದೇ ನಿಜವಾದ ಅರ್ಥದ ಕನ್ನಡ ಪದ. ಖಂಡಿತ ಎಂದರೆ ಸಂಸ್ಕೃತದಲ್ಲಿ ಮತ್ತು ಸಂಸ್ಕೃತಜನ್ಯ ಭಾಷೆಗಳಲ್ಲಿ ತುಂಡಾದದ್ದು ಎಂಬ ಅರ್ಥವಿದೆ. ಆದರೂ ಖಂಡಿತ ಎಂಬುದೇ ನಮ್ಮ ಭಾಷೆಯಲ್ಲಿ ಪ್ರಚಾರ ಪಡೆದು ಬಳಕೆಯಲ್ಲಿ ಬಂದಿದೆ. ಅಲ್ಪಪ್ರಾಣ, ಮಹಾಪ್ರಾಣಗಳ— ದೋಷಗಳು ಆಕಾಶವಾಣಿ ದೂರದರ್ಶನಗಳಲ್ಲೂ ಬರುತ್ತಿದ್ದುದರ ಬಗ್ಗೆ ಅನೇಕರು ಟೀಕಿಸಿದ್ದಾರೆ. 'ಕ್ಯಾತ ನಟಿಯರು.' 'ದುರ್ಭಲರ ಏಳಿಗೆಗಳು' ಆಗಾಗ ಕೇಳಬರುವ ಪ್ರಯೋಗಗಳೇ. 'ಶಾಖಾಹಾರಿ'ಯಲ್ಲಿಯ ಮಹಾಪ್ರಾಣ ಸರಿಯೇ? ಆದರೂ ಅದರ ಉಪಯೋಗ ಹೆಚ್ಚುತ್ತಿದೆ. ಶಾಕ ಎಂದರೆ ತರಕಾರಿ, ಶಾಖ ಎಂದರೆ ಉಷ್ಣತೆ, ಶಾಖಾ ಎಂದರೆ ಟೊಂಗೆ. ಆದರೆ ಇಂದು ನಮ್ಮ ಉಪಾಹಾರ ಮಂದಿರಗಳು 'ಶಾಖಾಹಾರ'ವನ್ನು ದಪ್ಪಕ್ಷರಗಳಲ್ಲಿ ಬರೆದು ನಮ್ಮ ಅಶುದ್ಧ ಭಾಷೆಯನ್ನೇ ಪ್ರದರ್ಶಿಸುತ್ತಿವೆಯಲ್ಲ! ಈ ಮಂದಿರಗಳು ತಿಂಡಿ ತೀರ್ಥಗಳಿಗೂ ಕನ್ನಡದ್ದಲ್ಲದ ಹೆಸರಿಟ್ಟು ಆಕರ್ಷಿಸುವುದು ಸರಿಯೇ? ಕೇಸರಿ ಬಾತು, ಪೂರಿಸಾಗು, ಬಿ. ಬಿ. ಬಾತುಗಳ- ಸಿಹಿ ಸಜ್ಜಿಗೆ, ಪುರಿ ಪಲ್ಯ, ಬಿಸಿ ಬೇಳೆ ಅನ್ನ ಎಂಬ ಸರಿಗನ್ನಡದ ಹೆಸರಿನಲ್ಲಿ ಆಕರ್ಷಣೆ ಪಡೆಯಲಾರವೇ?

ಕನ್ನಡ ಬರೆಹಗಾರರ ತಪ್ಪು ಪ್ರಯೋಗಗಳಿಗೂ ಕಡಿಮೆ ಇಲ್ಲ. ಅಸೂಯೆ-ಅಸೂಹೆಯೆಂದಾಗುತ್ತದೆ. ತೀಕ್ಷಣ ಎಂದು ಬರೆಯುವವರು ತೀಕ್ಷ್ಣವನ್ನು ಸುಲಭಗೊಳಿಸುತ್ತಿದ್ದಾರೆಯೋ? ಆತುರ, ಕಾತರಗಳ ಭೇದವನ್ನು ತೋರಿಸದ ಬರೆಹಗಳನ್ನು ಅನೇಕ ಸಲ ನೋಡಬಹುದು. 'ಕಾತುರ' ಎಂಬ ಪದಪ್ರಯೋಗ ನೋಡಿದಾಗ "ಬರೆಹಗಾರರು ಶಬ್ದಕೋಶವನ್ನೇ ಉಪಯೋಗಿಸುವದಿಲ್ಲವೇನೋ" ಎಂದು ಯಾರೋ ಟೀಕಿಸಿದ್ದನ್ನು ಎತ್ತಿ ಹೇಳಬೇಕಾಗುತ್ತದೆ. 'ಕೀಸರು' ಕಿಸಿರು ಎಂದು ಬರೆಯಲ್ಪಡುತ್ತದೆ. 'ಇಂದ್ರ ಛಾಪ' ಎಂದು ಬರೆಯುವವರೂ ಇದ್ದಾರೆ. ಈರ್ಷೆ ಎಂದು ಬರೆಯುವುದನ್ನೂ ನೋಡಬ-ಹುದು. ಸಂಸ್ಕೃತದ ಈರ್ಷಾ ಕನ್ನಡಕ್ಕೆ ಬರುವಾಗ 'ಯ'ದ ಒತ್ತನ್ನು ಪಡೆಯುವದವಶ್ಯವೇ? ಕೆಲ ಬರೆಹಗಳಲ್ಲಿ ಋಕಾರದ ತಪ್ಪು ಪ್ರಯೋಗಗಳು ಕಂಡು ಬರುತ್ತವೆ. 'ಶ್ರೀಂಗೇರಿ' ಎಂದು ಬರೆಯುವ ದಿನಪತ್ರಿಕೆಗಳು ನಮ್ಮಲ್ಲಿವೆ. ಶೃಂಗೇರಿಗೆ ಶ್ರೀಕಾರವನ್ನು ಕೊಡುವ ಪ್ರಯತ್ನವೇನೋ! ಆದರೆ ಶ್ರೀಮದ್ ಆನಂದತೀರ್ಥರು ಶ್ರೀ "ಮದಾನಂದತೀರ್ಥ" ಆಗುವುದನ್ನು ನಾವು ಸಾಮಾನ್ಯವಾಗಿ ನೋಡಬಹುದು. ನಗೆಪಾಟಲು ಪಡಿಪಾಟಲುಗಳು ಕನ್ನಡ ಪುಸ್ತಕಗಳಲ್ಲಿ ಸೇರಿಬಿಟ್ಟಿವೆ. ನಗೆಗೇಡು ಪರೆದಾಟ ಮರೆಯಾಗಿವೆ. ಕನ್ನಡ ಸರಿಯಾಗಿ ಬರೆಯಲ್ಪಡಬೇಕೆಂಬ ಪ್ರಜ್ಞೆಯನ್ನು ಮರೆತು ಬರೆಹಕ್ಕೆ ತೊಡಗಿದರೆ ನಮ್ಮ ಬೆಳೆಯುವ ಕನ್ನಡ ಸರಿಗನ್ನಡವಾಗುವ ಬಗೆ ಹೇಗೆ?

ಅನುವಾದ ಕನ್ನಡದಲ್ಲಿಯ ಅವಾಂತರಗ-ಳನ್ನೂ ಅನೇಕ ರೀತಿಯಲ್ಲಿ ನೋಡಬಹುದು. 'ಪ್ರತಿಫಲಿತ'ವನ್ನು 'ಪ್ರತಿಧ್ವನಿತ' ಎಂಬರ್ಥದಲ್ಲಿ ಉಪಯೋಗಿಸುವವರೂ ಇದ್ದಾರೆ. 'ರೇಡಿಓ ವಾಲ್ವ'ಗೆ ಅನೇಕ ಸಲ ಇಂಗ್ಲೀಷಿನಲ್ಲಿ

'ಟ್ಯೂಬ' ಎಂದೂ ಬರೆಯಲಾಗುತ್ತದೆ. ಅದನ್ನು ಕನ್ನಡಕ್ಕೆ 'ನಾಳ' ಇಲ್ಲವೆ 'ಕೊಳವೆ' ಎಂದು ಅನುವಾದಿಸುವುದು ಸರಿಯೇ? ವಿದ್ಯುತ್ ಬಲ್ಬು ಕನ್ನಡದಲ್ಲಿ ಉಳಿದರೆ 'ವಾಲ್ವ' ಕೂಡ ಉಳಿಯಬಹುದೇನೋ. ಇಲ್ಲವಾದರೆ 'ಗೋಲಕ' ಎಂಬ ಶಬ್ದ ಹೆಚ್ಚು ಸಮರ್ಪಕವಾದೀತು. ಕನ್ನಡದ ವಿಶ್ವಕೋಶದಂತಹ ಗ್ರಂಥಗಳಲ್ಲಿಯೂ ಇಂತಹ ಅವಾಂತರಗಳನ್ನು ಕಾಣಬಹುದು. ಉದಾಹರಣೆಗೆ 'ಆಂದೋಲನ ಲೇಖಕ' ಎಂದರೆ ಸಾಮಾನ್ಯವಾಗಿ ಆಂದೋಲನಗಳಿಗಾಗಿ ಬರೆಯುವವನೆಂದು ಅರ್ಥಮಾಡಿಕೊಳ್ಳಬಹುದೇನೋ! ಆದರೆ ಅದು 'ಆಸಿಲೋಸ್ಕೋಪ'ದ ಅನುವಾದ. ಇಂಗ್ಲೀಷಿನ ತಾಂತ್ರಿಕ ಶಬ್ದಗಳಿಗೆ ಸೂಕ್ತ ಕನ್ನಡ ಶಬ್ದಗಳನ್ನು ಹುಡುಕುವುದು ಬಹಳ ಕಷ್ಟದ್ದು. ಆದರೆ ಹುಡುಕಿದ ಶಬ್ದ ಅಪಾರ್ಥವನ್ನು ಕೊಡುತ್ತದೆಯೇ ಎಂಬುದನ್ನು ಪರಿಶೀಲಿಸದಿದ್ದರೆ ಇಂಥ ಬೃಹತ್ ಗ್ರಂಥಗಳ ಉದ್ದೇಶವೇ ಫಲಿಸಲಾರದು. 'ತರಂಗ ದರ್ಶಕ'ವೆಂದೋ, 'ಅಲೆ ದರ್ಶಕ'ವೆಂದೋ ಬರೆದಿದ್ದರೆ ಹೆಚ್ಚು ಅರ್ಥಪೂರ್ಣವಲ್ಲವೇ? ಅದೇ ಮಹಾ ಗ್ರಂಥದಲ್ಲಿ 'ಅಸುತೋಷ್' ಮುಖರ್ಜಿಯ ಬಗ್ಗೆಯೂ ನೋಡಬಹುದು. ಆಶುತೋಷ ಎಂಬುದು ಶಿವನ ಹೆಸರು. ತೀವ್ರ ಸಂತೋಷಪಡುವವನು ಎಂಬ ಅರ್ಥವುಳ್ಳದ್ದು. ಇಂತಹ ಹೆಸರು ಪಡೆದ ಮಹಾನುಭಾವರು 'ಅಸುತೋಷ್' ಎಂದಾಗಬೇಕೇ? ಈ ಎಲ್ಲ ಬರೆಹಗಳಲ್ಲಿ ಸರಿಗನ್ನಡದ ಪ್ರಜ್ಞೆ ಸ್ಫುಟವಾಗಿಲ್ಲವೆಂದೇ ಅನಿವಾರ್ಯವಾಗಿ ಹೇಳಬೇಕಾಗುತ್ತದೆ.

ನಮ್ಮ ಗಡಿನಾಡಿನ ಕನ್ನಡ ಜನ ಸಾಕಷ್ಟಿದ್ದ ಊರು ಗಡಹಿಂಗ್ಲಜ. ಕರ್ನಾಟಕದ ಪಾಲಿಟೆಕ್ನಿಕ್‌ಗಳಲ್ಲಿ ಪ್ರವೇಶಕ್ಕೆ ಸಂಬಂಧಿಸಿದ ಅಧಿಸೂಚನೆಯಲ್ಲಿ 'ಗಾಧಿನ್ ಗ್ಲಾಜ್' ಎಂದು ರೂಪಗೊಳ್ಳುತ್ತಿರಬೇಕೇ? ಇಂಗ್ಲೀಷಿನಲ್ಲಿ ಬಳಕೆಯಲ್ಲಿರುವ Protected water ಸುರಕ್ಷಿತ ನೀರೆಂದು ಅಕ್ಷರಶಃ ಅನುವಾದಿಸುವುದಕ್ಕಿಂತ ಪರಿಶುದ್ಧ ನೀರು ಎಂದು ಹೇಳುವುದು ಹೆಚ್ಚು ಸೂಕ್ತವಲ್ಲವೇ? ನಿರಾತಂಕವಾಗಿ ಅಥವಾ ಅನಾಯಾಸವೆನ್ನುವುದಕ್ಕೆ ಕರ್ನಾಟಕ ವಾರ್ತಾ ಇಲಾಖೆ




"ಆಡಳಿತ ಭಾಷೆ ಕನ್ನಡವಾದುದರ ಪರಿಣಾಮವೆ!"

'ಸುನಾಯಾಸ' ಎಂಬ ಹೊಸ ಶಬ್ದ ಹುಡುಕಿದೆ!

ಲಘು ಬರೆಹಗಳು ಮಿಶ್ರ ಭಾಷೆಯ ಮೂಲಕವೇ ಹಾಸ್ಯವನ್ನು ತರುತ್ತವೆಯೆಂದು ಕೆಲ ಲೇಖಕರು ಭಾವಿಸಿದಂತಿದೆ. ಕೆಲ ಲೇಖಕರಿಗೆ ಹಿಂದೀ ಶಬ್ದಗಳನ್ನು ಉಪಯೋಗಿಸುವ ಚಪಲ. 'ನಾಮುಕಾವಸ್ಥೆ' (ನಾಮು ಕಾ ವಾಸ್ತೆ)ಯ ಪ್ರಯೋಗ ನಮ್ಮ ಬರೆಹದ ದುರವಸ್ಥೆಯನ್ನೇ ತೋರೀತು! ಜೂಟಾ (ಝೂಠಾ), ದನಿಯಾ (ಧನಿಯಾ) ಎಂಬ ತಪ್ಪು ಪ್ರಯೋಗಗಳಿಂದ ಕನ್ನಡಕ್ಕೂ ಅನ್ಯಾಯ; ಹಿಂದೀಗೂ ಅನ್ಯಾಯ: ತದ್ರೂಪ ಅಥವಾ ಅದೇ ರೂಪ—ಒಂದೇ ಪಡಿಯಚ್ಚು ಎನ್ನುವದಕ್ಕೆ 'ಮಕ್ಕಿಕಾ ಮಕ್ಕಿ' (ಮಕ್ಖಿ ಕಾ ಮಕ್ಖಿ) ಎಂದು ಬರೆಯುವ ಜನರೂ ಇದ್ದಾರೆ. 'ಪೂರ್ವಬಾವಿ' 'ದೂರದರ್ಸನ'ಗಳು ಸಾಮಾನ್ಯವಾಗಿ ಕೇಳಿಬರುವ ಶಬ್ದಗಳು.

ಅದೆಷ್ಟೋ ಸಲ ಕನ್ನಡದ ಸೇವೆಯೆಂದು ದುಡಿಯುವ ಪ್ರಜ್ಞಾವಂತರೂ ಸಿಕ್ಕುವುದು ಕಷ್ಟವೇನೋ! ಸರಕಾರದ ಹಣ ಪಡೆದು ಕೆಲಸ ಮಾಡುವವರನೇಕರು ಕೆಲ ಸಣ್ಣ ಸಣ್ಣ ವಿಷಯಗಳತ್ತ ಲಕ್ಷ್ಯ ಪೂರೈಸುವದಿಲ್ಲವಲ್ಲ ಎಂದು ಮನಸ್ಸಿಗೆ ನೋವೆನಿಸುತ್ತದೆ. ಕನ್ನಡವನ್ನು ಉಳಿಸಿಕೊಂಡು ಬಂದ ಮಹನೀಯರ ದೀಕ್ಷಾಭಾವನೆ ಇಂತಹರಲ್ಲಿ ಇರುವದಿಲ್ಲವೇನೋ! ಸರಿಯಾದ ಕನ್ನಡ ಬರೆಯಬೇಕೆಂಬ ಭಾವನೆ ಮೂಲವಾಗಿ ಶಿಕ್ಷಕರಿಂದಲೂ ಪಾಲಕರಿಂದಲೂ ಮೂಡಿ ಬರಬೇಕು. ಕನ್ನಡದ ಶಿಕ್ಷಕರೂ ಇದರ ಬಗ್ಗೆ ಅಷ್ಟು ಆಸ್ಥೆ ತೋರಿಸುತ್ತಿಲ್ಲವೇನೋ. ತಂದೆ-ತಾಯಂದಿರು ಅಚ್ಚಕನ್ನಡದ ಬಗ್ಗೆ ಉಪೇಕ್ಷೆ ತಾಳುತ್ತಿದ್ದಾರೆಯೇ? ಇಂಗ್ಲೀಷ್ ಭಾಷೆಯಲ್ಲಿ ವಾಕ್ಯಗಳನ್ನು ತಿದ್ದಿ ಬರೆಯಿರಿ, ಸ್ಪೆಲಿಂಗುಗಳನ್ನು ಸರಿಪಡಿಸಿರಿ ಎಂದು ಮುಂತಾಗಿ ಕಲಿಸುವ ರೀತಿಗಳಿದ್ದಂತೆ ಕನ್ನಡ ಕಲಿಸುವದರಲ್ಲಿ ಕಂಡುಬರುವದಿಲ್ಲ. ಪರೀಕ್ಷೆಗಳಿಗಾಗಿ ಹೇಗೋ ಸಿದ್ಧತೆ ಮಾಡಿ ಗುಣ ದೊರಕಿಸುವ ಗುರಿಯೊಂದನ್ನು ವಿದ್ಯಾರ್ಥಿಗಳು ಕಲಿಯುತ್ತಾರೆಂದು ತೋರುತ್ತದೆ. ಇಂಗ್ಲೀಷಿನಲ್ಲಿ ತಪ್ಪುಗಳನ್ನು (Howlers) ತಿದ್ದುವುದೊಂದು ಮಹತ್ವದ ಅಭ್ಯಾಸ ಕ್ರಮವಾಗಿರುವಂತೆ ಕನ್ನಡದ ಪರಿಶುದ್ಧತೆಗೂ ಅವಶ್ಯವಲ್ಲವೇ? ಇಂಗ್ಲೀಷಿನ ಅಭ್ಯಾಸಕ್ಕೆ ಶಬ್ದಕೋಶದ ಸ್ನೇಹ ಅವಶ್ಯವಿದ್ದಂತೆ ಕನ್ನಡದವರಿಗೂ ಇದೆಯಲ್ಲವೇ? ಆದರೂ 'ಇಂಟು' ಸ್ಥಳದಲ್ಲಿ ರುಜು ಹಾಕುವದೆಂದರೆ 'ಇಂಟು'ವಿನ ಅರ್ಥ ಯಾವ ಕೋಶದಲ್ಲಿ ಸಿಕ್ಕೀತು? ಕನ್ನಡದ್ದೇ ಆಗಲಿ, ಇಂಗ್ಲೀಷಿನದೆ ಆಗಲಿ, ಶಬ್ದಕೋಶದಲ್ಲಿ ಕತ್ತರಿ ಗುರುತು ಅಥವಾ ಗುಣಿಸುವ ಸಂಕೇತವೆಂದು ಹೇಳುವದೇ ಇಲ್ಲ! ಬರಿಗೈಯಾದಾಗ 'ಪಾಪರ್' ಆಗುವದೂ, ಬೇಜಾರು ಮಾಡುವಂತಹದು 'ಬೋರ್' ಆಗುವದೂ ಕನ್ನಡದ ರೀತಿಯಲ್ಲವಲ್ಲ!!

ದಿ. ಬೇಂದ್ರೆಯವರಿಗೆ ತಿಳಿಗನ್ನಡದ ಆಕರ್ಷಕ ಪುಟ್ಟ ಶಬ್ದಗಳನ್ನು ಹಿಂದಿನ ಕಾವ್ಯಗಳ ಶಬ್ದಭಾಂಡಾರದಿಂದ ಎತ್ತಿ ಅವುಗಳನ್ನು ತಮ್ಮ ಕವನಗಳಲ್ಲಿ ಉಪಯೋಗಿಸುವ ಹವ್ಯಾಸವಿತ್ತೆಂದು ಪ್ರೊ. ಮುಗಳಿಯವರು ಹೇಳಿದ್ದಾರೆ. ಅಂತಹ ಶಬ್ದಗಳನ್ನು ಉತ್ತರ ಕರ್ನಾಟಕದ ಜಾನಪದ ಧಾಟಿಯಲ್ಲಿ ಅವರು ಪ್ರಸಾರ ಮಾಡಿದ್ದಾರೆಂದು ಹೇಳಬಹುದು. ಉದಾಹರಣೆಗೆ ಅವರ "ಕುಣಿಯೋಣು ಬಾರs" ಎಂಬ ಹಾಡಿನ ಮೋಡಿ ಇಂತಹ ಅನೇಕ ಶಬ್ದಗಳನ್ನು ಕನ್ನಡ ನಾಡಿನಲ್ಲಿ ಪರಿಚಯಿಸಿದೆ. ಕನ್ನಡದ ವಾರ ಪತ್ರಿಕೆಯೊಂದು "ಕುಣಿಯೋಣು ಬಾರಾ" ಎಂಬ ಶೀರ್ಷಿಕೆಯಲ್ಲಿ ಒಂದು ಪ್ರತ್ಯೇಕ ಪುಟವನ್ನೇ ಮಕ್ಕಳಿಗಾಗಿ ಮೀಸಲಿಟ್ಟಿದೆ. ಆದರೆ ಆ ಹಾಡಿನಲ್ಲಿ ಮಕ್ಕಳನ್ನು ಕುಣಿಯಲು ಕರೆದ ಅರ್ಥವಿಲ್ಲ. 'ಬಾರs' ಎಂಬ ಉತ್ತರ ಕರ್ನಾಟಕದ ಪ್ರಯೋಗದ ಸರಿಯಾದ ಅರ್ಥ 'ಬಾರಾ' ಎನ್ನುವದರಲ್ಲಿಲ್ಲ. 'ಬಾರೇ' ಎಂಬ ನಿಜವಾದ ಅರ್ಥ ಮೈಸೂರು ಪ್ರದೇಶದ ಅನೇಕರಿಗೆ ಅರ್ಥವಾಗಿರಲಿಕ್ಕಿಲ್ಲ. ಉತ್ತರ ಕರ್ನಾಟಕದ ಜಾನಪದ ಭಾಷೆಯ ಪರಿಚಯವಿಲ್ಲದವರು 'ನಂಕಾಕ್ ಕಟ್ ಹೋಗ್ಯಾನ್' ಎಂದು ಬರೆಹಕ್ಕೆ ಇಳಿಸಿ ತಲೆ ತುರಿಸಬಹುದು. 'ನಮ್ಮ ಕಕ್ಕ ಕಟ್ಟಿ ಹೋಗ್ಯಾನ' ಎಂಬರ್ಥ ಸ್ಪಷ್ಟವಾಗಲಿಕ್ಕಿಲ್ಲ. 'ಎಡ್ ಕಿವಿ' ಎಂದು ಬರೆದರೆ 'ಯಾಡ್ (ಎರಡು) ಕಿವಿ'ಯ ಅರ್ಥವಾದೀತೇ? 'ಬರವಟಿಗೇನೆ' ಎಂದರೆ ಬರುವಷ್ಟರಲ್ಲಿ ಎಂಬ ಅರ್ಥ ಮಾಡಿಕೊಂಡ ಮೇಲೂ ಮೈಸೂರು ಕನ್ನಡಕ್ಕೆ

# ಲೈಫ್‌ಬಾಯ್ ಎಲ್ಲಿದೆಯೋ, ಅಲ್ಲಿದೆ ಆರೋಗ್ಯ!




ಆರೋಗ್ಯಮಯ ಲೈಫ್‌ಬಾಯ್.
ಕೆಲಸದೊಡನೆ ದಿನವಿಡಿ ಹೋರಾಟ— ಭಾರವಾದ
ಆಟ-ಓಟ. ಇವುಗಳ ನಂತರ ಲೈಫ್‌ಬಾಯ್
ಸ್ನಾನಕ್ಕಿಂತ ಮಿಗಿಲಾದದ್ದು ಬೇರೊಂದಿಲ್ಲ...
ಆ ಸ್ವಚ್ಛತೆಯು, ಆರೋಗ್ಯದ ಆ ಉಲ್ಲಾಸಕರ
ಸುಖಾನುಭವ...ಸದಾ ನಿಮಗೆ!




## ಲೈಫ್‌ಬಾಯ್

ಕೊಳೆಯಲ್ಲಿರುವ ಕ್ರಿಮಿಗಳನ್ನು ತೆಗೆದುಬಿಡುತ್ತದೆ.

INTAS-L95 1711 KN

ಹಿಂದುಸ್ತಾನ್ ಲೀವರ್ ಅವರ ಉತ್ಕೃಷ್ಟ ಉತ್ಪಾದನೆ

ಹತ್ತಿರವಾದ 'ಬರುವಷ್ಟಕ್ಕೇನೆ' ಎಂಬುದನ್ನು ತಿಳಿದುಕೊಳ್ಳದಿದ್ದರೆ ಸ್ವಾರಸ್ಯವೆಲ್ಲಿದೆ?

ಭಾಷಾಶಿಕ್ಷಣ ಈಗ ಹೆಚ್ಚು ಕ್ರಮಬದ್ಧವಾಗಬೇಕು. ಭಾರತದಲ್ಲಿ ತ್ರಿಭಾಷಾ ಸೂತ್ರವೇ ತಾರಕವಾದದ್ದು; ಹಿತವಾದದ್ದು. ಉತ್ತರ ಭಾರತದಲ್ಲಿ ಕನ್ನಡ ಕಲಿಸುವ, ಕನ್ನಡ ಕಲಿಯುವ ಜನ ಹೆಚ್ಚಾಗಬಹುದಾಗಿದೆ. ಇಂತಹ ಗೌರವ, ಯೋಗ್ಯತೆ ಪಡೆಯಬಹುದಾದ ಶಿಷ್ಟ ಕನ್ನಡ-ಸಿರಿಗನ್ನಡ ಹೆಚ್ಚೆಚ್ಚು ರೂಢವಾಗಬೇಕು. ನಮ್ಮ ಕನ್ನಡವನ್ನು ಬೇರೆಯವರು ಉತ್ಸಾಹದಿಂದ ಕಲಿಯಬೇಕೆಂದರೆ ಅದು ಸರಳವೂ ಸುಂದರವೂ ಎನಿಸಬೇಕಲ್ಲವೆ? ಭಾವೈಕ್ಯದ ಕನ್ನಡ ನಮ್ಮ ನಾಡಿನಲ್ಲಿಯೂ ಏಕಭಾವನೆಯನ್ನು ಹುಟ್ಟಿಸಬೇಕು. ಭಾರತದ ಇತರ ಭಾಗಗಳಲ್ಲಿ ಕನ್ನಡದ ಕಂಪನ್ನು ಪಸರಿಸಬೇಕು. ಹಾಗಾಗಬೇಕಾದರೆ ನಮ್ಮ ಕನ್ನಡ ಸರಿಗನ್ನಡವಾಗಬೇಕು. ಅದೇ ಸಿರಿಗನ್ನಡ ಅಲ್ಲವೇ?

ಕನ್ನಡ ಪುಸ್ತಕಗಳಲ್ಲಿಯ ಮುದ್ರಣದೋಷಗಳಂತೂ ವಿಶೇಷವೆಂದೇ ಹೇಳಬೇಕು. ಇಂತಹ ದೋಷಗಳು ಒಮ್ಮೊಮ್ಮೆ ಬರೆಹಗಾರನ ದೋಷಗಳನ್ನು ಮುಚ್ಚಿಕೊಳ್ಳುತ್ತವೆಯಾದರೂ ಅನೇಕ ಸಲ ಅಭಿಪ್ರಾಯಗಳ ತೀಕ್ಷ್ಣತೆಯನ್ನು ಕಡಿಮೆ ಮಾಡುತ್ತವೆ. ಇನ್ನೂ ಕೆಲ ಸಲ ಅಪಾರ್ಥವನ್ನೂ ಕೊಡುತ್ತವೆ. ಮುದ್ರಣ ದೋಷಗಳ ಬಗ್ಗೆ ಅಲಕ್ಷ್ಯವೆಂದರೆ ಕನ್ನಡ ಪ್ರಕಟಣಾ ಪ್ರಪಂಚದ ಮಟ್ಟಕ್ಕೆ ಹಿಡಿದ ಕನ್ನಡಿಯೆಂದೇ ಹೇಳಬೇಕು. ಶಬ್ದಗಳ ವಿನ್ಯಾಸ-ಸರಿಯಾದ ಉಚ್ಚಾರಗಳ ಬಗ್ಗೆ ಬರೆಯುವವರಿಗಂತೂ ಇಂತಹ ದೋಷಗಳು ತಲೆ ಬೇಸರವನ್ನು ತರುತ್ತವೆ. ಶ್ರೀ ಶಂ. ಬಾ. ಜೋಶಿಯವರ ಪುಸ್ತಕಗಳಲ್ಲಿರುವ ತಾತ್ವಿಕ ವಿಚಾರಕ್ಕೆ-ಶುದ್ಧಾಶುದ್ಧತೆಗಳ ಚರ್ಚೆಗೆ ಮುದ್ರಣ ದೋಷಗಳು ಎಂತಹ ತೊಂದರೆ ತರುತ್ತವೆಯೆಂಬುದನ್ನು ಹೇಳಬೇಕೆ? ಎಂತಲೇ ದಿ. ಗೋವಿಂದ ಪೈಗಳು ಅಚ್ಚಿನ ದೋಷಗಳ ಬಗ್ಗೆ ವಿಶೇಷ ಆಸ್ಥೆವಹಿಸಿ ತಮ್ಮ ಬರೆಹಗಳ ಅಚ್ಚು ಕರಡನ್ನು ತಾವೇ ತಿದ್ದುವ ಪರಿಪಾಠವನ್ನಿಟ್ಟುಕೊಂಡಿದ್ದರಂತೆ.

ತಿಳಿಗನ್ನಡವೂ ಸಂಸ್ಕೃತದಿಂದ ಪುಷ್ಟಗೊಂಡ ಭಾಷೆ. ಆಧುನಿಕ ಸಲಕರಣೆಗಳಿಗೆ ಶಾಸ್ತ್ರೀಯ ಪದಗಳಿಗೆ ನಾವು ಸಂಸ್ಕೃತವನ್ನೇ ಮೊರೆ ಹೋಗುತ್ತೇವೆ. ಈ ಕ್ರಮ ಭಾರತದ ಇತರ ಭಾಷೆಗಳಲ್ಲೂ ಕಂಡುಬರುತ್ತಿದೆ. ಭಾರತದ ಭಾವೈಕ್ಯದ ದೃಷ್ಟಿಯಿಂದ ಇಂತಹ ಶಬ್ದಗಳು ಏಕರೂಪದಲ್ಲಿ ಬಳಕೆಯಲ್ಲಿ ಬಂದಷ್ಟೂ ಯೋಗ್ಯವೇ. ಆಧುನಿಕಗೊಳಿಸುವದು 'ಆಧುನಿಕೀಕರಣ' ಎಂದು ಹಿಂದೀಯಲ್ಲಿ ಪ್ರಚಾರದಲ್ಲಿದ್ದರೆ, ನಮ್ಮಲ್ಲಿ ಅದು 'ಆಧುನೀಕರಣ' ವಾಗಬಾರದು. ಉಪಕುಲಪತಿ ಎಂಬ ಉತ್ತರ ಭಾರತದಲ್ಲಿ ಪ್ರಚಾರದಲ್ಲಿದ್ದ ಪದಕ್ಕೆ ನಾವು 'ಕುಲಪತಿ'ಯೆಂಬ ಶಬ್ದವನ್ನು ಬಳಸುವುದು ಯೋಗ್ಯ ಕಾಣುವುದಿಲ್ಲ. ತಿಳಿಗನ್ನಡ—ಸರಿಗನ್ನಡ ಪ್ರಯತ್ನಪೂರ್ವಕವಾಗಿ ರೂಢಿಯಲ್ಲಿ ತರಬೇಕು. ಸಾರ್ವಜನಿಕ ರಂಗದಲ್ಲಿ, ಪ್ರಸಾರ ಮಾಧ್ಯಮಗಳಲ್ಲಿ ಯೋಗ್ಯ ಪ್ರಯೋಗಗಳ ಬಗ್ಗೆ ಹೆಚ್ಚಿನ ಗಮನ ಅವಶ್ಯ.

ಉತ್ತರ ಭಾರತದಲ್ಲಿ ಕನ್ನಡದ ಬಗ್ಗೆ ಆದರ-ಪ್ರೀತಿ ಹೆಚ್ಚುತ್ತಿದ್ದುದರ ಬಗ್ಗೆ ನಾವು ಹೆಮ್ಮೆ ಪಡಬೇಕು. ಇಂತಹ ಪ್ರೀತಿ-ಗೌರವಗಳು ಹೆಚ್ಚುವ ರೀತಿಯಲ್ಲಿ ಕನ್ನಡ ಬೆಳೆಯಬೇಕು. ಮಧ್ಯ ಪ್ರದೇಶದ ಮಾಜಿ ಮಂತ್ರಿಗಳು ಕನ್ನಡದ ಸೊಗಸನ್ನು ಕಲಕತ್ತೆಯ 'ಭಾವೈಕ್ಯ'ದ ಸಭೆಯೊಂದರಲ್ಲಿ ವರ್ಣಿಸಿದ್ದನ್ನು ಕೇಳಿ ನಾನು ಪುಲಕಿತಗೊಂಡೆ. ಸರಿಗನ್ನಡ ಇಂತಹ ಕೀರ್ತಿಯನ್ನು ಹೆಚ್ಚಿಸುತ್ತಿರಲಿ. ಕನ್ನಡ ನುಡಿ ಚಂದ; ಕನ್ನಡದ ಮುನ್ನಡೆಯೂ ಚಂದ ಎಂಬ ಮಾತು ಸದಾ ಕೇಳುತ್ತಿರಲಿ. ಕನ್ನಡ ಇಂದು ಅಮೇರಿಕದಲ್ಲಿ-ಹಾಲೆಂಡಿನಲ್ಲಿಯೂ ಶೈಕ್ಷಣಿಕ ವಿಷಯವೆನಿಸಿದೆಯಂತೆ. ಮುಂಬಯಿ-ಮದರಾಸು ದೆಹಲಿಗಳಲ್ಲೂ ಕನ್ನಡದ ಕೀರ್ತಿ ಬೆಳೆಯುತ್ತಿದೆ. ಅಲ್ಲೆಲ್ಲ-ಸರಿಗನ್ನಡ-ಶಿಷ್ಟಕನ್ನಡವೇ ಕೇಳಬೇಕಲ್ಲವೇ? ವಿಶ್ವ ಕನ್ನಡವೆನ್ನಿಸುವ ಕಾಲ ಬಂದಿದೆ! ಆ ಎತ್ತರಕ್ಕೆ, ಆ ಕೀರ್ತಿಗೆ ತಕ್ಕುದಾದ ಕನ್ನಡವನ್ನು ಬೆಳೆಸುವ ಹೊಣೆ ನಮ್ಮ ಮೇಲಿದೆ. ❁

# ಸಿಕ್ಕಿದ್ದಾನೆ ಕಥಾನಾಯಕ ಸಿಗಬೇಕಿನ್ನು ಕಥೆ

ಮೂಲ : ಡಾ. ರಾವೂರಿ ಭರದ್ವಾಜ
ಕನ್ನಡಕ್ಕೆ : ಸ. ರಘುನಾಥ

**ಶ್ರೀಮದ್ರಮಾರಮಣ ಗೋವಿಂದೋ ಹರಿಃ**
**ಶ್ರೀ ಆಂಜನೇಯ ವರದ ಗೋವಿಂದೋ ಹರಿಃ**
**ಶ್ರೀ ಪುಂಡರೀಕಾಕ್ಷ ವರದ ಗೋವಿಂದೋ ಹರಿಃ**

...ಈ ರೀತಿಯಾಗಿ ಇಷ್ಟದೇವತಾ ಪ್ರಾರ್ಥನೆಯಂ ಮಾಡಿ, ಸುಕವಿ ಸ್ತುತಿಯನ್ನೂ ಕುಕವಿ ನಿಂದೆಯನ್ನೂ ಮಾಡಿ, ನಾನು ರಚಿಸಲಿರುವ ವಚನ ಮಹಾ ಪ್ರಬಂಧ ಕಥಾ ಕ್ರಮವೆಂತೆನೇ...

ಅವನ ಹೆಸರು ಆನಂದವೂ, ಅವನ ಹೆಸರು ಆಕ್ರೋಶವೂ, ಅವನ ಹೆಸರು ಭಯವೂ, ಅವನ ಹೆಸರು ನಿರ್ಭಯವೂ, ಅವನ ಹೆಸರು ಮೋಹವೂ, ಅವನ ಹೆಸರು ದಾಹವೂ, ಅವನ ಹೆಸರು ಕರುಣವೂ, ಅವನ ಹೆಸರು ಕೋಪವೂ, ಅವನ ಹೆಸರು ದುಃಖವೂ, ಅವನ ಹೆಸರು ದಿಗಿಲೂ, ಅವನ ಹೆಸರು ಮೋಸವೂ, ಅವನ ಹೆಸರು ಹಾಸವೂ...

ಸರಿ ಬಿಡಿ!

ಹೀಗೇ ನಾವು ಹೇಳಿಕೊಳ್ಳಬೇಕೆ ಹೊರ್ತು ಅವನಿಗೆಷ್ಟಾದರೂ ಹೆಸರುಗಳಿವೆ. ಯಾಕೆ ಇರಬಾರದು? ಒಬ್ಬೊಬ್ಬ ದೇವರಿಗೂ ಒಂದೊಂದು ಸಹಸ್ರ ನಾಮಗಳಿಲ್ಲವೆ? ಅವನ್ನು ನಾವು ಅನುಮೋದಿಸಿಲ್ಲವೆ? ಹಾಗಿರುವಾಗ ಅದರಲ್ಲಿ ಅರ್ಧ—ಹೋಗಲಿ ಅರ್ಧದಲ್ಲಿ ಅರ್ಧ—ಬೇಡ, ಕಾಲು ಭಾಗದಲ್ಲಿ ಕಾಲು ಭಾಗ ಹೆಸರುಗಳನ್ನು ನನ್ನ ಕಥಾನಾಯಕನಿಗಿಟ್ಟರೆ ನಿಮ್ಮ ಅಭ್ಯಂತರವಿರಬಾರದು.

ನನ್ನ ಮಾತು ನಂಬಿ.

ನನ್ನ ಕಥಾನಾಯಕನನ್ನು ದೇವರೊಂದಿಗೆ ಸಮೀಕರಿಸುವುದು ನನಗೆ ಸುತರಾಂ ಇಷ್ಟವಿಲ್ಲ. ಇಂಥಿಂಥ ದೇವರಿಗೆ ಸಾವಿರದಷ್ಟು ಹೆಸರುಗಳಿದ್ದಂತೆ, ಇಂಥಿಂಥ ಕಥಾನಾಯಕನಿಗೂ ಅನೇಕ ಹೆಸರುಗಳಿವೆ ಎಂದು ಹೇಳುವುದು ಮಾತ್ರವೇ ನನ್ನ ಉದ್ದೇಶ. ಈ ಹೆಸರುಗಳೆಲ್ಲ ನಾನು ಇಟ್ಟಿದ್ದಲ್ಲ. ಆ ಮಾತಿಗೆ ಬಂದರೆ ಇವು ಹೆಸರುಗಳೂ ಅಲ್ಲ. ಅವನಿಗಿರುವ ಗುಣಗಳು, ಅವನಲ್ಲಿರುವ ಗುಣಗಳು.

ಉದಾಹರಣೆಗೆ— ಅವನ ಹೆಸರು ಆನಂದ ಇರಲಿ. ಆನಂದ ಹುಟ್ಟುವುದಕ್ಕೆ ಇಪ್ಪತ್ತೈದು

ವರ್ಷಗಳಷ್ಟು ಮೊದಲು ಅವನ ಅಮ್ಮ ಹುಟ್ಟಿದಳು. 'ಆನಂದನ ತಾಯಿ' ಇದು ಅವಳ ರೂಢ ನಾಮವೆ ಹೊರತು ಅಂಕಿತನಾಮವಲ್ಲ. ಅವಳ ಅಂಕಿತನಾಮ ಕಾಂಚನ.

ನೀವು ತಿಳಿದಿರಲಾರಿರಿ. ಕಾಂಚನ ಅಕ್ಷರಶಃ ಕಾಂಚನವೆ. ಅವಳ ಬಣ್ಣ ಅದೇ. ಹೀಗೇ ಸರಸದಿಂದ ಅವಳ ಮೈಯಲ್ಲಿ ಎಲ್ಲಿಯಾದರೂ ಒತ್ತಿದರೆ, ಆ ಅಷ್ಟು ಜಾಗ ಬಿಳುಚಿಕೊಂಡು, ಗುಳಿ ಬಿದ್ದು, ನಿಧಾನವಾಗಿ ಬಣ್ಣದಲ್ಲಿ ಬಣ್ಣ ಬೆರೆತು ಹೋಗುತ್ತಿತ್ತು. ಅವಳಿಗೆ ನೀಳವಾದ ಕೂದಲಿರಲಿಲ್ಲ. ದುಂಬಿಯಂತೆ ಹಣೆಯ ಮೇಲೆ ನಲಿಯುವ ಮುಂಗುರುಳಿರಲಿಲ್ಲ. ನಕ್ಕಾಗ ಗುಳಿ ಬೀಳಲು ಅನುವಾದ ಕೆನ್ನೆಗಳಿರಲಿಲ್ಲ. ಥಳಥಳ ಮಿಂಚು ಚೆಲ್ಲುವ ಹಲ್ಲುಗಳಿರಲಿಲ್ಲ. ಸಣ್ಣದೂ ಸಂಪಿಗೆ ಎಸಳಿನಂಥದೂ ಚೂಪಾದ ಮೂಗಿರಲಿಲ್ಲ. ಆದರೂ ಕಾಂಚನ ಅಂದಗಾತಿಯೆ.



ಅವಳ ಚೆಲುವು ಕಾಣಬೇಕೆಂಬ ಅಭಿಲಾಷೆಯೆ ನಿಮಗೆ? ಹಾಗಿದ್ದರೆ ಆಕ್ರೋಶನ ಮನೆಗೆ ಹೋಗಿ. ವರಾಂಡದಲ್ಲೆ ಇದೆ — ಬಾಗಿಲಿಗೆ ಎದುರಾಗಿ ನೇತು ಹಾಕಿದ ದೊಡ್ಡ ಫೋಟೊ. ಆ ಪಟದಲ್ಲಿರುವ ಸೊಬಗು ಆರ್ತನಾದನ ತಾಯಿಯದು. ಆ ಪಟ — ಅವಳು ರೋಗದಿಂದ ನವೆದು ನವೆದು ಸತ್ತ ಮೇಲೆ ತೆಗೆಸಿದ್ದು.

(ಗಮನಕ್ಕೆ— ಆನಂದನ, ಆಕ್ರೋಶನ ಮತ್ತೊಂದು ಹೆಸರು ಆರ್ತನಾದ.)

ಕಾಂಚನಳ ಚೆಲುವಿನ ಮೇಲೆ ಕನಿಷ್ಠ ಪಕ್ಷ ಅರವತ್ತು, ಎಪ್ಪತ್ತು ಪುಟಗಳಷ್ಟನ್ನಾದರೂ ಬರೆಯಬೇಕೆಂದುಕೊಂಡೆ. ಹಾಗೆ ಬರೆದರೂ ಅನೌಚಿತ್ಯ ಮಾತ್ರ ಎಷ್ಟಕ್ಕೂ ಆಗದೆಂದು ನನಗೆ ಗೊತ್ತು. ಆದರೂ ನಾನು ಬರೆಯಲಿಲ್ಲ. ಹೀಗೆ ಬರೆಯದೆ ಹೋದುದಕ್ಕೆ ಒಂದೇ ಕಾರಣವಿದೆ — ಇದು ಆಕ್ರೋಶನ ಕಥೆಯೆ ಹೊರತು ಅವನ ತಾಯಿಯ ಕಥೆಯಲ್ಲ.

ಒಂದೇ ಸಮನೆ ಅರವತ್ತು ಪುಟಗಳಷ್ಟು ಬರೆದರೂ ಅನೌಚಿತ್ಯವೆನ್ನಿಸದ ಅಂದವೇ ಇಲ್ಲದೆ ಹೋಗಿದ್ದಲ್ಲಿ ಕಾಂಚನಳ ಬದುಕು ಎಲ್ಲರ ಬದುಕಿನಂತೆ ಸಾಫ್ ಸೀದಾ ಇರುತ್ತಿತ್ತು. ಮತ್ತೊಂದು ವಿಷಯ — ಅವಳ ಅಂದಕ್ಕೆ, ಅವಳ ಸಾವಿನ ನಡುವೆ ಅವಿನಾಭಾವ ಸಂಬಂಧಗಳಿವೆ ಎಂದು ಮಾತ್ರ ಸದ್ಯಕ್ಕೆ ಹೇಳಬಲ್ಲೆ.

"ನಿಂಗೇನೆ ತಾಯಿ! ಯಾರಾದ್ರೂ ಹೀಗೆ ನಿನ್ನ ಹಾರಿಸಿಕೊಂಡು ಹೋಗ್ತಾರ!" ಅನ್ನುತ್ತಿದ್ದರು ನೆರೆ-ಹೊರೆಯವರು.

ಅದೂ ನಿಜವೆ!

ಕಾಂಚನಳನ್ನು ಹಾರಿಸಿಕೊಂಡು ಹೋಗಲು ಬಹಳ ಜನ ಕಾದು ಕುಳಿತಿದ್ದರು. ಆದರೆ ಕಾಂಚನ ಹಾರಲು ಸಿದ್ಧಳಿರಲಿಲ್ಲ. ಆದರೂ ಅವಳನ್ನು ಆ ಕೆಲಸಕ್ಕೆ ಅಣಿಮಾಡಿದವನು ಪರಿಮಳರಾಯ.

ನೋಡನೋಡುತ್ತಿದ್ದಂತೇ ಅವನು — ಮೊದಲು ಕಾಂಚನಳ ಹೃದಯವನ್ನು ದೋಚಿ

ಕೊಂಡ. ಆ ನಂತರ ಅವಳನ್ನು ಅಡಿಯಿಂದ ಮುಡಿವರೆಗೆ ದೋಚಿದ. ಇದನ್ನು ತಡೆಯುವುದು ಕಾಂಚನಳಿಗೆ ಅತೀತವಾದ ಕಾರ್ಯವೇನಲ್ಲ. ತಡೆಯಬಲ್ಲವಳಾಗಿದ್ದೂ ಅವಳು ತಡೆಯಲಿಲ್ಲ. ಇಲ್ಲಿ ಸರಿ ತಾನೆ. ಬೇಲಿಯಿಲ್ಲದ ಬೆಳೆದ ತೋಟದ ಫಸಲಿನಂತೆ ದೋಚಿಕೊಂಡು ಹೋಗೆಂದು ಪರಿಮಳರಾಯನಿಗೆ ಪ್ರೋತ್ಸಾಹ ಕೊಟ್ಟಳು. ಯಾವುದೇ ಕಾರಣದಿಂದ ಅವನು ಬರದೆ ಹೋದರೆ ಕಾಂಚನ ಅವನಿಗೆ ಹೇಳಿಕಳುಹಿಸುತ್ತಿದ್ದಳು. ಆಗಲೂ ಬರದಾದರೆ ದುಡ್ಡು ಕೊಟ್ಟು ಕಳುಹಿಸುತ್ತಿದ್ದಳು. ಇದರಲ್ಲಿ 'ಆನಂದ'ದ ಹೊರತು 'ಅನೀತಿ' ಎಲ್ಲೂ ಕಂಡು ಬರಲಿಲ್ಲ. ಮೇಲಾಗಿ ಆ ಆನಂದ ಸಹ ಅಂಥಿಂಥದಲ್ಲ, ಭರಿಸಲಾಗದಂತಹುದು. ಅನೀತಿಯಿಂದ ಆನಂದ ಬರದೆಂದು, ಆನಂದವನ್ನೀಯುವುದು ಅನೀತಿಯಲ್ಲವೆಂದು ಅವಳಲ್ಲೊಂದು ಗಟ್ಟಿ ನಂಬಿಕೆ ಉಂಟಾಗಿತ್ತು.

"ನಿನ್ನ ಹೆಸರು ಕಾಂಚನ, ನನ್ನ ಹೆಸರು ಪರಿಮಳ. ನಾವಿಬ್ಬರೂ ಶಾಶ್ವತವಾಗಿ ಒಂದಾದ ಹೊರತು ಬಂಗಾರಕ್ಕೆ ಪರಿಮಳ ಬರದು" ಅಂದ ಒಮ್ಮೆ ಪರಿಮಳರಾಯ, ಕಾಂಚನಳಿಗೆ ಕಚಗುಳಿ ಇಡುತ್ತ.

ಆ ಹೂಬಾಣದ ಹೊಡೆತಕ್ಕೆ ಆನಂದ ಸೀಮೆಯ ಅತ್ತಣ ಗಡಿಯ ವರೆಗೂ ಹೋಗಿ ಬಂದಳು ಕಾಂಚನ.

ಕಳೆಯಿತು ವರ್ಷ.

ಬಂಗಾರಕ್ಕೆ ಪರಿಮಳ, ಪರಿಮಳಕ್ಕೆ ಬಂಗಾರ ಬೆರೆತು ಹೋಯಿತು. ಈ 'ಕಲಕೆ' ದಿನ ದಿನಕ್ಕೂ ಗಾಢವಾಯಿತು. ಆ ಗಾಢತೆಯಲ್ಲಿ ಇಬ್ಬರೂ ಆನಂದ ಸೀಮೆಯ ಅಂಚಿನ ವರೆಗೂ ಪ್ರಣಯ ಪಯಣ ನಡೆಸಿದರು.

ಈ ಪ್ರಯಾಣದಲ್ಲಿ ನಮ್ಮ ಮೋಹನನು ಕೋಟೆಕಂದಕ ದಾಟಿ ಬಿಟ್ಟ. ದಾಟಿದ ಬಹಳ ಕಾಲಕ್ಕೆ ದಾಟಿದ ಬಗ್ಗೆ ಯಾರಿಗೂ ಅನುಮಾನ ಬರಲಿಲ್ಲ. ಅನುಮಾನ ಬರದಾದ ಮೇಲೂ ಪರಿಮಳರಾಯನ ಬಂದು ಹೋಗುವಿಕೆ ನಡೆದೇ ಇತ್ತು. ನಾಲ್ಕೈದು ತಿಂಗಳುಗಳು ಕಳೆದವು. ಅನುಮಾನ ದೃಢವಾಯಿತು. ಪರಿಮಳ ವಿಳಾಸ ಪತ್ತೆಯಾಗದಂತೆ ನಾಪತ್ತೆಯಾದ.

ಇದು ಭಂಡ ದೇಶ. ಇದು ಗೊಡ್ಡು ದೇಶ. ಇದು ಪುಂಡ ದೇಶ. ಇದು ಪುಂಗೀ ದೇಶ.

ನಿಮಗೆ ನೀತಿಯಿಲ್ಲ. ನಿಮಗೆ ಜಾತಿಯಿಲ್ಲ. ನಿಮಗೆ ಪಾಪವಿಲ್ಲ. ನಿಮಗೆ ಪುಣ್ಯವಿಲ್ಲ. ನಿಮಗೆ ಧರ್ಮವಿಲ್ಲ. ನಿಮಗೆ ಅಧರ್ಮವಿಲ್ಲ. ನಿಮಗೆ ನ್ಯಾಯವಿಲ್ಲ. ನಿಮಗೆ ಅನ್ಯಾಯವಿಲ್ಲ.

ನೀವು ಮೋಸಗಾರರು. ನೀವು ವಂಚಕರು. ನೀವು ಹಂತಕರು. ನೀವು ಧ್ವಂಸಕರು. ನೀವು ಕಳ್ಳರು. ನೀವು ಕಳ್ಳ ಬಡ್ಡಿ ಮಕ್ಕಳು ಎಂದು ಒಂದು ಬಾರಿ ಆಗ್ರಹನು ಬಾಯಿ ಬಸಿರು ತೋರಿದ.

ಇವನ ಆಕ್ರೋಶ ಯಾರಿಗೆ ಬೇಕಿದೆ? ಹಾಗಾಗಿ ದವಡೆ ಒಡೆದರು. ಅವನು ದರಬೇಸಿ ಭಡವನಾದ್ದರಿಂದ ದವಡೆ ಒಡೆದರು. ಆದರೂ ಅವನು ಅಂದುದರಲ್ಲಿ ಸತ್ಯವಿದೆ.

ಪರಿಮಳರಾಯ ಗಾಡಿ ಬಿಟ್ಟನಂತರ – ಇನ್ನೂ



ಕಾಣಿಸುವುದಿಲ್ಲ, ಬರುವುದಿಲ್ಲ. ಬರುವುದೇ ಇಲ್ಲವೆಂದು ತಿಳಿದ ಮೇಲೆ–ಮೊದಲು–ಕಾಂಚನ ಚಕಿತಳಾದಳು. ಆಮೇಲೆ ಯೋಚಿಸಿದಳು. ನಂತರ ದಿಗಿಲುಗೊಂಡಳು. ತದನಂತರ ಬಾಧೆಗೊಂಡಳು: ಅನಂತರ ದುಃಖಿಸಿದಳು. ಆ ದುಃಖದಲ್ಲಿ ಅವಳನ್ನು ವೈದ್ಯನಲ್ಲಿಗೆ ಕರೆದೊಯ್ದರು.

"ಹಣದ ಬಗ್ಗೆ ಚಿಂತೆ ಮಾಡಬೇಡಿ" ಅಂದ ಕಾಂಚನಳ ಅಪ್ಪ.

"ಇವನ್ನೆಲ್ಲ ನಾನು ಕೇಳುತ್ತಲೇ ಇದ್ದೆ. ನನ್ನನ್ನು ಕೊಲ್ಲಲು ಎಲ್ಲರೂ ಪಿತೂರಿ ನಡೆಸುತ್ತಿದ್ದಾರೆಂದು ನಾನಾಗಲೇ ಗ್ರಹಿಸಿದೆ. ಈ ಪಿತೂರಿಯ ಕಾರಣ ನನಗೆ ಗೊತ್ತು. ಕಾಂಚನಳ ಅಪ್ಪನಲ್ಲಿ ಒಂದಿಷ್ಟು ಹಣವಿದೆ. ಆ ಹಣ ಡಾಕ್ಟರನಿಗೆ ಬೇಕು. ಆ ಹಣಕ್ಕಾಗಿ ಆ ಕತ್ತೆಭಡವ ನನ್ನನ್ನು ಕೊಲ್ಲಲು ಸಿದ್ಧನಾದ. ಕೊಲ್ಲುವುದು ಅಪರಾಧ, ತಪ್ಪು. ತಪ್ಪು ಮಾಡಿದವನಿಗೆ ಶಿಕ್ಷೆಯಾಗಬೇಕು. ತಪ್ಪು ಮಾಡಲು ಪ್ರೇರೇಪಿಸಿದವನಿಗೆ ಶಿಕ್ಷೆಯಾಗಬೇಕು. ಮತ್ತೆ— ಆಗದೆ?



'ನನ್ನನ್ನು ಇಂತ ನಿಲುವಿನಲ್ಲೇ ಖೂನಿ ಮಾಡಲು ಹುನ್ನಾರು ಹೂಡಿದ್ದಾರಯ್ಯೋ, ದೇವರೆ!' ಎಂದು ಅರಚುತ್ತಿದ್ದರೂ ಕೇಳಿಸಿಕೊಳ್ಳುವವರಿಲ್ಲವಲ್ಲ, ಆ ಡಾಕ್ಟರ್ ನನ್ನನ್ನು ಗರ್ಭದಲ್ಲೆ ಚೂರು ಚೂರಾಗಿ ಕತ್ತರಿಸಿ, ತುಂಡು ತುಂಡಾಗಿ ಹೊರಕ್ಕೆ ತೆಗೆಯುವೆನೆಂದಾಗ, ಕಾಂಚನಳ ಹೊರತು ಎಲ್ಲರೂ ಸಂತಸಗೊಂಡವರೆ" ಅಂದ ದುಃಖನು.

ಇಂಥ ಕತ್ತರಿಸುವ ಕೆಲಸ ಎಲ್ಲಿ ಎಲ್ಲಿಯೋ ನಡೆಯಿತಂತೆ. ಕತ್ತರಿಸುವ ಕೆಲಸ ನಡೆಯುತ್ತಿರುವಾಗ ದೊಡ್ಡ ಪ್ರಾಣಕ್ಕೇ ಮೋಸವಾಯಿತಂತೆ. ಹಾಗೇ ಬಂದ ಸುದ್ದಿ ಕಾಂಚನಳಿಗೆ ಗೊತ್ತು. ಅದಕ್ಕೆಂದೇ ಅವಳು ಕತ್ತರಿಸುವ ಕೆಲಸಕ್ಕೆ ಒಪ್ಪಿಕೊಳ್ಳಲಿಲ್ಲ.

ಅದಕ್ಕಾಗಿಯೆ ಕಾಂಚನಳೆಂದರೆ, ನನಗೆ ಕೋಪ ನನಗೆ ಅಸಹ್ಯ. ನನ್ನಲ್ಲಿ ದ್ವೇಷ – ಕ್ರೋಧ ಯಾವುದೋ ಮಾತ್ರ, ಬಿಲ್ಲೆಗಳಿಂದಲೊ ಸಾಯಿಸುವ ಅವಕಾಶವಿದ್ದಿದ್ದರೆ, ನಾನು ಸಾಯಲು ಯಾವುದೆ ಪಿರಿಪಿರಿ ಇಲ್ಲದೆ ಕಾಂಚನ ಒಪ್ಪಿಗೆ ಕೊಡುತ್ತಿದ್ದಳು. ತನಗೆ ಪ್ರಾಣಾಪಾಯವಿಲ್ಲದೆ ನನ್ನನ್ನು ಕತ್ತರಿಸುವ ಅವಕಾಶವಿದ್ದಿದ್ದರೂ ಅವಳು ಒಪ್ಪುತ್ತಿದ್ದಳು. ಅಂಥ ಯಾವ ಅವಕಾಶವೂ ಇಲ್ಲದಿದ್ದರಿಂದ ಅವಳು ಒಪ್ಪಲಿಲ್ಲ. ಅವಳು ಭೋರೆಂದು ಅತ್ತಳು. ಅವಳ ಗೋಳನ್ನು ನೋಡುವುದು ಅವಳ ಅಪ್ಪ–ಅಮ್ಮನಿಂದ ಆಗಲಿಲ್ಲ. ನೋಡಲಾಗದೆ ನನ್ನನ್ನು ಕೊಲ್ಲಿಸುವ ಕೆಲಸದಿಂದ ವಿರಮಿಸಿದರು... ಇರಲಿಕ್ಕೇನು— ನನಗೂ ಅಪ್ಪ ಅಮ್ಮ ಇದ್ದಾರೆ. ಏನು ಲಾಭ? ಪರಿಮಳರಾಯ ನನ್ನ ಅಮ್ಮನನ್ನು ಮೋಸ ಮಾಡಿದ. ಪರಾರಿಯಾದ. ನಮ್ಮಮ್ಮ, ನನ್ನನ್ನು ಮುಗಿಸಿ ತಾನು ನೀತಿವಂತಳೆಂದು ಜಗತ್ತಿಗೆ ಸಾರಲು ಪ್ರಯತ್ನಿಸಿದಳು. ಏನೂ ನಡೆಯಲೇ ಇಲ್ಲವೆಂದು ನಿಮ್ಮೆಲ್ಲರನ್ನು ಮೋಸಮಾಡಬಹುದೆಂದುಕೊಂಡಳು... ಇವರೆಲ್ಲ ಕೂಡಿ ಹಣದಿಂದ ತಮ್ಮ ಪಾಪಗಳನ್ನು ತೊಳೆದುಕೊಳ್ಳಬಹುದೆಂದುಕೊಂಡರು. ಅವರಂದುಕೊಂಡುದು ನಿಜವೇ

ಆದರೂ, ಶುದ್ಧವಾಗಿ ತೊಳೆದುಕೊಳ್ಳುವಷ್ಟು ಹಣ ಅವರಲ್ಲಿರಲಿಲ್ಲ. ಅದೇ ಏನಾದರೂ ಇದ್ದಿದ್ದರೆ. ನಿಜಕ್ಕೂ ಈ ಕಥೆಗೆ ಅವಕಾಶ ನಿನಗೆ ಇರುತ್ತಿರಲಿಲ್ಲ" ಅಂದನು ದಿಗಿಲನು.

ಅವನಲ್ಲಿ —

ಆನಂದ, ಆಕ್ರೋಶ, ಭಯ, ನಿರ್ಭಯ, ಮೋಹ, ದಾಹ, ಕರುಣೆ, ಕೋಪ, ದಿಗಿಲು, ದುಃಖ, ಮೋಸ, ಹಾಸ ಏನೇನೆಯೊ ಮುಂದೆ ಮುಂದೆ ತಿಳಿದುಕೊಳ್ಳಬಹುದು... ಈ ಲಕ್ಷಣಗಳೆಲ್ಲ ಒಂದೊಂದಾಗಿ, ಜೊತೆಜೊತೆಯಾಗಿ, ಗುಂಪುಗುಂಪಾಗಿ ಅವನ ಒಳಗೊಳಗೆ ತಲೆ ಎತ್ತುತ್ತಿರುತ್ತವೆ; ಪರಿಭ್ರಮಿಸುತ್ತಿರುತ್ತವೆ. ಒಮ್ಮೊಮ್ಮೆ ಇವೆಲ್ಲ ಒಮ್ಮೆಲೇ ಭಾರತದಂತೆ ಮುಗಿಬೀಳುವುದೂ ಉಂಟು. ಇವೆಲ್ಲ, ಅವನಲ್ಲಿ ಅಡಗಿರುವುದರಿಂದ ಅವನ ಅಭಿರುಚಿಗಳು, ಅಭೀಷ್ಟಗಳು, ವಿಚಿತ್ರವಾಗಿರುವುವು.

ಅವನಿಗೆ—

ಮಜ್ಜನವೆಂದರೆ ಭಯ. ಸೈಕಲ್ಲು ಏರುವುದೆಂದರೆ ಭಯ. ಕಿವಿಯಲ್ಲಿ ಎಣ್ಣೆ ಹಾಕಿಕೊಳ್ಳುವುದೆಂದರೆ ಭಯ. ಅಂಗಾತ ಬಿದ್ದ ಜಿರಳೆಯೆಂದರೆ ಭಯ. ಕಪ್ಪೆಯೆಂದರೆ ಭಯ. ನಾಯಿಗಳೆಂದರೆ ಭಯ. ಜೇಡರ ಹುಳುವೆಂದರೆ ಭಯ. ಸಿಡಿಲೆಂದರೆ ಭಯ. ಮಡುಗಳೆಂದರೆ ಭಯ. ಗಾಳವೆಂದರೆ ಭಯ. ಶೂಲವೆಂದರೆ ಭಯ. ಕತ್ತರಿಯೆಂದರೆ ಭಯ. ಸೂಜಿಗಳೆಂದರೆ ಭಯ. ಕಣೆಯೆಂದರೆ ಭಯ. ಅರಳಿದ ಹೂಗಳೆಂದರೆ, ಮೊಳಕೆಯೊಡೆವ ಬೀಜಗಳೆಂದರೆ ಭಯ. ಹಸಿವೆಯೆಂದರೆ, ಕೊರಳು ಹರಿವ ಕೇಕೆಗಳೆಂದರೆ ಭಯ. ಕಂಬಳಿಹುಳುವೆಂದರೆ ಭಯ. ಅತ್ತರು ಎಂದರೆ ಭಯ. ಕೆರೆ ಕಟ್ಟೆಯೆಂದರೆ ಭಯ. ನಾಗರ ಚಿತ್ರವೆಂದರೆ ಭಯ. ಕೂದಲಿಗೆ ಬಣ್ಣ ಬಳಿಯುವವರೆಂದರೆ ಭಯ. ಬಂಗಾರದ ಕಡಗ ಹಾಕಿಕೊಳ್ಳುವವರೆಂದರೆ ಭಯ. ಗೋಡೆಗೆ ಕಚ್ಚಿಕೊಂಡ ಹಲ್ಲಿಯೆಂದರೆ ಭಯ. ಕರಿ ಬೆಕ್ಕೆಂದರೆ ಭಯ.

ಅವನಿಗೆ —

ಸಾವಕಾಶವಾಗಿ ಉಗುರು ಕಡಿಯುವುದು ಇಷ್ಟ. ಕಿವಿಯಲ್ಲಿ ಬೆಂಕಿಕಡ್ಡಿ ತೂರಿಸಿ ವಿಲಾಸದಿಂದ ತಿರುಗಿಸಿಕೊಳ್ಳುವುದು ಇಷ್ಟ. ಬೆವರ ಕಾಯಿಗಳ ಮೇಲೆ ಯಾರಿಂದಲಾದರೂ ತುರಿಸಿಕೊಳ್ಳುವುದು ಇಷ್ಟ. ಪುಲ್ಲಪುರಿ ಗಂಟುಗಳನ್ನು ತೀಡಿಕೊಳ್ಳುವುದು ಇಷ್ಟ. ಕುರುವುಗಳನ್ನು ಸೂಜಿಮೊನೆಯಿಂದ ಚುಚ್ಚಿ ಕೀವು ತೆಗೆಯುವುದು ಇಷ್ಟ. ಅಂಗೈಯಲ್ಲಿ ಒಂದರೆ ಚಮಚ ಜೇನುತುಪ್ಪ ಹಾಕಿಸಿಕೊಂಡು ತುದಿ ನಾಲಗೆಯಿಂದ ನೆಕ್ಕುವುದು ಇಷ್ಟ. ಕೂಸುಗಳ ಕಿವಿಯ ಮೃದು ತುದಿಗಳನ್ನು ಮುಂದಿನ ಹಲ್ಲುಗಳಿಂದ ಕಡಿಯುವುದು ಇಷ್ಟ. ಮೂಗಿನ ಕೂದಲುಗಳನ್ನು ಕಿತ್ತುಕೊಳ್ಳುವುದು ಇಷ್ಟ. ಕಾಲಮೇಲೆ ಕಾಲು ಹಾಕಿ ಕುಳಿತು ಕಾಲನ್ನು ಅಲ್ಲಾಡಿಸುವ ಹೆಂಗಸರೆಂದರೆ ಇಷ್ಟ. ಸೋಪಿನಿಂದ ಹೆಂಗಸರ ಬೆನ್ನನ್ನು ಚೆನ್ನಾಗಿ ನೊರೆಗರೆವಂತೆ ತಿಕ್ಕುವುದು ಇಷ್ಟ. ಆಲಸ್ಯದಿಂದ ಆಕಳಿಸುವುದು ಇಷ್ಟ. ಚಟ ಚಟ ಎನ್ನುವಂತೆ ಬೆರಳುಗಳಿಂದ ನಟಿಕೆ ತೆಗೆಯುವುದು ಇಷ್ಟ. ಮೆತ್ತನೆಯ ಹಾಸಿಗೆಯ ಮೇಲೆ ಬೋರಲು



ಮಲಗುವುದು ಇಷ್ಟ. ಬಾಚಣಿಗೆಯ ಮೇಲೆ ಹೇನನ್ನು ಇರಿಸಿ ಉಗುರಿನಿಂದ ಕುಕ್ಕಿದಾಗ ಬರುವ 'ಚಿಟ್' ಎಂಬ ಕಿರುಶಬ್ದ ಕೇಳುವುದೆಂದರೆ ಇಷ್ಟ. ಗೋರಿಕಾಯಿ ಎಂದರೆ ಇಷ್ಟ. ಯಾರೂ ನೋಡದಂತೆ ಹೊಕ್ಕುಳ ಕೆಳಕ್ಕೆ ಬೆರಳು ತೂರಿಸಿ ಸಾವಕಾಶವಾಗಿ ಸವರಿಕೊಳ್ಳುವುದು ಇಷ್ಟ. ಏಲಚಿ ಹಣ್ಣೆಂದರೆ ಇಷ್ಟ. ಹುರಿದ ಕಡಲೆ ಎಂದರೆ ಇಷ್ಟ. ಬೇಯಿಸಿದ ನೆಲಗಡಲೆ ಬೀಜವೆಂದರೆ ಇಷ್ಟ. ಹದವಾಗಿ ಹುರಿದ ಗೋಡಂಬಿಯೆಂದರೆ ಇಷ್ಟ.

ಅವನಿಗೆ —

ಸಣ್ಣಗೆ, ಉದ್ದಕ್ಕೆ, ಬಂಗಾರದ ರಂಗಿನ ಮೈಬಣ್ಣದ ಹೆಂಗಸರೆಂದರೆ ಕೋಪ. ಗಡಿಯಾರವೆಂದರೆ ಕೋಪ. ತಿಂಗಳ ಮೊದಲ ವಾರವೆಂದರೆ ಕೋಪ. ಬಾಡಿದ ಹೂಗಳೆಂದರೆ ಕೋಪ. ಲಿಪ್‌ಸ್ಟಿಕ್ ತುಟಿಗಳೆಂದರೆ ಕೋಪ. ಕಾರಿನ ಬಾಗಿಲು ಹಾಕಿದ ಸಪ್ಪಳವೆಂದರೆ ಕೋಪ. ಪಾಲೀಷು ಮಾಡಿದ ಪಾದರಕ್ಷೆಗಳೆಂದರೆ ಕೋಪ. ಬಿಳಿ ಕೋಟೆಂದರೆ ಕೋಪ. ಅಡಿಕೆ–ಎಲೆ ಅಗಿಯುವವರೆಂದರೆ ಕೋಪ. ಪಕಪಕ ನಗುವವರೆಂದರೆ ಕೋಪ. ನೋಟುಗಳನ್ನು ಎಣಿಸುವಾಗ ಹೊರಡುವ ಶಬ್ದವೆಂದರೆ ಕೋಪ. ಬಳೆಗಳ ಗಲ್‌ಗಲ್ ಶಬ್ದವೆಂದರೆ ಕೋಪ. ಮುಚ್ಚಿದ ಕಿಟಕಿ ಬಾಗಿಲುಗಳೆಂದರೆ ಕೋಪ. ಮಿಂಚುವ ಉಂಗುರಗಳಿರುವ ಬೆರಳುಗಳೆಂದರೆ ಕೋಪ. ಕೆಳದುಟಿಯನ್ನು ಪದೇ ಪದೇ ಕಡಿದು ಕಡಿದುಕೊಳ್ಳುವವರೆಂದರೆ ಕೋಪ. ಕರಿಮರದ ವಿಶಾಲ ಮಂಚವೆಂದರೆ, ಆ ಮಂಚ ಮಾಡುವ ಶಬ್ದವೆಂದರೆ ಕೋಪ. ಬ್ರಾಗಳೆಂದರೆ, ರವಿಕೆಗಳೆಂದರೆ ಕೋಪ......

ಇಲ್ಲಿಯವರೆವಿಗೆ ನಾನು ಕ್ರೋಢೀಕರಿಸಿದ ಸಮಾಚಾರವಿದು! ಈ ವಿವರಗಳನ್ನು ಮುಂದಿರಿಸಿಕೊಂಡು, ಯಾವುದೋ ಒಂದು ಕಥೆ ಹಣೆಯುವುದು, ನನ್ನ ಮಟ್ಟಿಗೆ ನನಗೆ ದೊಡ್ಡ ಕಷ್ಟವೇನಲ್ಲ. ಆದರೆ 'ಒಳ್ಳೆಯ ಕಥೆ' ಬರೆಯಲು, ಮತ್ತೂ ಕೆಲವು ವಿವರಗಳು ಬೇಕು. ಉತ್ತರವಿಲ್ಲದೆ ಬಿದ್ದಿರುವ ಪ್ರಶ್ನೆಗಳಿಗೆ ಉತ್ತರಗಳು ಬೇಕು. ಇಷ್ಟಕ್ಕೂ ಆ ಪರಿಮಳರಾಯ ಯಾಕೆ ಮಾಯವಾದ? ಈಗ ಎಲ್ಲಿದ್ದಾನೆ? ಕಾಂಚನ ಮರಣ ಹೊಂದಿದಳೆಂದು ಕುಂದನನ ಮನೆ ವರಾಂಡದಲ್ಲಿರುವ ಫೋಟೊ ಹೇಳುತ್ತಲೇ ಇದೆ. ನಮ್ಮ ಕಥಾನಾಯಕನು ಹುಟ್ಟಿದ ನಂತರ, ತಾನು ಸಾಯುವವರೆಗೆ ಕಾಂಚನ ಹೇಗೆ ಬದುಕಿದಳು? ಆ ಬದುಕಿನ ವಿಧಾನವನ್ನು ಕಾಂಚನಳ ಅಪ್ಪ–ಅಮ್ಮ ಅನುಮೋದಿಸಿದರೆ? ಈ ಇಂತಹ ವಿವರಗಳೆಲ್ಲ ನನಗೆ ಬೇಕು. ಇವನ್ನು ಶೇಖರಿಸಲು ಅದೆಷ್ಟು ಕಾಲ ಹಿಡಿಯುತ್ತದೆ ಈಗ್ಗೀಗಲೆ ಸ್ಪಷ್ಟವಾಗಿ ಹೇಳಲಾರೆ. ಮೊದಲು ಅವು ನನ್ನ ಕೈ ಸೇರಬೇಕು. ಅಲ್ಲಿಯವರೆವಿಗೆ ಕಥೆ ಬರೆಯಲು ಪ್ರಾರಂಭಿಸುವುದಿಲ್ಲ. ನೀವು ಒತ್ತಾಯಿಸಲೂ ಬಾರದು.

ನಮ್ಮ ವಂದನನ ಅಭಿರುಚಿ, ಅಭೀಪ್ಸೆಗಳು; ಅಭಿಪ್ರಾಯಗಳು, ಅನುಭವಗಳು ನಮಗೆ ಖಚಿತವಾಗಿ ತಿಳಿದವುಗಳೇ. ಇವನೇ ನಮ್ಮ ಕಥಾನಾಯಕ.

ಇವನನ್ನು ಕೇಂದ್ರ ಮಾಡಿಕೊಂಡು ಇವನ ಸುತ್ತಲೂ ಇದ್ದೂ ಅದೃಶ್ಯವಾಗಿರುವ ವಾಸ್ತವಾಂಶಗಳೊಂದಿಗೆ ನಿಮ್ಮ ಹೃದಯ ಗೆಲ್ಲುವ ಕಥೆ ಹೇಗಿರಬೇಕೆಂದು ಆಲೋಚಿಸುತ್ತಿರುವೆ. ನೀವೂ ಆಲೋಚಿಸಿ. ಇವನಿಗೆ ಇವನೊಂದಿಗೆ ನಿಮಗೆ ಚಟಕ್ಕೆಂದು ಇಷ್ಟವಾಗುವ ಕಥೆಗಾಗಿ ಹುಡುಕಿ. ದೊರೆತರೆ ನನಗೆ ಕಳುಹಿಸಿ. ಇಲ್ಲವೆ ಮುಂದೊಂದು ದಿನ ನಾನೇ ನಿಮಗೆ ಹೇಳುತ್ತೇನೆ. ✿



# ಒಂದು ಅಂಚೆ ಚೀಟಿಯ ಅದೃಷ್ಟ

ಆರ್. ಗೋವಿಂದರಾಜು

ಅಂದು ೧೯೬೫ರ ಜನವರಿ ೨೬ರ ಸಂಜೆ. ಬೆಳ್ಳಿ ಬಣ್ಣದ ಬೋಯಿಂಗ್ ವಿಮಾನ ನ್ಯೂಯಾರ್ಕ್‌ನಿಂದ ಲಂಡನ್ ವಿಮಾನ ನಿಲ್ದಾಣದಲ್ಲಿ ಇಳಿಯಿತು. ತಕ್ಷಣ ಕುತೂಹಲದಿಂದ ವಿಮಾನದ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಛಾಯಾಚಿತ್ರಕಾರರು. ಪತ್ರಿಕಾ ಪ್ರತಿನಿಧಿಗಳು ಮತ್ತಿತರರು ವಿಮಾನವನ್ನು ಸುತ್ತು-ವರಿದರು. ಫಿನ್‌ಬರ್‌ಕೆನ್ನಿ ಎಂಬುವನು ಒಂದು ಸೆಂಟ್ ಬ್ರಿಟಿಶ್ ಗಿನಿಯಾ ಅಂಚೆ ಚೀಟಿ-ಯನ್ನೊಳಗೊಂಡ ಬ್ರೀಫ್ ಕೇಸ್ ಹಿಡಿದು ಹೊರ ಬಂದ. ಈ ಒಂದು ಸೆಂಟ್ ಬೆಲೆಯ ಅಂಚೆ ಚೀಟಿಯನ್ನು ೩೬ ಲಕ್ಷ ರೂಪಾಯಿಗಳಿಗೆ ವಿಮೆ ಮಾಡಿಸಲಾಗಿತ್ತು. ಇದನ್ನು ಲಂಡನ್ನಿನ ಸ್ಟ್ಯಾನ್ಲಿ ಗಿಬ್ಬನ್ಸ್ ಶತಮಾನೋತ್ಸವ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಲು ಅಂಗ ರಕ್ಷಕರ ಕಾವಲಿನಲ್ಲಿ ವಿಶೇಷವಾಗಿ ತರಿಸಲಾಗಿತ್ತು.

ಮರುದಿನ ಬೆಳಗಾಗುವುದರಲ್ಲಿ ಈ ಅಮೂಲ್ಯವಾದ ಅಂಚೆ ಚೀಟಿ ಮನೆ ಮಾತಾಗಿತ್ತು. ಎಲ್ಲ ಪತ್ರಿಕೆಗಳು ಈ ಅಂಚೆ ಚೀಟಿಯ ಬಗ್ಗೆ ಮುಖ ಪುಟದಲ್ಲಿ ಪ್ರಧಾನವಾಗಿ ಪ್ರಕಟಿಸಿದವು. ಬಿ. ಬಿ. ಸಿ. ಯು ವಿಶೇಷ ಕಾರ್ಯಕ್ರಮವನ್ನು ಪ್ರಸಾರ ಮಾಡಿತು. ಇಷ್ಟೊಂದು ಪ್ರಸಿದ್ಧವಾದ ಅಂಚೆ ಚೀಟಿಯ ಕತೆ ತುಂಬಾ ಸ್ವಾರಸ್ಯಕರವಾಗಿದೆ.

ಬಹಳ ಹಿಂದೆ ಬ್ರಿಟಿಶ್ ಗಿನಿಯಾದ ಅಂಚೆ ಚೀಟಿಗಳು ವಾಟರ್‌ಲೂ ಆ್ಯಂಡ್ ಸನ್ಸ್ ಎಂಬ ಸಂಸ್ಥೆಯಲ್ಲಿ ಮುದ್ರಣವಾಗುತ್ತಿದ್ದವು. ೧೮೫೬ರಲ್ಲಿ ಒಂದು ದಿನ ಅಂಚೆ ಚೀಟಿಗಳು ಮುಗಿದು ಹೋಗಿದ್ದು, ಹೊಸದಾಗಿ ಬರಬೇಕಾದ ಅಂಚೆ ಚೀಟಿಗಳು ಸಕಾಲದಲ್ಲಿ ಸರಬರಾಜು ಆಗಲಿಲ್ಲ. ಆದ್ದರಿಂದ ಬೇಡಿಕೆಯನ್ನು ಪೂರೈಸಲು ಪೋಸ್ಟ್ ಮಾಸ್ಟರ್ ಹಡಗಿನ ಚಕ್ರದ ಮೇಲೆ ಬ್ರಿಟಿಶ್ ಗಿನಿಯಾದ ಮುದ್ರೆಯುಳ್ಳ ಅಂಚೆ ಚೀಟಿಗಳನ್ನು ಸ್ಥಳೀಯ ಮುದ್ರಣ ಯಂತ್ರಗಳನ್ನೇ ಉಪಯೋಗಿಸಿ ಮಾರಾಟಕ್ಕೆ ಬಿಡುಗಡೆ ಮಾಡಿದರು. ಆದರೆ ಈ ಅಂಚೆ ಚೀಟಿಗಳಲ್ಲಿ ಕಳಪೆ ಕಾಗದವನ್ನು ಉಪಯೋಗಿಸಿದುದರಿಂದ, ಅವುಗಳನ್ನು ಬೇರೆಯವರು ಸುಲಭವಾಗಿ ನಕಲು ಮಾಡಬಹುದಿತ್ತು. ಆದ್ದರಿಂದ ಈ ಅಂಚೆ ಚೀಟಿಗಳನ್ನು ಮಾರುವ ಮೊದಲು ಅಧಿಕಾರಿಗಳು ಅವುಗಳ ಮೇಲೆ ಸಹಿ ಮಾಡಲು ಸೂಚಿಸಲಾಯಿತು.

ಹದಿನೇಳು ವರ್ಷಗಳು ಕಳೆದ ನಂತರ ಬ್ರಿಟಿಶ್ ಗಿನಿಯಾದ ಎಲ್. ವರ್ನನ್ ವಾಗನ್

ಎಂಬುವನು ಅಂಚೆ ಚೀಟಿಗಳನ್ನು ಸಂಗ್ರಹಿಸುವಾಗ ತನ್ನ ಬಂಧುಗಳು ಬರೆದ ಕಾಗದದಲ್ಲಿ ಇ. ಡಿ. ವೈಟ್ ಸಹಿ ಮಾಡಿದ್ದ ಒಂದು ಸೆಂಟ್ ಬೆಲೆಯ ಅಂಚೆ ಚೀಟಿಯನ್ನು ಪತ್ತೆ ಹಚ್ಚಿದ. ಆದರೆ ಈ ಅಂಚೆ ಚೀಟಿಯು ೪ ಸೆಂಟ್ ಬೆಲೆಯು-ದಾಗಿದ್ದು, ತಪ್ಪಾಗಿ ೧ ಸೆಂಟ್ ಎಂದು ಮುದ್ರಣವಾಗಿತ್ತು. ಇದು ಅವನಿಗೆ ತಿಳಿಯದೆ ಅವನ ವಶದಲ್ಲಿಯೇ ಇತ್ತು. ಈ ಅಂಚೆ ಚೀಟಿಯನ್ನು ಅಷ್ಟಭುಜಾಕೃತಿಯಲ್ಲಿ ಕತ್ತರಿಸಿ ಆಲ್ಬಮ್-ನಲ್ಲಿರಿಸಿದ್ದ. ಸ್ವಲ್ಪ ದಿನಗಳ ನಂತರ ಕೊಳೆಯಾದ ಈ ಕಡಿಮೆ ಬೆಲೆಯ ಅಂಚೆ ಚೀಟಿಯನ್ನು ಮಾರಿ ಹೆಚ್ಚು ಬೆಲೆಯ ಅಂಚೆ ಚೀಟಿಗಳನ್ನು ಕೊಳ್ಳಲು ತೀರ್ಮಾನಿಸಿದ. ಆದರೆ ಯಾರೂ ಅದನ್ನು ಕೊಳ್ಳಲು ಮುಂದೆ ಬರಲಿಲ್ಲ. ಕೊನೆಗೆ ಬಹಳ ಪ್ರಯಾಸದಿಂದ ಎನ್. ಆರ್. ಮಕಿನ್ನನ್ ಎಂಬ ಮತ್ತೊಬ್ಬ ಅಂಚೆ ಚೀಟಿಯ ಸಂಗ್ರಹಕಾರನಿಗೆ ೬ ಷಿಲ್ಲಿಂಗ್‌ಗಳಿಗೆ ಮಾರಿದ. ಪಾಪ, ವಾಗನ್ನನಿಗೆ ಮುಂದೊಂದು ದಿನ ಅಂಚೆ ಆ ಚೀಟಿ ಅಪಾರ ಹಣಗಳಿಸುವುದೆಂಬ ಕಲ್ಪನೆಯೂ ಆಗ ಇದ್ದಿರಲಿಕ್ಕಿಲ್ಲ.

ಐದು ವರ್ಷಗಳ ನಂತರ ಈ ಅಂಚೆ ಚೀಟಿಯನ್ನು ಲಿವರ್‌ಪೂಲ್‌ನ ಥಾಮಸ್ ರಿಡ್‌ಪಾಕ್ ಎಂಬಾತನಿಗೆ ೧೨೦ ಪೌಂಡ್‌ಗಳಿಗೆ ಮಾರಲಾಯಿತು. ಅವನು ಪುನಃ ಈ ಅಂಚೆ ಚೀಟಿಯನ್ನು ಫ್ರಾನ್ಸಿನ ಪ್ರಸಿದ್ಧ ಅಂಚೆ ಚೀಟಿ ಸಂಗ್ರಹಕಾರ ಫಿಲಿಪ್–ಲಾ–ರಿನೊಟರಿ ಎಂಬಾತನಿಗೆ ೧೫೦ ಪೌಂಡ್ (ರೂ. ೨,೭೦೦)ಗಳಿಗೆ ಮಾರಿದ. ಅಂದಿನಿಂದ ಸಾಮಾನ್ಯವಾದ ಈ ಅಂಚೆ ಚೀಟಿಯ ಬಗ್ಗೆ ಪ್ರಚಾರ ಪ್ರಾರಂಭವಾಯಿತು. ರಿನೊಟರಿಯು ಸಾವಿನ ನಂತರ ಅವನು ಸಂಗ್ರಹಿಸಿದ್ದ ಅಂಚೆ ಚೀಟಿಗಳನ್ನು ೧೯೨೧ ಮತ್ತು ೧೯೨೫ ರ ನಡುವೆ ಹರಾಜಿನಲ್ಲಿ ಮಾರಲಾಯಿತು. ೧೯೨೨ ರಲ್ಲಿ ಈ ಒಂದು ಸೆಂಟ್ ಅಂಚೆ ಚೀಟಿಯನ್ನು ಅಮೇರಿಕದ ಅರ್ಥರ್ ಹಿಂಡ್ ೭,೩೪೩ ಪೌಂಡ್ (ರೂ. ೧,೩೨೦೦೦)ಗಳಿಗೆ ಕೊಂಡುಕೊಂಡ.

ಅರ್ಥರ್ ಹಿಂಡ್ ೧೯೩೩ ರಲ್ಲಿ ಸಾವನ್ನಪ್ಪಿದಾಗ ಈ ಅಪೂರ್ವವಾದ ಅಂಚೆ ಚೀಟಿಯ ಒಡೆತನ ಆತನ ಹೆಂಡತಿಗೆ ಬಂತು. ಅವಳು ೧೯೪೦ ರಲ್ಲಿ ೧ ಸೆಂಟ್ ಅಂಚೆ ಚೀಟಿಯನ್ನು ಆಸ್ಟ್ರೇಲಿಯಾದ ಒಬ್ಬ ಅನಾಮಧೇಯ ಸಂಗ್ರಹಕಾರನಿಗೆ ೪೦,೦೦೦ ಡಾಲರ್ (ರೂ. ೩,೦೦,೦೦೦)ಗಳಿಗೆ ಮಾರಿದಳು.

೧೯೭೫ ರಲ್ಲಿ ಲಂಡನ್ನಿನಲ್ಲಿ ನಡೆದ ಗಿಬ್ಬನ್ಸ್ ಪ್ರದರ್ಶನದಲ್ಲಿ ಈ ಅಪೂರ್ವವಾದ ಅಂಚೆ ಚೀಟಿಯನ್ನು ಕೆನ್ನಿ ಎಂಬುವನು ಪ್ರದರ್ಶಿಸಿದ ನಂತರ ಇದನ್ನು ೧೯೭೦ ರಲ್ಲಿ ನ್ಯೂಯಾರ್ಕಿನಲ್ಲಿ ಹರಾಜು ಮಾಡಲಾಗುವುದೆಂದು ಪ್ರಪಂಚದಾದ್ಯಂತ ಪ್ರಚಾರ ಮಾಡಲಾಯಿತು. ಪ್ರಪಂಚದ ನಾನಾ ಮೂಲೆಗಳಿಂದ ಅಂಚೆ ಚೀಟಿಯ ಸಂಗ್ರಹಕಾರರು ನ್ಯೂಯಾರ್ಕಿನಲ್ಲಿ ಘೇರಾಯಿಸಿದರು. ಹರಾಜಿನಲ್ಲಿ ಅಪರೂಪದ ಈ ಅಂಚೆ ಚೀಟಿಯನ್ನು ಕೊಳ್ಳಲು ನಾ ಮುಂದು, ತಾ ಮುಂದು ಎಂದು ಬೆಲೆಯನ್ನು ಏರಿಸಿದರು. ಕೊನೆಗೆ ಈ ಒಂದು ಸೆಂಟ್ ಬೆಲೆಯ ಅಂಚೆ ಚೀಟಿ ೨,೮೦,೦೦೦ ಡಾಲರುಗಳಿಗೆ (ರೂ. ೨೧,೦೦,೦೦೦) ಮಾರಾಟವಾಯಿತು. ಈಗ ಈ ಅಂಚೆ ಚೀಟಿಯನ್ನು ಪ್ರಪಂಚದ ಅತ್ಯಂತ ಹೆಚ್ಚು ಬೆಲೆ ಬಾಳುವ ಅಪೂರ್ವವಾದ ಅಂಚೆ ಚೀಟಿ ಎಂದು ಪರಿಗಣಿಸಲಾಗಿದೆ. ❁



ಜೋನ್ ಬಿರ್ಷ್ ಎಂಬ ಗಾಯಕಿ ಯಾರಿಗೂ ಹಸ್ತಾಕ್ಷರ ನೀಡುವುದಿಲ್ಲ. "ಬೇಡ. ಬೇಕಾದರೆ ಕೈ ಕುಲುಕುತ್ತೇನೆ" ಎನ್ನುವ ಆಕೆ "ಅದರಿಂದ ನನಗೇ 'ಏನಾದರೂ' ದೊರಕೀತು," ಎನ್ನುತ್ತಾಳೆ.

–ಚಾರ್ಲ್ಸ್ ಮೆಕ್‌ಹೆರ್ರಿ

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ

# ಸತ್ತಾಂತರ

## ಪ್ರಾಣಿಜೀವನಕ್ಕೆ ಸಂಬಂಧಿಸಿದ ವಿಶಿಷ್ಟ ಕೃತಿ

**ಚಂದ್ರಕಾಂತ ಪೋಕಳೆ**

ಮೂರು ವರ್ಷಗಳ ಹಿಂದಿನ ಮಾತು. ಮರಾಠಿಯ ಶ್ರೇಷ್ಠ ಕತೆಗಾರ, ಕಾದಂಬರಿಕಾರ ವೆಂಕಟೇಶ ಮಾಡಗೂಳಕರರ 'ಸತ್ತಾಂತರ' ಎಂಬ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಿಕ್ಕಾಗ ಮರಾಠಿ ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡ ಗೊಂದಲವುಂಟಾಯಿತು. ಈ ಕಾದಂಬರಿಯು ಶ್ರೀಮತಿ ಹರ್ಡಿಯವರ ಆಂಗ್ಲ ಕೃತಿ "ಲಾಂಗೂರ್ಸ್ ಆಫ್ ಅಬೂ"– 'ಪಡಿಯಚ್ಚಾಗಿದೆ' ಎಂದು ಕೃತಿಚೌರ್ಯದ 'ಆಪಾದನೆ ಹೊರಬೇಕಾಯಿತು. ಸಾಕಷ್ಟು ವಾದ–ವಿವಾದ, ಬಿಸಿ ಬಿಸಿ ಚರ್ಚೆ, ಪ್ರತಿಕ್ರಿಯೆಗಳು ಹಲವು ತಿಂಗಳ ಕಾಲ ಹರಿದುಬಂದವು. ಹೀಗಾಗಿ 'ಸತ್ತಾಂತರ' ಕೃತಿ ಬಗ್ಗೆ ಸಾಹಿತ್ಯಾಸಕ್ತರ ಕುತೂಹಲ ಇನ್ನಷ್ಟು ಕೆರಳಲು ಕಾರಣವಾಯಿತು.

'ಸತ್ತಾಂತರ'–ಪ್ರಾಣಿ ಜಗತ್ತಿಗೆ ಸೇರಿದ ವಿಶಿಷ್ಟ ಮಾದರಿಯ ಕಾದಂಬರಿ.

ಈ ಕಾದಂಬರಿಯಲ್ಲಿ ಮಂಗಗಳ ಜೀವನ ಕ್ರಮವನ್ನು, ವಿಶಿಷ್ಟ ರೀತಿಯ ನಡತೆಯನ್ನು ತುಂಬಾ ಸೂಕ್ಷ್ಮವಾಗಿ, ಅಷ್ಟೇ ಸಂಕೀರ್ಣವಾಗಿ ವರ್ಣಿಸಲು ಪ್ರಯತ್ನಿಸಲಾಗಿದೆ. ಸಾಮಾನ್ಯವಾಗಿ ನಮ್ಮ ಕಣ್ಣಿಗೆ ಕೆಂಪು ಮುಖದ ಇಲ್ಲವೇ ಕಪ್ಪು ಮೂತಿಯ ಮಂಗಗಳು ಕಾಣಿಸುತ್ತವೆ. ಆದರೆ ಇಲ್ಲಿ Presbytis Entellus ಎಂಬ ಹನುಮಂತ ಜಾತಿಯ ಲಾಂಗೂರ ಎಂಬ ಮಂಗಗಳ ಬಗ್ಗೆ ಬರೆಯಲಾಗಿದೆ.

ಇಲ್ಲಿಯ ವರೆಗೆ ಪ್ರಾಣಿ ಶಾಸ್ತ್ರಜ್ಞರು ಹದಿನಾರು ಜಾತಿಯ ಮಂಗಗಳನ್ನು ಕಂಡು ಹಿಡಿದಿದ್ದಾರೆ. ಇದರ ಉಪಜಾತಿಗಳು ದಕ್ಷಿಣ ಏಶಿಯಾದಲ್ಲಿ ವಾಸಿಸುವುದನ್ನು ಕಾಣಬಹುದು. ಭಾರತದಲ್ಲಿ ಈ ಉಪಜಾತಿಗಳು ಧಾರವಾಡ, ಸಿಕ್ಕಿಂ, ಕೂರ್ಗ, ಕಾಶ್ಮೀರ, ಹಿಮಾಚಲ ಪ್ರದೇಶ, ಮಧ್ಯಪ್ರದೇಶ, ಮಲಬಾರ, ರಾಜಸ್ಥಾನ, ತಮಿಳನಾಡು, ಉತ್ತರ ಪ್ರದೇಶ, ಮತ್ತು ನೇಪಾಳದಲ್ಲಿ ವಾಸಿಸುತ್ತವೆ. ೧೯ನೇ ಶತಮಾನದಲ್ಲಿ ಬ್ರಿಟಿಶ್ ನಿಸರ್ಗ ವಿಜ್ಞಾನಿಗಳು ಹನುಮಂತ ಲಾಂಗೂರನ ಅಭ್ಯಾಸವನ್ನು ಪ್ರಪ್ರಥಮವಾಗಿ ಕೈಕೊಂಡರು.

"ಗಂಡು ಮಂಗಗಳ ತಂಡವೊಂದು ಕುಟುಂಬರೊಂದಿಗೆ ಇದ್ದ ಇನ್ನೊಂದು ತಂಡದ ಮೇಲೆ ಆಕ್ರಮಣ ಮಾಡಿತು" ಎಂಬ ಉಲ್ಲೇಖ ಆ ಕಾಲದ ಗ್ರಂಥಗಳಲ್ಲಿ ಕಾಣಲು ಸಿಗುತ್ತಿದೆ. ಆದರೆ ಮಂಗಗಳ ವೈಜ್ಞಾನಿಕವಾದ ಅಭ್ಯಾಸ, ಸಂಶೋಧನೆ ಚಾರ್ಲಸ್ ಮ್ಯಾಕಿನ್ ಎಂಬವನಿಂದಲೇ ಪ್ರಾರಂಭವಾಯಿತು ಎಂದು ಹೇಳ

ಬಹುದು. ಈತ ೧೯೩೩ ರಲ್ಲಿ ಮಂಗಗಳ ಸವಿವರವಾದ ಜೀವನ ಕ್ರಮವನ್ನು ನಿರೀಕ್ಷಣೆ ಮಾಡಿ ಟಿಪ್ಪಣಿ ಮಾಡಿದ್ದಾನೆ.

೧೯೫೮ ರಲ್ಲಿ ಫಿಲಿಸ್ ಜೇ ಎಂಬ ಸಂಶೋಧಕಿ ಉತ್ತರ ಭಾರತದ ಹಳ್ಳಿಗಳಲ್ಲಿ ವಾಸ ಮಾಡಿ ಇನ್ನಷ್ಟು ಹೊಸ ವಿಚಾರಗಳನ್ನು ಸಂಗ್ರಹಿಸಿದಳು. ತಾಯಿ ಮಂಗ-ಮರಿಗಳ ನಡುವಣ ಸ್ವಭಾವಗಳನ್ನು ಸ್ಪಷ್ಟವಾಗಿ, ಮುಖ್ಯವಾಗಿ ಗುರುತಿಸಿದ್ದಾಳೆ. ೧೯೬೨ ರಲ್ಲಿ ಯುಕಿಮಾರು ಸುಗಿಯಾಮಾ ಎಂಬ ಜಪಾನಿ ಶಾಸ್ತ್ರಜ್ಞನು ಕೈಕೊಂಡ ನಿರೀಕ್ಷಣೆಯಲ್ಲಿ ಗಂಡು ಮಂಗಗಳ ಆಕ್ರಮಣ ಪದ್ಧತಿ, ನಾಯಕನ ಪಲಾಯನ, ಸೋತ ತಂಡದ ಮೇಲೆ ಬಲಿಷ್ಠ ಮಂಗನ ಪ್ರಭುತ್ವ, ಸತ್ತಾಂತರ ಮತ್ತು ತಂಡದ ಮರಿಗಳ ಕಗ್ಗೊಲೆ-ಇದೆಲ್ಲದರ ಉಲ್ಲೇಖವಿದೆ. ಹೀಗೆ ಸುಮಾರು ಮೂವತ್ತು ವರ್ಷಗಳ ಕಾಲಾವಧಿಯಲ್ಲಿ ಮಂಗಗಳ ಮೇಲೆ ಹನ್ನೊಂದು ಮಹತ್ವಪೂರ್ಣ ಸಂಶೋಧನೆಗಳು ನಡೆದವು; "ಪ್ರಾಯಮೇಟ್ಸ್ ಆಫ್ ಸೌಥ್ ಏಶಿಯಾ" ಎಂಬ ಗ್ರಂಥದಲ್ಲಿ ಎಪ್ಪತ್ತೇಳು ಸಂಶೋಧಕರ ಹೆಸರುಗಳಿವೆ.

"ದಿ ಲಾಂಗೂರ್ಸ್ ಆಫ್ ಅಬೂ- ಫಿಮೇಲ್ ಎಂಡ್ ಮೇಲ್ ಸ್ಟ್ರೆಟಜೆಸ್ ಆಫ್ ರಿಪ್ರೊಡಕ್ಶನ್" ಎಂಬುದೊಂದು ವಿಶಿಷ್ಟ ಮಾದರಿಯ ಮತ್ತು ಆಕರ್ಷಕವಾದ ಸಂಶೋಧನ ಗ್ರಂಥ. ಶ್ರೀಮತಿ ಎಸ್. ಹರ್ಡಿ ಹಿಮಾಲಯದ ಪರಿಸರದಲ್ಲಿ ನಾಲವತ್ತೈದು ವರ್ಷಗಳ ವರೆಗೆ ವಾಸಿಸಿ ಈ ಗ್ರಂಥವನ್ನು ಸಿದ್ಧಪಡಿಸಿದ್ದಾಳೆ ಅಲ್ಲದೆ ೨೩೯ ಗ್ರಂಥ, ಲೇಖನಾದಿಗಳ ಸೂಚಿಯನ್ನು ವಿವರವಾಗಿ ನೀಡಿದ್ದಾಳೆ.

ಹೀಗೆ ಮಂಗಗಳ ಜೀವನ ಕ್ರಮ, ಸ್ವಭಾವ, ಉಪಜೀವನ, ಆಕ್ರಮಣ, ತಂಡದ ಮೇಲಿನ ಪ್ರಭುತ್ವ, ಗಂಡು-ಹೆಣ್ಣುಗಳ ಸಂಭೋಗ, ಅಕಾಲಕ್ಕೆ ನಡೆವ ಹಿಂಸೆ, ಸಾವು-ನೋವುಗಳ ವಿಚಾರಗಳನ್ನು ಹತ್ತು-ಹಲವು ಸಂಶೋಧಕರೆಲ್ಲ ಸೇರಿ ನಿರೀಕ್ಷಣೆ ಮಾಡಿದ್ದು ಗಮನಾರ್ಹ. ಈ ಸಂಶೋಧನೆಗಳಿಗೆ ಸುಮಾರು ನೂರು ವರ್ಷಗಳ ಸುದೀರ್ಘವಾದ ಪರಂಪರೆಯಿದೆ. ಒಂದು ವೈಶಿಷ್ಟ್ಯವೇನೆಂದರೆ ಯಾವ ಸಂಶೋಧಕರೂ 'ಇದಮಿತ್ಥಂ' ಎಂದಾಗಲೀ, ತಾನು ಹೇಳಿದ್ದೇ ಸರಿ ಎಂದಾಗಲಿ ಹೇಳಿಕೊಂಡಿಲ್ಲ.

ಮಂಗಗಳ ಸ್ವಭಾವ ಕುರಿತು ಕೆಲವು ಸಂಶೋಧಕರ ಅನಿಸಿಕೆಗಳು ಹೀಗಿವೆ :

೧. ತಂಡದ ಮರಿಗಳನ್ನು ಕೊಲ್ಲುವುದು ವಿಕೃತಿಯಲ್ಲ, ಆದರೆ ಇದೊಂದು ನೈಸರ್ಗಿಕ ಕ್ರಿಯೆ. ನಾನು ನಿರೀಕ್ಷಿಸಿದ ಸಂಗತಿಗಳನ್ನೆಲ್ಲ ಈಗಾಗಲೇ ಮ್ಯಾಕೆನ್ ಗುರುತಿಸಿದ್ದಾನೆ— ಎಂಬುದು ಶ್ರೀಮತಿ ಎಸ್. ಹರ್ಡಿಯವರ ಅಭಿಪ್ರಾಯ.

೨. ಮಂಗಗಳ ಆಹಾರ ಹಣ್ಣು, ಎಲೆ, ಪಕ್ಷಿಗಳ ತತ್ತಿ ಎನ್ನುತ್ತಾರೆ ರೆಹಮಾನ.

೩. ಗಂಡು ಮಂಗ ಬಲಿಷ್ಟವಾದ ಕೂಡಲೇ ತಂದೆಯನ್ನು ಓಡಿಸಿದ್ದನ್ನು ಮೋಹನೋತ್ ನಿರೀಕ್ಷಿಸಿದ್ದಾನೆ.

೪. ಮಂಗಗಳ ಮೈಮೇಲಿನ ಹೆಚ್ಚಿನ ಗಾಯಗಳಿಗೆಲ್ಲ ಹೋರಾಟವೇ ಕಾರಣ ಎಂದು ಸುಗಿಯಾಮಾ ಹೇಳುತ್ತಾನೆ.

೫. ತಾಯಿ-ಮಗ, ತಂದೆ-ಮಗಳು ಇವರ ನಡುವೆ ಲೈಂಗಿಕ ಸಂಬಂಧ ಬೆಳೆಯದಂತೆ ತಂಡದೊಳಗೆ ಎಚ್ಚರಿಕೆ ವಹಿಸಲಾಗುತ್ತದೆ ಎಂಬುದು ಇಟಾನಿ ಶಾಸ್ತ್ರಜ್ಞನ ಅನಿಸಿಕೆ.

೬. ಆಕ್ರಮಣ ಮಾಡಿದ ಗಂಡು ಮಂಗ ತಾಯಿಯಿಂದ ಮರಿಯನ್ನು ಕಸಿದು ಕೊಲ್ಲುತ್ತದೆ. ತಾಯಿ ಕೆಲ ಕಾಲ ಹೋರಾಡಿ ತಣ್ಣಗಾಗುತ್ತದೆ. ೧೦-೧೧ ದಿನಗಳ ನಂತರ ಆ ಕೊಲೆಗಡುಕ ನಾಯಕನೊಂದಿಗೆ ಸಂಭೋಗ ನಡೆಸುತ್ತದೆ ಎನ್ನುತ್ತಾನೆ ಮೊಹನೋತ್.

ಇದೇ ರೀತಿ 'ಸತ್ತಾಂತರ' ಪ್ರಾಣಿ ಜಗತ್ತಿಗೆ ಸೇರಿದ ವಿಶಿಷ್ಟ ಕಾದಂಬರಿ. ಇಲ್ಲಿ ಮಂಗನ ಸಮಗ್ರ ಜೀವನವನ್ನು ಸೆರೆಹಿಡಿಯಲಾಗಿದೆ. ಮಂಗಗಳೇ ಇಲ್ಲಿಯ ಪ್ರಮುಖ ಪಾತ್ರಗಳು. ಆ ಮಂಗಗಳಿಗೆಲ್ಲ ಅವುಗಳ ಸ್ವಭಾವ, ದೇಹಾಕೃತಿ, ಶರೀರ ರಚನೆಯನ್ನು ಅನುಸರಿಸಿ ಹೆಸರು ಕೊಡಲಾಗಿದೆ. ಹೀಗಾಗಿ ಈ ಕೃತಿಯಲ್ಲಿ ಪ್ರಾಣಿ ಪ್ರಪಂಚದ ಶುಷ್ಕ ವರ್ಣನೆಯನ್ನು ನೀಡದೇ ಮಂಗಗಳ

ಬದುಕಿನ ಸಮಗ್ರ ಅನುಭವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ. ಮಂಗಗಳ ಸೂಕ್ಷ್ಮಾತಿ ಸೂಕ್ಷ್ಮ ಸ್ವಭಾವ, ಮೂಲ ಸಂವೇದನೆ, ಹುಟ್ಟು ಪ್ರವೃತ್ತಿಗಳನ್ನು ಪದರು ಪದರಾಗಿ ಚಿತ್ರಮಯ ಭಾಷೆಯಲ್ಲಿ ಬರೆಯಲಾಗಿದೆ.

ವೆಂಕಟೇಶ ಮಾಡಗೂಳಕರ 'ಬನಗರವಾಡಿ' 'ಕರುಣಾಷ್ಟಕ'ದಂತಹ ಶ್ರೇಷ್ಠ ಕಾದಂಬರಿಗಳನ್ನು ನಿರ್ಮಿಸಿದ ಪ್ರತಿಭಾವಂತ. ಬನಗರವಾಡಿಯಂತೂ ಜಗತ್ತಿನ ಹಲವು ಭಾಷೆಗಳಿಗೆ ಅನುವಾದಗೊಂಡಂಥ ಕೃತಿ. ಈ ಲೇಖಕನಿಗೆ ಮೊದಲಿನಿಂದಲೂ ಪ್ರಾಣಿಪ್ರಪಂಚದ ಬಗ್ಗೆ ಆಸಕ್ತಿ. ತನ್ನ ಜೀವನದ ಉದ್ದಕ್ಕೂ ತುಂಬಾ ಲವಲವಿಕೆಯಿಂದ ನಿಸರ್ಗವನ್ನು ಗಮನಿಸುತ್ತ ಬಂದಿದ್ದಾರೆ. ಭಾರತದ ಹತ್ತು ಹಲವು ಗೊಂಡಾರಣ್ಯಗಳನ್ನು ಸುತ್ತಿ ಸುಳಿದು ಬಂದಿದ್ದಾರೆ. 'ಸತ್ತಾಂತರ' ಕಾದಂಬರಿಗೆ 'ಲಾಂಗೂರ್ಸ್ ಆಫ್ ಅಬೂ' ತುಂಬಾ ಸಹಾಯ ಮಾಡಿದೆ ಎಂಬುದನ್ನು ಪ್ರಾಮಾಣಿಕವಾಗಿ ಒಪ್ಪುತ್ತಾರೆ. ಆದರೆ ಆ ಗ್ರಂಥದ ಚಿತ್ರ, ಹಾಗೂ ವಿಷಯವನ್ನು ಯಥಾವತ್ತಾಗಿ ಎತ್ತಿಕೊಂಡಿದ್ದಾರೆಂಬ ವಿಮರ್ಶಕರ ಕೃತಿಚೌರ್ಯದ ಆಪಾದನೆಯನ್ನು ನಿರಾಕರಿಸಿದ್ದಾರೆ. ಈ ವಾದ ವಿವಾದ ಏನೇ ಇರಲಿ, ಆದರೆ ಇವರ ನಿಸರ್ಗ ಪ್ರೇಮ, ಪಶು–ಪಕ್ಷಿಗಳ ಬಗೆಗಿನ ಸೂಕ್ಷ್ಮಾವಲೋಕನ, ಪ್ರಾಣಿಪ್ರಪಂಚದ ನಿರಂತರ ಅಭ್ಯಾಸ, ಅರಣ್ಯದ ಮುಕ್ತ ಸಂಚಾರದ ಫಲವೇ ಈ 'ಸತ್ತಾಂತರ' ಕಾದಂಬರಿ ಎಂದರೆ ಅತಿಶಯೋಕ್ತಿಯಲ್ಲ ಹಲವು ವರ್ಷಗಳ ಹಿಂದೆ ಪ್ರಾಣಿಪ್ರಪಂಚದ ಜೀವನದ ಬಗ್ಗೆ 'ನಾಗರಝರಿ' ಎಂಬ ಗ್ರಂಥ-



"ನಿರುದ್ಯೋಗ, ಶಿಕ್ಷಣ, ಬೆಲೆ ಏರಿಕೆ, ನೀರು, ವಸತಿ, ವಿದ್ಯುಚ್ಛಕ್ತಿ ಈ ಸಣ್ಣ ಸಮಸ್ಯೆಗಳು ಬಿಟ್ರೆ ಬಾಕಿಯಲ್ಲ ಈಗಾಗ್ಲೆ ಬಗೆ ಹರ್ಸಿದೀವಿ ನಾವು."

ವೊಂದನ್ನು ಪ್ರಕಟಿಸಿದ್ದರು.

'ನಾಗರಝರಿ'— ಭಂಡಾರಾ ಜಿಲ್ಲೆಯ ಒಂದು ಅಭಯಾರಣ್ಯ. ಈ ಅರಣ್ಯದಲ್ಲಿ ತಿಂಗಳುಗಟ್ಟಲೆ ವಾಸಮಾಡಿ ಮಂಗಗಳ ಜೀವನಕ್ರಮವನ್ನು ತುಂಬಾ ಸಮೀಪದಿಂದ ಅವಲೋಕಿಸಿದ್ದಾರೆ. 'ಸತ್ಯಾಂತರ' ಕಾದಂಬರಿಗೆ ಸುಮಾರು ೨೫ ವರ್ಷಗಳ ದೀರ್ಘವಾದ, ಅಷ್ಟೇ ಗಾಢವಾದ ಅನುಭವವೇ ಮೂಲ ಕಾರಣ. ಹೀಗೆ ಮಂಗಗಳ ವಿಷಯದಲ್ಲಿ ಬೆಳೆದ ಆಸಕ್ತಿ ಹಲವು ಅರಣ್ಯಗಳನ್ನು ಸುತ್ತುವಂತೆ ಮಾಡಿತು. ಅಲ್ಲದೆ ಕೆಲವು ಇಂಗ್ಲಿಷ್ ಗ್ರಂಥಗಳನ್ನು ಅವಲೋಕಿಸುವಂತೆ ಪ್ರಚೋದಿಸಿತು. ಇಷ್ಟು ಮಾತ್ರ ಸತ್ಯ. 'ಸತ್ಯಾಂತರ' ಕಾದಂಬರಿ ರಚನೆಯ ಹಿಂದೆ ಲೇಖಕನ ದೀರ್ಘ ತಪಸ್ಸಿದೆ. ಅರಣ್ಯದ ವರ್ಣ, ಗಂಧ, ಸುವಾಸನೆ, ರಸ, ಧ್ವನಿಯ ಗಾಢ ಪರಿಚಯವೇ ಈ ಲೇಖಕನ ಅನುಭವಪ್ರಪಂಚವಾಗಿದ್ದರಿಂದಲೇ ಇಂಥ ಕೃತಿಯ ರಚನೆ ಸಾಧ್ಯವಾಯಿತು.

'ಸತ್ಯಾಂತರ'– ಕೇವಲ ಪ್ರಾಣಿ ಕಥೆಯನ್ನಷ್ಟೇ ಹೇಳುವ ಬಾಲಿಶ ಕೃತಿಯಲ್ಲ. ಮಾನವನ ಗುಣ–ದೋಷ, ಸ್ವಭಾವಗಳನ್ನು ಹೊತ್ತ 'ಪಂಚ ತಂತ್ರ'ದಂತಹ ನೀತಿಕತೆಯೂ ಅಲ್ಲ. ಆದರೆ ಇದು ಮಂಗಗಳ ಜೀವನ ಕ್ರಮವನ್ನು ಹೃದಯಂಗಮವಾಗಿ ಅಷ್ಟೇ ಕುತೂಹಲಕಾರಿಯಾಗಿ ಮತ್ತು ರಮ್ಯವಾಗಿ ಚಿತ್ರಿಸುವ ಜೀವಂತ ಕಲಾಕೃತಿ. ಇದು ಎಂಟು ಅಧ್ಯಾಯಗಳಿಂದ ಕೂಡಿದ ಸುಮಾರು ೮೦ ಪುಟಗಳ ಕಿರು ಕಾದಂಬರಿ. ಪುಟ–ಪುಟಗಳಲ್ಲಿ ಸ್ವತಃ ಲೇಖಕರೇ ಬರೆದ ಮಂಗಗಳ ಜೀವನಕ್ಕೆ ಸಂಬಂಧಿಸಿದ, ಅನುರೂಪವಾದ ಹಲವು ಚಿತ್ರಗಳೂ ಇವೆ. ಇಲ್ಲಿಯ ಕಥಾನಕದಲ್ಲಿ ಒಂದು ಸುಸೂತ್ರತೆ ಇದೆ. ಬಿಗಿಯಾದ ಬಂಧವಿದೆ. ಹಾಗೇ ನೋಡಿದರೆ ಇದೊಂದು ನಿರೂಪಣಾ ಪ್ರಧಾನ ಕಾದಂಬರಿ. ಸಂಭಾಷಣೆಗೆ ಇಲ್ಲಿ ಅವಕಾಶವಿಲ್ಲ. ಮಂಗಗಳ ಹಾವ-ಭಾವ, ಸ್ವಭಾವ, ಚಲನ–ವಲನ, ಧ್ವನಿಗಳೇ ಮಾತನಾಡುವ, ಸಂಕೇತಿಸುವ, ಸಂಜ್ಞೆ ನೀಡುವ ಕೆಲಸ ಮಾಡುತ್ತವೆ. ಹೀಗಾಗಿ ಇಲ್ಲಿ ಧ್ವನಿ ಮಾಧ್ಯಮವನ್ನೇ ಸಂವಾದಕ್ಕೆ ಅನುರೂಪಗೊಳ್ಳುವಂತೆ ಬಳಸಿಕೊಳ್ಳಲಾಗಿದೆ. ಈ ಕೃತಿಯಲ್ಲಿ ಅವುಗಳ ಜೀವನಕ್ಕೆ ಅನುಗುಣವಾಗುವ, ರೀತಿ–ನೀತಿಗೆ ಹೋಲುವ, ಸ್ವಭಾವ ವ್ಯಕ್ತಗೊಳ್ಳುವ ರೇಖಾ ಚಿತ್ರವನ್ನು, ಭಾವವನ್ನು ತುಂಬಾ ಮಾರ್ಮಿಕವಾಗಿ ಚಿತ್ರಿಸಲಾಗಿದೆ.

ಸೀಳು ನಾಯಿಗಳ ಆಕ್ರಮಣಕ್ಕೆ ತುತ್ತಾದ ಬೋಥರಿ ಎಂಬ ಮಂಗವೊಂದರ ದುರಂತ ಚಿತ್ರಣ ಮನ ಕಲಕುವಂತಹದು.

"ಬೋಥರಿ ಬಾಲವೆತ್ತಿ ಓಡಿತು. ತರಗೆಲೆಯ ಮೇಲೆ ಸಪ್ಪಳವಾಯಿತು. ಕಂಟಿಯೊಂದರ ಮರೆಯಲ್ಲಿ ಅಡಗಿದ್ದ ಸೀಳು ನಾಯಿಯೊಂದು ಧುತ್ತೆಂದು ಎರಗಿತು. ಅನಿರೀಕ್ಷಿತ ಆಕ್ರಮಣದಿಂದ ಗಾಬರಿಗೊಂಡ ಬೋಥರಿಯ ಕಾಲು ಜಾರಿ ತರಗೆಲೆಯ ಮೇಲೆ ಉರುಳಿತು. ಕ್ಷಣಾರ್ಧದೊಳಗೆ ಆ ಸೀಳು ನಾಯಿ ಮಂಗದ ಕುತ್ತಿಗೆಗೆ ತನ್ನ ಬಾಯಿ ಹಾಕಿ ದವಡೆಯ ಹಿಡಿತವನ್ನು ಬಿಗಿ ಮಾಡಿ ಕಟಕ್ಕೆಂದು ಮುಚ್ಚಿತು.

ಬೋಥರಿಯ ಬಾಲದಲ್ಲಿ, ಕೈಕಾಲುಗಳಲ್ಲಿ ಒಂದು ರೀತಿಯ ವಿಲಕ್ಷಣವಾದ ನೋವು ಕಾಣಿಸಿಕೊಂಡಿತು. ಕೆರಳಿದ ನಾಗರಹಾವು ಹೆಡೆ ಅಪ್ಪಳಿಸುವಂತೆ ಅದು ತನ್ನ ಬಾಲವನ್ನು ನೆಲಕ್ಕೆ ಅಪ್ಪಳಿಸಿತು.

"ನಾಯಿ ತನ್ನ ದವಡೆಯ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಿತು. ಮುಂದಿನ ಕಾಲಿನಿಂದ ಎದೆ ಅದುಮಿ ಹಿಡಿದು, ಎರಡು–ಮೂರು ಸಲ ಗೋಣು ಹರಿಯಿತು. ನಿರ್ಜೀವಗೊಂಡ ಬೋಥರಿಯ ದೇಹ ಮುದ್ದೆಯಾಗಿಬಿತ್ತು. ಮರುಕ್ಷಣ ಹೆಣ್ಣು ಸೀಳು ನಾಯಿಯೊಂದು ಧಾವಿಸಿ ಬಂದು. ಬೋಥರಿಯ ತೊಡೆಯನ್ನು ಮುರಿಯಿತು. ಇದೇ ಕಾಲಕ್ಕೆ ಆಕೆಯ ಆರು ಮರಿಗಳು ಪುಟಪುಟನೆ ಧಾವಿಸಿ ಬಂದವು. ಹೀಗೆ ನಾಲ್ಕು ತಿಂಗಳ ಆರು ಮರಿಗಳು, ಅವುಗಳ ತಾಯಿ ಮತ್ತು ತಂದೆ ತಮ್ಮ ಆಹಾರದ ಮೇಲೆ ಎರಗಿದವು." (ಪುಟ ೧೫–೧೬)

ಪ್ರಾಣಿ ಜೀವನದ ಕುರಿತು, ಸಂಶೋಧಕರ ಬರವಣಿಗೆಗೂ ಸೃಜನಶೀಲ ಬರವಣಿಗೆಗೂ ಸಾಕಷ್ಟು ವ್ಯತ್ಯಾಸವಿದೆ. ರಮ್ಯವಾದ ಭಾಷೆ, ಕುತೂಹಲ ಕೆರಳಿಸುವ ಧಾಟಿ, ಶಾಬ್ದಿಕ ಚಮು

ತ್ಕಾರ, ವಿಶಿಷ್ಟ ರೀತಿಯ ಪದ ಪ್ರಯೋಗ, ರುಚಿ–ವಾಸನೆ–ಬಣ್ಣ–ಸ್ಪರ್ಶಕ್ಕೆ ತಕ್ಕಂತೆ ಬಳಸುವ ಶಬ್ದ ಮತ್ತು ಧ್ವನಿ ಮಾಧ್ಯಮ ಸೃಜನಶೀಲ ಲೇಖಕರ ವೈಶಿಷ್ಟ್ಯವಾಗಿದೆ. ಸತ್ತಾಂತರದಲ್ಲಿ ಸಂವೇದನೆಯನ್ನು ಕೆರಳಿಸುವ ಸಂಕೀರ್ಣವಾದ ಅನುಭವ ತುಂಬಾ ಸಶಕ್ತವಾಗಿ ಮೂಡಿಬಂದಿದೆ. ಇದೊಂದು ಅನನ್ಯ ರೀತಿಯ ಬರವಣಿಗೆ.

ಗಂಡು ವಾನರ ತಂಡಗಳು; ಹೆಣ್ಣು ಮಂಗಗಳು— ಮರಿಗಳು ಮತ್ತು ನಾಯಕನಿದ್ದ ಇನ್ನೊಂದು ತಂಡದ ಮೇಲೆ ಆಕ್ರಮಣ ಮಾಡುತ್ತವೆ. ಈ ಹೋರಾಟದಲ್ಲಿ ಆ ಏಕೈಕ ಗಂಡು ತೀವ್ರ ಆಕ್ರಮಣಕ್ಕೆ ತುತ್ತಾಗಿ, ಮೈತುಂಬ ಗಾಯವಾಗಿ ಅಲ್ಲಿಂದ ಪಲಾಯನಹೇಳುತ್ತದೆ. ಅನಂತರ ಗಂಡು ತಂಡಗಳ ಬಲಿಷ್ಠ ಆ ಹೆಣ್ಣು ತಂಡದ ಮೇಲೆ ಸ್ವಾಮಿತ್ವ ಗಳಿಸುತ್ತದೆ. ಹೊಸ ನಾಯಕ ತಂಡದಲ್ಲಿದ್ದ ಮೊಲೆಗೂಸುಗಳನ್ನೂ ಕೊಲ್ಲುತ್ತದೆ. ಕಾಲಾಂತರದಲ್ಲಿ ತಂಡದ ಎಲ್ಲ ಹೆಣ್ಣುಗಳೊಂದಿಗೆ ಲೈಂಗಿಕ ಸಂಬಂಧ ಬೆಳೆಸುತ್ತದೆ.

ಪ್ರತಿಯೊಂದು ತಂಡ ನಿರ್ದಿಷ್ಟ ಅರಣ್ಯ ಭಾಗವನ್ನು ಆಯ್ದುಕೊಂಡು ಉಪಜೀವನ ನಡೆಸುತ್ತದೆ. ಬೇರೆ ಸೀಮೆಯ ಅತಿಕ್ರಮಣ ಮಾಡುವುದು ಗಂಡಾಂತರಕಾರಿ. ತಂಡದಲ್ಲಿ ಹುಟ್ಟಿದ ಗಂಡು ಕಾಲಾಂತರದಲ್ಲಿ ನಿರ್ಗಮಿಸುತ್ತದೆ. ಕೆಲ ಕಾಲ ಅಲ್ಲಿ ಇಲ್ಲಿ ಒಂಟಿಯಾಗಿ ಓಡಾಡಿಕೊಂಡಿದ್ದು, ಬಲಿಷ್ಠವಾದ ಕೂಡಲೇ ಬೇರೊಂದು ತಂಡ ಕಟ್ಟಿ ಹೆಣ್ಣು ತಂಡದ ಮೇಲೆ ಆಕ್ರಮಣ ಮಾಡುತ್ತದೆ. ಆ ತಂಡದ ನಾಯಕನನ್ನು ಸೋಲಿಸಿ, ಪ್ರಭುತ್ವ—ಸತ್ತೆಯನ್ನು ಪಡೆಯುತ್ತದೆ.

ಮಂಗಗಳ ಜೀವನ ತುಂಬಾ ಆತಂಕಕಾರಿ. ಯಾವ ಕ್ಷಣಕ್ಕೂ ಕ್ರೂರ ಪ್ರಾಣಿಗಳ ಆಕ್ರಮಣವಾಗಬಹುದು. ಇಲ್ಲವೆ ಗಂಡು ವಾನರ ಎರಗಬಹುದು. ಜೀವದ ಅಸ್ತಿತ್ವಕ್ಕಾಗಿ, ಅಧಿಕಾರಕ್ಕಾಗಿ, ಸತ್ತೆಗಾಗಿ ಆ ನಾಯಕ ಹೋರಾಡುವ ಸಿದ್ಧತೆಯಲ್ಲಿರಬೇಕು. ಇಲ್ಲವಾದಲ್ಲಿ ಬದುಕಿಗೆ ಅಪಾಯ ತಪ್ಪಿದ್ದಲ್ಲ. ನೀರು ಕುಡಿಯುವಾಗ, ಆಹಾರ ಹುಡುಕಿ ಹೊರಟಾಗ, ರಾತ್ರಿ ಕತ್ತಲೆಯಲ್ಲಿ ತೂಕಡಿಸುವಾಗ, ಹೀಗೆ ಪ್ರತಿಕ್ಷಣ, ಪ್ರತಿದಿನ ಇಡೀ ದೇಹವನ್ನು ಕಣ್ಣಾಗಿಸಿ ಬದುಕಬೇಕಾಗುತ್ತದೆ. ತಂಡವನ್ನು ರಕ್ಷಿಸುವುದು, ಎಚ್ಚರಿಕೆ ನೀಡುವುದು, ಅಪಾಯದ ಬಗ್ಗೆ ಸೂಚನೆ ಇಲ್ಲವೆ ತೀವ್ರ ಹೋರಾಟಕ್ಕೆ ಅಣಿಯಾಗುವುದು. ಆಯಾ ತಂಡದ ನಾಯಕನ ಗುರುತರ ಹೊಣೆಗಾರಿಕೆ.

"ಸಂಘರ್ಷವೊಂದು ನಿರಂತರ ಪ್ರಕ್ರಿಯೆ. ಇದು ಅತಿ ವೇಗವಾಗಿ ಬೆಳೆಯುತ್ತದೆ. ತಿನ್ನುವ ಬಾಯಿಗಳು ಹೆಚ್ಚಾದಂತೆ ಸಂಘರ್ಷ ಪ್ರಖರಗೊಳ್ಳುತ್ತದೆ. ಆಹಾರಕ್ಕೆ—ನೆಲಕ್ಕೆ ಪಾಲುಗಾರ ಹುಟ್ಟಿಕೊಂಡಾಗ ಇದೇ ಸಂಘರ್ಷ ಪರಾಕಾಷ್ಠೆಯ ತುತ್ತ ತುದಿ ಏರುತ್ತದೆ. ಯಾವ ಕ್ಷಣ ಅಸ್ಥಿರತೆ ನಿರ್ಮಾಣಗೊಳ್ಳುವದೋ, ಅಸ್ತಿತ್ವಕ್ಕೆ ಗಂಡಾಂತರ ಬರುವುದೋ, ಪರಕೀಯರು ತಂಡದೊಳಗೆ ನುಗ್ಗಲು ಪ್ರಯತ್ನ ನಡೆಯುವುದೋ ಆ ಕ್ಷಣ ಸಂಘರ್ಷ ಸಿಡಿದೇಳುತ್ತದೆ.

ಬಾಯಿ ಇದ್ದವರು ತಮ್ಮ ರಾಗ, ದ್ವೇಷಗಳನ್ನು ಶಬ್ದಗಳಿಂದ ವ್ಯಕ್ತಪಡಿಸುತ್ತಾರೆ. ಮಾತನಾಡಲು ಬಾರದವರು ಹಾವಭಾವ, ಸ್ಪರ್ಶಗಳಿಂದ ಅಭಿವ್ಯಕ್ತಗೊಳಿಸುತ್ತಾರೆ.

ಸಂಘರ್ಷ ಹೊತ್ತಿಕೊಂಡರೆ ಶಸ್ತ್ರಾಸ್ತ್ರಗಳ ಬಳಕೆಯಾಗುತ್ತದೆ. ಶಸ್ತ್ರ ಇಲ್ಲದವರು ತೀಕ್ಷ್ಣವಾದ ಹಲ್ಲು, ಉಗುರುಗಳನ್ನು ಬಳಸುತ್ತಾರೆ. ಹೀಗೆ ಸಂಘರ್ಷ ಸರ್ವವ್ಯಾಪಿ, ಸಾರ್ವಕಾಲಿಕ" (ಪುಟ ೭೦).

ಒಟ್ಟಿನಲ್ಲಿ ಇದೊಂದು ಅನನ್ಯ ಕಾದಂಬರಿ. ಕನ್ನಡದಲ್ಲಿ ಪ್ರಾಣಿ ಜಗತ್ತಿಗೆ ಸೇರಿದ ಇಂಥ ಹೃದಯಸ್ಪರ್ಶಿ, ಸಂಶೋಧನಾತ್ಮಕ ವಿಶಿಷ್ಟ ಕಾದಂಬರಿ ಇನ್ನೂ ಬಂದಿಲ್ಲ. ෧



ಗೌರೀಶ ಕಾಯ್ಕಿಣಿ

# ಡಾ. ಕಾರಂತರು ಕಂಡಂತೆ

೮೭ನೆಯ ವರ್ಷ ವಯಸ್ಸಿನಲ್ಲಿ ಅವರು ಸಾಕಷ್ಟು ಹಣ್ಣಾಗಿದ್ದಾರೆ—ಅಂದರೆ ಮಾಗಿದಂತೆ ಕಾಣುತ್ತಾರೆ. ವಿವಿಧ ಕ್ಷೇತ್ರಗಳಲ್ಲಿ ದಾಳಿ ಇಕ್ಕಲು ನುಗ್ಗುವ ಅವರ ಆ ಹಿಂದಿನ ಉರಿಯುವ ಭಾವಾವೇಶ ಈಗ ಉಳಿದಿಲ್ಲ. (ಆದರೆ ತೀರ ಈಚೆಗೆ ಕೈಗಾ ಅಣುಸ್ಥಾವರ ಸ್ಥಾಪನೆಯ ಹಾಗೂ ಆ ಮೂಲಕ ಉಂಟಾಗಲಿರುವ ಉತ್ತರ ಕನ್ನಡ ಜಿಲ್ಲೆಯ ಉತ್ತರ ಕರಾವಳಿಯ ಪ್ರದೇಶದಲ್ಲಿಯ ಭಾರಿ ಪರಿಸರ ಮಾಲಿನ್ಯ ಕ್ಷೋಭದ ವಿರುದ್ಧ ಡಾ. ಕಾರಂತರು ಎತ್ತಿದ ಉಗ್ರ ಧ್ವನಿಯಲ್ಲಿ ಆ ಹಳೆಯ ಕಾವು ಅಚ್ಚುಳಿಯದಿದೆ!
—ಲೇಖಕ)

ವಯೋಮಾನವು ಡಾ. ಶಿವರಾಮ ಕಾರಂತರನ್ನು ಸೋಲಿಸಿದಂತಿದೆ—ಪ್ರಮುಖ ಕಾದಂಬರಿಕರ್ತ, ನಾಟಕಕಾರ, ಶಿಕ್ಷಣತಜ್ಞ ಮತ್ತು ಯಕ್ಷಗಾನದಂಥ ಜಾನಪದ ಕಲೆಯನ್ನು ಪುನರುಜ್ಜೀವನಗೊಳಿಸಿದ ಕಾರಣ ಪುರುಷ. ನಮ್ಮ ಸುದೈವಕ್ಕೆ, ಇಂದಿಗೂ ತಮ್ಮ ವಿನೋದ ಬುದ್ಧಿಯನ್ನು ಪ್ರಖರವಾಗಿಯೇ ಉಳಿಸಿಕೊಂಡಿದ್ದಾರೆ. ಜತೆಗೆ ಹಲವಾರು ಕ್ಷೇತ್ರಗಳಲ್ಲಿಯ ಪ್ರಗತಿ ವಿಕಾಸದ ಹೆಜ್ಜೆ ಪಾಡು ಗುರುತಿಸಿಡುವ ತಮ್ಮ ಅದಮ್ಯ ಉತ್ಸಾಹವನ್ನು ಕಾಪಾಡಿಕೊಂಡಿರುತ್ತಾರೆ.

"ಬದುಕನ್ನು ಅರಿತುಕೊಳ್ಳಲು ನೂರು ಜನ್ಮಗಳೂ ಸಾಲವು" ಅನ್ನುತ್ತಾರೆ ಕಾರಂತರು. ಅವರ ಹೆಸರು ಇಂದು ಯಕ್ಷಗಾನಕ್ಕೆ ಸಮಾನಾರ್ಥಕವಾಗಿದೆ. ಆದರೂ ಆ ಕಲೆಯ ಪುನರುಜ್ಜೀವನಕ್ಕಾಗಿ ಅವರು ಗೈದ ಪ್ರಯತ್ನಗಳು ವಿಶೇಷ ಲಾಭಾಂಶಗಳನ್ನು ಒದಗಿಸಿದಂತಿಲ್ಲ. "ಹೇಳಲು ನನಗೆ ವ್ಯಸನವಾಗುತ್ತದೆ. ಯಕ್ಷಗಾನವು ಇಂದು ರಂಗಭೂಮಿಯದೇ ದೌರ್ಭಾಗ್ಯವನ್ನು ಎದುರಿಸುತ್ತಿದೆ. ಅದು ವಾಣಿಜ್ಯೋದ್ಯಮವಾಗಿ ಕೇವಲ ಅವ್ಯವಹಾರ್ಯವೆನಿಸಿದೆ. ೩೦ ಮಂದಿಗೆ ಕನಿಷ್ಟ ೧೫೦ ಆಟಗಳನ್ನು ಆಡಲಿಕ್ಕೆ ತಲಾ ೧೦೦ ರೂ. ಎಷ್ಟು ಕಾಲ ನೀವು ತೆರಬಲ್ಲಿರಿ?" ಕಾರಂತರು ಕೇಳುತ್ತಾರೆ.

('ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯಲ್ಲಿ ಬಂದ ಒಂದು ಲೇಖನವನ್ನು ಆಧರಿಸಿದೆ.)

ಯಕ್ಷಗಾನವನ್ನು ಜನಪ್ರಿಯಗೊಳಿಸಲಿಕ್ಕೆ ಕಾರಂತರು ಈ ಬಯಲಾಟಗಳನ್ನು ದೇಶದಲ್ಲೆಲ್ಲ ರಂಗದಲ್ಲಿ ಆಡಿಸಿ ತೋರಿಸಿದರು. ಆದರೂ ಅದಕ್ಕೆ ಪ್ರತಿಕ್ರಿಯೆ ಬಹಳೇನು ಉತ್ತೇಜಕವಾಗ ಲಿಲ್ಲ. (ಆದಾಗ್ಯೂ ಸಮ್ಮ ವ್ಯಾವಸಾಯಿಕ ಮೇಳ ಗಳೂ ಕಳೆದ ೧-೨ ದಶಕಗಳಿಂದಲೂ ಕಾರಂತರು ಸೂಚಿಸಿದ ವೇಷ-ಭೂಷ-ಪಾತ್ರ ಪರಿಕರ ರಂಗ ವಿನ್ಯಾಸ ಹಾಗೂ ಭಾಗವತರ ಹಾಡುಗಾರಿಕೆಯ ಶುಚಿರುಚಿಗಳ ಹಲವಾರು ಪರಿಕಲ್ಪನೆಗಳನ್ನು ರಂಗದಲ್ಲಿ ರೂಢಿಸಿಕೊಂಡಿದ್ದೂ ಕಂಡುಬರುತ್ತದೆ. —ಲೇಖಕ)

ಆದಾಗ್ಯೂ ಜಪಾನಿನಲ್ಲಿ ಅವರು ಆಡಿಸಿದ ಎರಡು ಆಟಗಳನ್ನು ಟೋಕಿಯೋದಿಂದ ಕೊಕಾ-ಯ್ದಾದ ವರೆಗೂ ಕಿಕ್ಕಿರಿದ ರಂಗಮಂದಿರಗಳು ಸ್ವಾಗತಿಸಿದವು. ಜಪಾನಿನ ವಿಮರ್ಶಕರ ಸಂಘವು ಒಂದು ಆಟವನ್ನು ಆ ವರ್ಷದ ಉತ್ತಮ ರಂಗ ಪ್ರಯೋಗವೆಂದು ಘೋಷಿಸಿತು.

ಈ ದೇಶದಲ್ಲಿ ವ್ಯಾವಸಾಯಿಕ ವೃತ್ತಿ ತತ್ವದ ಕೊರತೆ ರಂಗಭೂಮಿಯ ಪ್ರಗತಿಗೆ ನಿಜವಾ ಗಿಯೂ ತೊಡಕಾಗಿದೆ. ಇಲ್ಲಿ ಕಲಾವಿದನು ರಂಗ ಕ್ರಿಯಾಕೌಶಲವನ್ನು ಅಭ್ಯಸಿಸುವತ್ತ ಗಮನ ಕೊಡುವದು ತೀರ ಕಡಿಮೆ. ಇದು ನಾಟ್ಯಕೃತಿಗ ಳನ್ನು ಯಶಸ್ವಿಯಾಗಿ ಪ್ರದರ್ಶಿಸುವದಕ್ಕೆ ಕೇವಲ ಸಾರಭೂತ ಅಗತ್ಯ.

ಈ ಸಮಸ್ಯೆಗೆ ಇನ್ನೊಂದು ತೊಡಕೆಂದರೆ ಒಂದು ರಂಗಮಂಚ(ಮಂದಿರ)ದ ಮಾದರಿಯ ಅಭಾವ. ಆದರೆ ದೇಶದಲ್ಲಿ ಹಾಡು ಹಾಗೂ ಸಂಗೀತದ ಆಯ್ದು ಸಂಗ್ರಹ ವೈವಿಧ್ಯ (Repertoire) ಸಮೃದ್ಧವಾಗಿದೆ. ಆದ್ದರಿಂದ ರಂಗ ಭೂಮಿ ಬೇರೆ ಯಾವ ಕಲಾರೂಪಗಳಂತೆಯೇ ಬೆಳೆದು ವಿಕಾಸಗೊಳ್ಳಲು ಶಕ್ಯ.

ಕಾರಂತರು ಕಂಡುಕೊಂಡ ಮೇರೆಗೆ ಇಂದಿನ ರಂಗಭೂಮಿಯ ಸನ್ನಿವೇಶದಲ್ಲಿ ನಾಟಕಕಾರ ಅಮುಖ್ಯ. ದಿಗ್ದರ್ಶಕನೇ ಸರ್ವೇಸರ್ವ ಭೂಮಿಕೆ ವಹಿಸಿಕೊಳ್ಳುತ್ತಾನೆ. ("ಪ್ರಯೋಗ ಪ್ರಧಾನಂ ಹಿ ನಾಟ್ಯಂ" ಎಂದಾಗ ಕಾಳಿದಾಸನೂ ಇದೇ ಮಾತನ್ನು ಒಪ್ಪಿಕೊಂಡಂತೆ! - ಲೇಖಕ.) ಬೇರೆ ಕಡೆಗೆ ನಿರ್ದೇಶಕನು ಪ್ರಸ್ತುತ ವಸ್ತುವನ್ನು ಅರ್ಥೈಸುತ್ತಾನೆ. ಅದನ್ನು ಧ್ವಂಸಗೊಳಿಸಲು ತೊಡಗುವದಿಲ್ಲ!

ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ. ಕಾರಂತರು ೫೦ ಕ್ಕೂ ಮೀರಿ ಕಾದಂಬರಿಗ ಳನ್ನು ಬರೆದಿದ್ದಾರೆ, ಚೋಮನ ದುಡಿ, ಮೂಕ-ಜ್ಜಿಯ ಕನಸುಗಳು ಒಳಗೊಂಡು. ಒಬ್ಬ ವಿಮ ರ್ಶಕರು ಒಮ್ಮೆ ಅಂದಿದ್ದರು "ಅವರ ಕಾದಂಬರಿ ಗಳು ಹಿರಿಯ ಸಾಮಾಜಿಕ ಟೀಕೆ. ಅದೊಂದು ಮಾನವತಾವಾದಿಯ ಪ್ರಕಟಣೆ (Testament). ನಾಯಕ ವಿಭೂತಿಗಳಲ್ಲದವರ ನಾಯಕವಿಭೂತಿ-ತ್ವವನ್ನು ಉತ್ಸವೀಕರಿಸುವ ಕ್ರಿಯೆ."

ತಮ್ಮ ಕಾದಂಬರಿಗಳ ಮಹತ್ವದ ಕುರಿತು (ಅವುಗಳಲ್ಲಿ ಬಹುಪಾಲು ಕನ್ನಡ ಕರಾವಳಿಯ ಬದುಕಿನವು) ಕಾರಂತರ ಹೇಳಿಕೆಯಂತೆ ಈಚಿನ ಬಹಳಷ್ಟು ಕಾದಂಬರಿಗಳು ಇಂದಿಗೆ ಬಹಳ 'ರಲೆ-ವೆಂಟ್' ಆಗಿವೆ. "ನನಗೆ 'ರೆಲೆವೆನ್ಸ್' ಅಂದರೆ, ನನ್ನ ಬದುಕಿಗೆ ಮತ್ತು ಪರಿಸರಕ್ಕೆ ರೆಲೆವೆಂಟ್ ಆಗಿರುವದು ಮತ್ತು ಯಾರಿಗಾಗಿ ನಾನು ಬರೆ ಯುತ್ತೇನೋ ಅವರಿಗೆ."

ತನ್ನ ಆರಂಭದ ದಿನಗಳನ್ನು ನೆನೆಯುತ್ತ ಕಾರಂತರು ಜೀವನದ ಮಿಗಿಲಾದ ಹೆಚ್ಚು ಚೆನ್ನಾದ ಅನುಪಾತ ದೃಷ್ಟಿಯನ್ನು ಒದಗಿಸಲಿಕ್ಕೆ ವಿಜ್ಞಾನ ವಹಿಸಿದ ಭೂಮಿಕೆ ಒಪ್ಪಿಕೊಳ್ಳುತ್ತಾರೆ. "ಜಗತ್ತನ್ನು ಅರ್ಥೈಸಿಕೊಳ್ಳುವದರಲ್ಲಿ ನನಗೆ ನೆರವಾದದ್ದೂ ವಿಜ್ಞಾನ. ನನ್ನ ದೇವರು ಜಗದ ಸಮಸ್ಯೆಯನ್ನು ಬಗೆ ಹರಿಸಲು ಸಹಾಯ-ಮಾಡುವದಿಲ್ಲ ವಸ್ತುತಃ ನನ್ನ ತತ್ವಜ್ಞಾನ ವಿಜ್ಞಾನದ ಮೇಲೆ ಕಟ್ಟನಿಂತಿದೆ. ಅದೇ ನನಗೆ ಯಾವದೊಂದು ಸನ್ನಿವೇಶವನ್ನು ವಿಶ್ಲೇಷಿಸಲೂ ಅರ್ಥೈಸಿಕೊಳ್ಳಲೂ ನೆರವಾಗುತ್ತದೆ."

"ಇತರ ಲೇಖಕರ ಪ್ರಭಾವವು ನನ್ನ ಮೇಲೆ ಬಿದ್ದದ್ದು ನನಗೆ ಕಂಡುಬಂದಿಲ್ಲ" ಎನ್ನುವ

ಕಾರಂತರು ಪ್ರಗತಿಶೀಲರೆನಿಸಿಕೊಂಡಿಲ್ಲ, ತಂತ್ರವನ್ನು ಉಪೇಕ್ಷಿಸುತ್ತಾರೆ ಎಂದೆಲ್ಲ ಅವರನ್ನು ಟೀಕಿಸಲಾಗುತ್ತದೆ. ಅದಕ್ಕೆ ಅವರ ಉತ್ತರವಿಷ್ಟೇ. "ನನ್ನ ಟೀಕಾಕಾರರು ಎರವಲು ತಂದ ಕಲ್ಪನಾ ಲಹರಿಗಳನ್ನೂ ನಾನು ಆಚರಣೆಗೆ ತರುವ ಅಪರಾಧ ಮಾಡಿಲ್ಲ ಎಂಬ ಮಟ್ಟಿಗೆ ನಾನು ಪ್ರಗತಿಶೀಲನಲ್ಲವೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಅಂಥ ಕಪೋಲ ಕಲ್ಪಿತ ಕಥೆಗಳನ್ನು ನಾನು ಕಟ್ಟಿದ್ದರೆ ನಾನೂ ಪ್ರಗತಿಶೀಲನೆಂದು ಎಣಿಸಲ್ಪಡುತ್ತಿದ್ದೆ. ಹಾಗೆ ಎಣಿಸಲ್ಪಟ್ಟಿಲ್ಲವೆಂಬುದಕ್ಕೆ ನನಗೆ ಯಾವ ತೊಂದರೆಯೂ ಇಲ್ಲ."

ಅವರ ದೃಷ್ಟಿಯಲ್ಲಿ ಕೌಶಲ (ತಂತ್ರ) ಒಂದು ಗುರುತಿಸಬಲ್ಲ ಅಂಶವಾಗಿ ಎಂದೂ ಕಾಣಿಸಿಕೊಳ್ಳಬಾರದು. "ಏಕೆಂದರೆ ಅದೊಂದು ಅಲಂಕರಣವಲ್ಲ, ಚಾತುರ್ಯವಲ್ಲ, ಆ ಬಗೆಗೆ ನಾನು ತೊಂದರೆ ಪಟ್ಟುಕೊಳ್ಳುವದಿಲ್ಲ, ನಾನು ಓದುಗರಿಗೆ ತಲಪಿಸುವ ಸಂವಹನೆಯಲ್ಲಿ ಸಮರ್ಥನಾಗಿರುವತನಕ."

ಭಾರತೀಯ ವಿಮರ್ಶಕರತ್ತ ಒಂದು ದೊಣ್ಣೆಯನ್ನೇ ಬೀಸುತ್ತ ಕಾರಂತರೆಂದರು, "ನಮ್ಮ ಎಲ್ಲ ಸಾಹಿತ್ಯಕ ವಿಮರ್ಶಕರು ಪಾಶ್ಚಾತ್ಯ ಒಲವುಗಳಿಂದ ಪೋಷಣೆಪಡುತ್ತಿರುವವರು. ವಿಮರ್ಶೆ ಇಲ್ಲಿ ಸಾಹಿತ್ಯಕ್ಕೆ ವಿಶೇಷ ನೆರವಾದಂತೆ ನನಗೆ ಕಾಣಿಸುವದಿಲ್ಲ, ಸಿದ್ಧಾಂತಗಳೂ ಇಸಂಗಳೂ ಪಶ್ಚಿಮದಲ್ಲಿ ವಿಕಾಸಗೊಳ್ಳುತ್ತಿರುವ ಹಿನ್ನೆಲೆಯಲ್ಲಿ."

"ಸಾಹಿತ್ಯ ತತ್ವಭೋಧನೆಗೆ ತೊಡಗಬಾರದು. (ಹಲವು ದಶಕಗಳ ಆಚೆ ನಾನು ಕಾರಂತರ ಬಗೆಗೆ ಒಮ್ಮೆ ವರಕವಿ ಬೇಂದ್ರೆಯವರನ್ನು ಕೇಳಿದ್ದೆ. ಆಗ ಅವರೆಂದಿದ್ದು ಇಂದಿಗೂ ನೆನಪಿದೆ, "ಕಾರಂತ, ಅವರೊಬ್ಬ ಶಿಕ್ಷಕರು. ತಮ್ಮ ಕೃತಿಗಳೊಳಗಿಂದ ಅವರು ಬೋಧನೆಯನ್ನೆ ಮಾಡುತ್ತಿರುತ್ತಾರೆ." ಲೇಖಕ) ಅದಕ್ಕೆ ವಿರುದ್ಧವಾಗಿ ಲೇಖಕನು ನೋಡಿದ್ದೂ ಮಾಡಿದ್ದು ಏನೆಂಬುದರ ಅಭಿವ್ಯಕ್ತಿ ಅದು. ಅದು ತಾನಾಗಿಯೇ ಸ್ವಯಂಚಾಲನೆಯಿಂದ ಉಕ್ಕಿ ಹೊರಹೊಮ್ಮಬೇಕು. ರೂಪಗೊಳ್ಳಬೇಕು."

ಅವರ ತೀರ ಈಚಿನ ಕಾದಂಬರಿ ಬರೆದು ಎರಡು ವರ್ಷಗಳಾದವು. ಕಾರಂತರು ತಾನು ಹೇಗೆ ಬರೆಯುತ್ತೇನೆಂಬುದರ ಒಂದು ಚಿತ್ತವೇಧಕ ಇಣುಕು ನೋಟನೀಡುತ್ತಾರೆ, "ನಾನು ಕೂತು ಕನಸು ಕಾಣುತ್ತೇನೆ. ನನ್ನ ಪಾತ್ರಗಳು ವಾಡಿಕೆಯಾಗಿ ಈ ಕನಸಿನಲ್ಲಿ ಬರುತ್ತವೆ. ಆದ್ದರಿಂದ ನಾನು ಹೊರಹೊರಟಾಗಲೂ ಈ ಪಾತ್ರಗಳು ನನ್ನ ಮನಸ್ಸಿನಲ್ಲಿ ಚಲಿಸುತ್ತಿರುತ್ತವೆ. ಮರುದಿನ ಅವು ವಿಕಾಸಗೊಂಡಿರುತ್ತವೆ. ಇದು ಹೀಗೆಯೇ ಸಾಗುತ್ತದೆ. ೧೦–೧೨ ದಿನ. ಹೌದು ನೀನು ಅನ್ನಲೂಬಹುದು· ನಾನು ನನ್ನ ಕಾದಂಬರಿಯನ್ನು ಕನಸುಗಳಲ್ಲಿಯೇ ಡಿಕ್ಟೇಟ್ ಮಾಡುತ್ತೇನೆಂದು." ❁



ವ್ಯಕ್ತಿಸ್ವಾತಂತ್ರ್ಯವನ್ನು ಸರಕಾರ ಎಂದಿಗೂ ತರಲಾರದು. ಸರಕಾರಗಳ ಅಂಕೆಗೊಳಗಾದ ಪ್ರಜೆಗಳಿಂದಲೇ ಅದು ಯಾವಾಗಲೂ ತಲೆಯೆತ್ತಿದೆ. ವ್ಯಕ್ತಿ ಸ್ವಾತಂತ್ರ್ಯದ ಇತಿಹಾಸ ಪ್ರತಿಭಟನೆಯ ಇತಿಹಾಸವೇ, ವ್ಯಕ್ತಿಸ್ವಾತಂತ್ರ್ಯದ ಇತಿಹಾಸ· ಸರಕಾರದ ಅಧಿಕಾರಿಗಳಿಗೆ ಹಾಕಿದ ಮಿತಿಗಳ ಇತಿಹಾಸವಲ್ಲದೆ ಅಧಿಕಾರದ ವಿಸ್ತರಣೆಯ ಇತಿಹಾಸವಲ್ಲ.

(ಸಂಗ್ರಹ) ಜೆ. ವಿ. ಶಶಿಧರ

# ಥಪ್ಪರ ಬದನೆಕಾಯಿ ಪುರಾಣ

ಶಂ. ಬಾ. ಮನಗೋಳಿ

ನನ್ನ ಹುಟ್ಟೂರು ಬಯಲು ಸೀಮೆಯಲ್ಲಿಯ ಒಂದು ಸಣ್ಣ ಹಳ್ಳಿ. ಸುತ್ತ-ಮುತ್ತ ಹತ್ತು ಹರದಾರಿಯ ವರೆಗೆ ಮಂಗಳೂರು ಹಂಚಿನ ಮನೆ ಕಣ್ಣಿಗೆ ಸಹ ಬೀಳುವದಿಲ್ಲ. ತೀರ ಸಮೀಪದ ಪಟ್ಟಣ ನಮ್ಮೂರಿಗೆ ಹನ್ನೆರಡು ಹರದಾರಿ ದೂರ. ಆದುದರಿಂದ ಪಟ್ಟಣಗಳಲ್ಲಿ ಆದ, ಆಗುತ್ತಿದ್ದ ಸುಧಾರಣೆಗಳ ಗಾಳಿ ಈಗಿನಂಥ ಗ್ರಾಮೋದ್ಧಾರದ ಚಳವಳಿಯ ಕಾಲದಲ್ಲೂ ನಮ್ಮೂರ ಮೇಲೆ ಇನ್ನೂ ಹಾಯ್ದಿಲ್ಲ. ಆದುದರಿಂದ ಆಹಾರ – ವಿಹಾರ, ಆಟ – ನೋಟ, ಖಾದ್ಯ— ಪೇಯ ಇವೆಲ್ಲವೂ ಹಿಂದಿನಂತೆಯೇ ಮುಂದೆ ಸಾಗಿದ್ದವು. ನಮ್ಮ ಆಟಗಳೆಂದರೆ ಹುಡತುತ್ತು, ತಿಳ್ಳಿ, ಕುಸ್ತಿ ಇವೇ ನಮ್ಮೂರಿನ ಯುವಕರ ಮನರಂಜನೆಯ ಸಾಧನಗಳಾಗಿದ್ದವು. ನೋಟವೆಂದರೆ ಜಾತ್ರೆಯ ಕಾಲದಲ್ಲಿ ಆಡುತ್ತಿದ್ದ ಶ್ರೀಕೃಷ್ಣಪಾರಿಜಾತ, ಲವಕುಶ ಇಂಥ ಬಯಲಾಟಗಳು. ಹಬ್ಬದೂಟವೆಂದರೆ ಗೋದಿಯ ಹುಗ್ಗಿ, ಹೋಳಿಗೆ. ಅಪ್ಪಿತಪ್ಪಿ ವರ್ಷಕ್ಕೊಮ್ಮೆ ಯಾರಾದರೂ ದೊಡ್ಡ ಸರಕಾರೀ ಅಧಿಕಾರಸ್ಥರು ಬಂದಾಗ ಚಹಾ ಆಗುತ್ತಿತ್ತು. ನಮ್ಮೂರ ಫೌಜದಾರ ಸಾಹೇಬರ ಮನೆಯಲ್ಲಿ ದಿನಾಲು ಚಹಾ ಮಾಡಿ ಕುಡಿಯುತ್ತಿದ್ದರಂತೆ! ಇಡೀ ಹಳ್ಳಿಗೆ ಇದೊಂದು ಸೋಜಿಗದ ಸುದ್ದಿ!

ನಮ್ಮೂರಲ್ಲಿ ವಾರಕ್ಕೊಂದು ದಿನ ಸಂತೆ. ಇದ್ದುಳ್ಳವರು ತಮ್ಮ ಮನೆಗೆ ವಾರಕ್ಕೆ ಬೇಕಾಗುವಷ್ಟು ತರಕಾರಿ ಕೊಂಡೊಯ್ಯುತ್ತಿದ್ದರು. ಉಳಿದವರು ಇದ್ದುದರಲ್ಲಿಯೇ ಕಾಲಹರಣ ಮಾಡುತ್ತಿದ್ದರು. ಮಳೆಗಾಲದಲ್ಲಿ ಮಾತ್ರ ಅವರವರ ಹಿತ್ತಲದಲ್ಲಿಯೇ ಕುಂಬಳ, ಸವತೆ, ಬದನೆ ಮುಂತಾದ ಕಾಯಿಪಲ್ಯ ಬೆಳೆಯುತ್ತಿದ್ದರು.

ಈ ತರಕಾರಿ ಗಿಡ ಬಳ್ಳಿಗಳಲ್ಲಿ ಅನಾಹೂತವಾಗಿ ಇನ್ನೂ ಒಂದು ಜಾತಿಯ ಗಿಡ ಬೆಳೆಯುತ್ತಿತ್ತು. ಅದಕ್ಕೆ ತಕ್ಕ ಮಟ್ಟಿಗೆ ಕಾಯಿಗಳೂ ಆಗುತ್ತಿದ್ದವು. ಆದರೆ ಅದರ ಉಪಯೋಗವನ್ನು ಯಾರೂ ಮಾಡುತ್ತಿದ್ದಿಲ್ಲವಾದ್ದರಿಂದ ಅದು ಹಿತ್ತಲಲ್ಲಿಯೋ ಕಸದ ಗುಂಡಿಗಳಲ್ಲಿಯೋ ತಂತಾನೆ ಬೆಳೆದು ಗಿಡವಾಗಿ, ಹೂಬಿಟ್ಟು ಫಲಭರಿತವಾಗುತ್ತಿತ್ತು. ಆದರೆ ಅದರ ಉಪಯೋಗವೇ ಆಗದ್ದರಿಂದ ಇನ್ನುಳಿವ ಗಿಡ ಬಳ್ಳಿಗಳಿಗೆ ಅದು ಕಾಲ್ತೊಡಕಾಗಬಾರದೆಂದು ಅದನ್ನೂ ಅದರ ಕಾಯಿಗಳನ್ನೂ ಕಿತ್ತು ಅಲ್ಲಿಯೇ ಬಿಸಾಡುತ್ತಿದ್ದರು. ಆ ಕಾಯಿಗಳು ಬಿದ್ದಲ್ಲಿಯೇ ಹಣ್ಣಾಗಿ, ಕಳಿತು, ಕೊಳೆತು ಅದರ ಬೀಜಗಳೆಲ್ಲ ಸುತ್ತೆಲ್ಲ ಹರಡಿ ಮಳೆಗಾಲ ಬಂದೊಡನೆ ಆ ಒಂದಕ್ಕೆ ಹತ್ತಾಗಿ ನೂರಾಗಿ— ಒಂದು ತಗಣೆಯನ್ನು ಒರೆದರೆ ಅದರ ಸ್ಥಳದಲ್ಲಿ ನೂರಾರು ತಗಣೆಗಳು ಹುಟ್ಟಿಕೊಳ್ಳುವಂತೆ—ಈ ಗಿಡಗಳು ಬೆಳೆದು ನಿಂತು ಫಲಭರಿತವಾಗುತ್ತಿದ್ದವು. ಆದರೂ ಜನ ಅತ್ತ ಕಣ್ಣೆತ್ತಿ ನೋಡುತ್ತಿದ್ದಿಲ್ಲ. ಅದೇ ಥಪ್ಪರ ಬದನೆಯ ಗಿಡ.

ಇತ್ತೀಚೆಗೆ ನನ್ನ ಪ್ರಕೃತಿ ಹದಗೆಟ್ಟಿತ್ತು. ಅದಕ್ಕಾಗಿ ಡಾಕ್ಟರರಿಂದ, ಔಷಧ, ಗುಳಿಗೆ, ಸೂಚಿಪ್ರಹಾರಗಳ ಉಪಚಾರ ನಡೆದೇ ಇತ್ತು. ದುಡಿಯದೆ ಗಳಿಸದೆ, ಹಿರಿಯರು ಬ್ಯಾಂಕಿನಲ್ಲಿಟ್ಟ ಠೇವಿನ ಮೇಲೆಯೇ ಪ್ರಪಂಚವನ್ನು ಸಾಗಿಸಿದ ಸುಖವಸ್ತು ಗೃಹಸ್ಥನ ಬ್ಯಾಂಕಿನಲ್ಲಿ ಕರಗುತ್ತ ಸಾಗಿದ್ದ ಠೇವಿನಂತೆ ನನ್ನಲ್ಲಿಯ ರಕ್ತಾಣುಗಳ ಪ್ರಮಾಣವು ಕೊರಗುತ್ತ ಸಾಗಿತ್ತು.

ಹೀಗಾಗುವದಕ್ಕೆ ಕಾರಣವೂ ಇತ್ತು. ಮೊದಲೇ ನಾನು ಬಯಲು ಸೀಮೆಯವ. ಮೇಲಾಗಿ ಇತರ ಯಾವ ಚಟಗಳಲ್ಲಿಯೂ ನನಗೆ ಓರಿಮೆ ಇಲ್ಲ ದಿದ್ದರೂ ಉಣ್ಣು ತಿನ್ನುವದರಲ್ಲಿ ನಮ್ಮೂರವರ ಕೈಯನ್ನು ಯಾರೂ ಹಿಡಿದವರಿಲ್ಲ. ದೇಶದಲ್ಲಿ ಸುಭಿಕ್ಷವಿರುವವರೆಗೆ ಇದೆಲ್ಲ ಸರಿಯಾಗಿಯೇ ಸಾಗಿತ್ತು. ಆದರೆ ಸೀದಾ ಪದ್ಧತಿಯು ಸುರುವಾದ ಕೂಡಲೆ ಮೊದಲನೆ ಆಘಾತವು ನನ್ನಂಥವರ ಮೇಲೆಯೇ ಆಯಿತು. ಹೊಟ್ಟೆ ತುಂಬುವಷ್ಟು ಕೂಳು ಇಲ್ಲ. ಅದರಲ್ಲಿಯೂ ಇದೀಗ ಪ್ರತಿ ಯೊಬ್ಬನೂ ಮುಂದಾಳು ಆಗಬೇಕೆಂಬ ಗಾಳಿ ನಮ್ಮ ನಾಡಿನಲ್ಲಿಯೇ ಬೀಸುತ್ತಿದ್ದಾಗ, ಅದರ ಮೋಹಕವಾದ ರೂಪವು ನನ್ನನ್ನೂ ಆಕರ್ಷಿಸಿತ್ತು, ಆದುದರಿಂದ ನಾನು ಮುಂದಾಳಾಗಬೇಕು, ಅದಾಗಬೇಕು, ಇದಾಗಬೇಕು, ಎಂದು ಶಕ್ತಿಮೀರಿ ದುಡಿಯುತ್ತ ಬಂದುದರಿಂದಲೂ, ಅಲ್ಪಾಹಾರ ದಿಂದಲೂ (ಮುಂದಾಳುಗಳಿಗೆ ಲಭ್ಯವಾಗುವ ಅಲ್ಪೋಪಹಾರವಲ್ಲ ಮತ್ತೆ!) ಕುಂದಿದ ನನ್ನ ಬಲವು ಇನ್ನಷ್ಟು ಕುಗ್ಗಿ, ದಿನದ ಹೊಟ್ಟೆಯ ಹೋರೆ ಮಾಡುವದು ಕೂಡ ಕಠಿಣವಾಗಿತ್ತು. ಅಂತೆಯೇ ನಾನು ಡಾಕ್ಟರರ ಮೊರೆ ಹೊಕ್ಕಿದ್ದೆ.

ಡಾಕ್ಟರರು ಔಷಧೋಪಚಾರ ಮಾಡುವದರ ಜೊತೆಗೆ ಬೇಗನೆ ನನಗೆ ಗುಣವಾಗಬೇಕೆಂದು, ವಿಶೇಷ ಶ್ರಮ ವಹಿಸಬಾರದೆಂದೂ ವಿಶ್ರಾಂತಿ ಪಡೆಯಬೇಕೆಂದೂ ಸಾಕಷ್ಟು ಹಣ್ಣುಹಂಪಲ, ಹಾಲು ತುಪ್ಪ ಸೇವಿಸಬೇಕೆಂದೂ ಸಲಹೆ ಕೊಟ್ಟಿದ್ದರು. ಇದ್ದರೆ ಇಂಥ ಡಾಕ್ಟರರಿರಬೇಕೆಂದು ಮನದಲ್ಲಿಯೇ ಅವರನ್ನು ಕೊಂಡಾಡಿದೆ. ಯಾಕೆಂದರೆ, "ದಿನಾಲು ಹಾಲು ಕುಡಿ, ಹಣ್ಣು ಹಂಪಲು ತಿನ್ನು, ರಾತ್ರಿ ಸಿನೇಮಾ ನಾಟಕ ನೋಡು," ಎಂದು ಡಾಕ್ಟರರೇ ಹೇಳಿದಾಗ, ಅದನ್ನು ಕೇಳಿದಾಗಲೇ ನನ್ನಲ್ಲಿ ಹೊಸ ರಕ್ತ ಹುಟ್ಟಿ ೮-೧೦ ಪೌಂಡು ತೂಕ ಹೆಚ್ಚಿದಂತೆ ನನಗೆ ಭಾಸವಾಯಿತು. ಡಾಕ್ಟರರಿಗೆ ನಮಸ್ಕಾರ ಮಾಡಿ ಹೊರಬೀಳಬೇಕೆನ್ನುವಾಗ ಡಾಕ್ಟರರು ಪೂರಕ ಸಲಹೆಯೊಂದನ್ನು ಮಾಡಿದರು. ದಿನಾಲು ಒಂದೆರಡು ಪೌಂಡಿನಷ್ಟು ಟೊಮೆಟೋ ಸೇವಿಸ ಬೇಕೆಂಬುದೇ ಆ ಸಲಹೆಯಾಗಿತ್ತು. ಆ ಬಗೆಗೆ ತಲೆಯಲ್ಲಿ ಯಾವುದೇ ವಿಚಾರವನ್ನು ತುಂಬಿಕೊಳ್ಳದೆ ಮನೆಗೆ ಬಂದೆ.

ಮನೆಯಲ್ಲಿ ನಮ್ಮ ಹುಡುಗ ಅಭ್ಯಾಸ ನಡೆಸಿದ್ದ. 'ಟೊಮ್ಯಾಟೋದ ಆತ್ಮವೃತ್ತ' ಎಂಬ ಪಾಠವನ್ನು ಅವನು ಓದುತ್ತಿದ್ದ. ನಾನು ದಿಂಬಿಗೆ ಒರಗಿಕೊಂಡು ಅದನ್ನು ಕೇಳುತ್ತಿದ್ದೆ. ಅದನ್ನು ಕೇಳುತ್ತ ಸಾಗಿದಂತೆ ನನ್ನ ತಲೆಯಲ್ಲಿ ನೂರೆಂಟು ವಿಚಾರಗಳ ಸಂತೆಗಾರಂಭವಾಯಿತು. ಅಡವಿಯಲ್ಲಿಯ ಅನಾಘ್ರಾಣಿತ ಕುಸುಮ, ನಮ್ಮೂರಲ್ಲಿ ಹುಟ್ಟಿ ಬೆಳೆದು ನಿರುಪಯೋಗಿಯಾಗಿ ಉದುರಿ ಹೋಗುತ್ತಿದ್ದ ಆ ಭಪ್ಪರ ಬದನೆಗೆ ನಮ್ಮ ಡಾಕ್ಟರರಂಥ ತಜ್ಞರೂ ಅನುಭವಿಕರೂ 'ಟೊಮ್ಯಾಟೊ' ಎಂಬ ಹೆಸರಿನಲ್ಲಿ ಕೊಟ್ಟ ಪ್ರಾಧಾನ್ಯದ ಜೊತೆಗೆ ನಮ್ಮ ಹುಡುಗನು ಓದಿದ 'ಟೊಮ್ಯಾಟೊದ ಆತ್ಮವೃತ್ತ'ದ ಪಾಠದಿಂದ, ನನ್ನ ತಲೆಯಲ್ಲಿ, ದೆಹಲಿಯಲ್ಲಿಯೂ ಆಸಾಮುದಲ್ಲಿಯೂ ನುಗ್ಗುತ್ತಿರುವ ನಿರಾಶ್ರಿತರ ತಂಡದಂತೆ; ಬಟ್ಟೆ ಬರೆಗಳ ಕಳ್ಳಪೇಟೆ ಮಾಡಿ ಜೀವನ ಸಾಗಿಸುವದಕ್ಕಾಗಿ ಬಟ್ಟೆಯಂಗಡಿಗಳ ಮುಂದೆ ಗುಂಪುಗಟ್ಟಿಕೊಂಡು ಗಲಾಟೆ ಮಾಡುವ ಹೆಣ್ಣು ಗಂಡುಗಳಂತೆ; ದೊರೆಯಬಹುದಾದ ಸಿನೇಮಾಗಳ ಎಲ್ಲ ಟಿಕೆಟ್ಟುಗಳನ್ನು ಕೊಂಡುಕೊಂಡು ಅವನ್ನೇ ಹೆಚ್ಚಿನ ಬೆಲೆಗೆ ಮಾರಾಟ ಮಾಡುವ ಪುಂಡ ಪೋಕರಿಗಳಂತೆ; ೩-೪ ವಾರಗಳಿಂದ ಸೀದಾ ಅಂಗಡಿಗಳಲ್ಲಿ ಜೋಳ, ಸಕ್ಕರೆ, ಸೀಮೆ ಎಣ್ಣೆ ದೊರೆಯದಿದ್ದಾಗ ಆ ಎಲ್ಲಾ ಸಾಮುಗ್ರಿಗಳು ಆ ಸೀದಾ ಅಂಗಡಿಗಳಲ್ಲಿ ಬಂದಿರುವವೆಂಬ ಸುದ್ದಿ ಕೇಳಿ ಆ ಅಂಗಡಿಗಳಿಗೆ ಓಡಿಹೋಗಿ ಮುತ್ತಿಗೆ ಹಾಕುವ ನಾಗರಿಕರಂತೆ; ಈ ವಿಚಾರಗಳು ನನ್ನ ತಲೆಯಲ್ಲಿ ಗಲಭೆ ಎಬ್ಬಿಸಿದವು.



ಹಳ್ಳಿಯ ತಿಪ್ಪೆಯಲ್ಲಿ ಅನಾಹೂತವಾಗಿ ಹುಟ್ಟಿ ಬೆಳೆಯುತ್ತಿದ್ದ ಟೊಮ್ಯಾಟೊ (ತಿಳಿಗನ್ನಡದಲ್ಲಿ ಹೇಳಬೇಕೆಂದರೆ ಛಪ್ಪರ ಬದನೇಕಾಯಿ) ತಾನು ಪಟ್ಟ ಕಷ್ಟದಿಂದ, ಮಾಡಿದ ತ್ಯಾಗದಿಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ, ಕಷ್ಟ ನಷ್ಟಗಳನ್ನನುಭವಿಸಿದ ಸ್ವಾತಂತ್ರ್ಯ ಯೋಧರಿಗೆ ಸ್ವಾತಂತ್ರ್ಯಾನಂತರದಲ್ಲಿ ಕೊಡಮಾಡಿದ ಮಾಸಾಶನವನ್ನು ತಾನು ಯಾವುದೇ ಆಂದೋಲನದಲ್ಲಿ ಭಾಗವಹಿಸಿರದಿದ್ದರೂ ಏನಕೇನ ಪ್ರಕಾರೇಣ, ತಾನೂ ಮಾಸಾಶನವನ್ನು ಇತರ ಸೌಲಭ್ಯಗಳನ್ನು ಗಿಟ್ಟಿಸಿ ದುಂಡಗಾದಂತೆ, ಈ ಟೊಮ್ಯಾಟೊ ಕೊಡದಷ್ಟು ಪುಷ್ಟವಾಗಿ ಬೆಳೆದು, ತನ್ನ ಗಾತ್ರವನ್ನು ಬೆಳೆಸಿಕೊಂಡು ಅಚ್ಚ ಕೆಂಬಣ್ಣದಿಂದ ಕಂಗೊಳಿಸುವದನ್ನು ಕಂಡು ಜನರು ಮೋಹಿಸಿರಬೇಕು. ಕೂಳಿನ ಅಭಾವದಿಂದಲೋ ಚಿಕಿತ್ಸಾ ಬುದ್ಧಿಯಿಂದಲೋ ಸಸ್ಯಶಾಸ್ತ್ರಜ್ಞರೂ ಆಹಾರ ಶಾಸ್ತ್ರಜ್ಞರೂ ಜಿಜ್ಞಾಸು ಬುದ್ಧಿಯಿಂದ ಅದರ ಗುಣ ಧರ್ಮವನ್ನು ಪರಿಕಿಸಿ, ಈ ದಿನಗಳಲ್ಲಿ ಅದೂ ಒಂದು ಪೌಷ್ಟಿಕ ಆಹಾರದ ಸಾಮುಗ್ರಿ ಎಂದು ಪರಿಗಣಿಸಿರಬೇಕು. ಈ ವಿಷಯುವಾಗಿ ಸುದೀರ್ಘ ವಿಚಾರ ಮಾಡಿದಾಗ ಈ ಟೊಮ್ಯಾಟೊ ಎಂಬ ನಾಮಾಭಿದಾನದಿಂದ ಮೆರೆಯುತ್ತಿರುವ ಈ ಛಪ್ಪರ ಬದನೆಕಾಯಿ ಮತ್ತು ಇಂದಿನ ಮುಂದಾಳತ್ವ ಇವುಗಳ ಸಾಮ್ಯವಿದೆಯೆಂದು ನನಗೆ ಅನಿಸತೊಡಗಿತು. ಈ ಅನಿಸಿಕೆಯ ಬೆಳಕಿನಲ್ಲಿ ನಾನೂ ನನ್ನ ಗತೇತಿಹಾಸದ ಸಿಂಹಾವಲೋಕನ ಮಾಡಿದಾಗ ನನಗೆ ಹೊಳೆದದ್ದು ಹೀಗಿದೆ.

ಟೊಮ್ಯಾಟೋದಂತೆ ನನ್ನ ದೈವದ ಬಾಗಿಲೂ ತೆರೆದಿತ್ತು. ಗ್ರಾಮೋದ್ಧಾರವಾಗಬೇಕೆಂದು ಗಾಂಧೀಜಿ ಅವರು ಪದೇ ಪದೇ ಹೇಳುತ್ತಿದ್ದರು. ಎಲ್ಲೆಲ್ಲಿಯೂ ಅದೇ ಮಾತೇ ಮಾತು. ತಕ್ಕ ಮಟ್ಟಿಗೆ ಓದು ಬರಹ ಕಲಿತಿದ್ದೆ. ನನ್ನ ಬುದ್ಧಿ ಅಷ್ಟಕ್ಕಷ್ಟೇ ಇತ್ತೋ ಅಥವಾ ನಾನು ಹೆಚ್ಚು ಕಲಿತರೆ ತಮ್ಮ ಕ್ರಮಾಂಕವು ಹಿಂದೆ ಬೀಳುವ ದೆಂದೋ ಬುದ್ಧಿಜೀವಿಗಳು ನನ್ನ ವಿಷಯವಾಗಿ ಶೋಷಣೆಯ ಧೋರಣೆಯನ್ನು ವಹಿಸಿದ್ದ-ರಿಂದಲೋ ನಾನು ನನ್ನ ವಿದ್ಯಾಭ್ಯಾಸವನ್ನು ಅಷ್ಟಕ್ಕೇ ಮೊಟಕುಗೊಳಿಸಿಬಿಟ್ಟೆ. ಅದು ನನ್ನ ತ್ಯಾಗದ ಮೊದಲ ಘಟ್ಟ. ಅಂದಿನಿಂದ ನಾನು ತ್ಯಾಗವೃತ್ತಿಯನ್ನಾರಂಭಿಸಿದೆ. ಹಳ್ಳಿಯ ಜೀವನ ಮಾಡಲು ಬೇರೆ ಉದ್ಯೋಗವಿದ್ದಿಲ್ಲ. ಶಿಕ್ಷಣವೂ ಅಷ್ಟಕ್ಕಷ್ಟೇ. ಆದರೂ ಮುಂದಾಳು ಆಗ ಬೇಕೆಂಬ ನನ್ನ ಅಭಿಲಾಷೆ ದಿನವೊಂದಕ್ಕೆ ಹೆಚ್ಚುತ್ತಲೇ ಸಾಗಿತು. ಅದಕ್ಕಾಗಿ ಕಾಂಗ್ರೆಸ್ ಸೇರಿದೆ. ಗ್ರುಪ್ ಕಾಂಗ್ರೆಸ್ ಕಮಿಟಿ ಸ್ಥಾಪಿ-ಸಿದೆ. ಅದರ ಅಧ್ಯಕ್ಷನಾದೆ. ಯಾವಾಗಾದರೊಮ್ಮೆ ಮಾತನಾಡುವ ಪ್ರಸಂಗ ಬಂದಾಗ ನಮ್ಮೂರ ಶಾಲೆಯ ಮಾಸ್ತರರಿಂದ ಭಾಷಣವನ್ನು ಬರೆ-ಯಿಸಿಕೊಂಡು ಓದುತ್ತಿದ್ದೆ. ಆಟಕ್ಕೆ ತಕ್ಕ ವೇಷ ವಂತೂ ಇದ್ದೇ ಇತ್ತು. ಜಾತಿ ವೈಶಿಷ್ಟ್ಯದಿಂದ ಗ್ರುಪ್ ಕಾಂಗ್ರೆಸ್ ಕಮಿಟಿಯಿಂದ ಜಿಲ್ಲಾ ಮತ್ತು ಪ್ರಾಂತಿಕ ಕಮಿಟಿಗಳಲ್ಲೂ ಪ್ರವೇಶ ಪಡೆದೆ. ಈ ನನ್ನ ಏರಿಕೆಯಿಂದ ನನ್ನ ಮಹತ್ವಾಕಾಂಕ್ಷೆಯು ಮತ್ತಷ್ಟು ಹೆಚ್ಚುತ್ತ ಸಾಗಿತ್ತು. ಲೋಕ ಸಭೆ ಶಾಸನ ಸಭೆಗಳ ಆಯ್ಕೆಗಳು - ಬಂದವು. ನಮ್ಮ ಭಾಗದ ಹಿರಿತನ ನನ್ನ ಪಾಲಿಗೇ ಬಂದಿತು. ಎಲ್ಲದಕ್ಕೂ ಎಲ್ಲರೂ ನನ್ನನ್ನೇ ಕೇಳುವವರು. ಅದೇ ನನ್ನ ಮುಂದಾಳುತನದ ಪ್ರಾರಂಭ.

*

ಅನೇಕ ಆಂದೋಲನಗಳು ಪ್ರಾರಂಭವಾದವು. ನನ್ನ ಸಹಯೋಗಿಗಳು ನನ್ನ ನೆರವನ್ನು ಕೋರಿದರು. ಈ ಆಂದೋಲನದಲ್ಲಿ ನಾನು ಕಂಠ ಮಟ ಹೊಕ್ಕು ಕೆಲಸ ಮಾಡಿದೆ. ನನ್ನ ಬಂಧನವಾಯ್ತು. ಸೆರೆಮನೆಗೆ ಹೋದೆ. ಆಂದೋಲನ ನಿಂತಿತು. ಸೆರೆಮನೆಯಿಂದ ಹೊರ ಬಂದೆ. ಸಾವಿರಾರು ಜನರು ನನ್ನನ್ನು ಮೆರವಣಿಗೆಯಲ್ಲಿ ಕರೆದೊಯ್ದು ಹೂ ಮಾಲೆಗಳ ಸುರಿಮಳೆ ಮಾಡಿದರು. ಅಂದಿನಿಂದ ನಾನು ನಮ್ಮ ನಾಡಿನ ಏಕಮೇವ ಮುಖಂಡನೆಂದು ಜನತೆ ನನ್ನನ್ನು ಪರಿಗ್ರಹಿಸಿತು. ಲೋಕ ಕಲ್ಯಾಣಕ್ಕಾಗಿ ನಾನು ಇಷ್ಟೊಂದು ತ್ಯಾಗ ಮಾಡಿ ಕಷ್ಟ ನಷ್ಟಗಳನ್ನು ಅನುಭವಿಸಿದ್ದರಿಂದ ಅದರ ಸವಿ ಫಲವನ್ನು ಉಪಭೋಗಿಸುವ ಹಕ್ಕು ನನಗೆ ಪ್ರಾಪ್ತವಾಗಿತ್ತು. ಅಷ್ಟರಲ್ಲಿ ರಾಜಕಾರಣದ ತಂತ್ರಗಳೆಲ್ಲ ನನ್ನ ಕರಗತವಾಗಿದ್ದವು. ಆ ತಂತ್ರ ಗಳ ಬಲದಿಂದ ಅಧ್ಯಕ್ಷನಾದೆ. ಆಯ್ಕೆಗಳು ಬಂದವು. ಹುರಿಯಾಳಾಗಿ ಸ್ಪರ್ಧಿಸಿದೆ. ಪ್ರಚಂಡ ಬಹುಮತದಿಂದ ಆರಿಸಿ ಬಂದೆ.

ಕಾಯಿದೆ, ಕಾನೂನು, ವಿಧಾನ ಸಭೆ, ವಿಧಾನ ಮಂಡಳ ಇವುಗಳ ಜ್ಞಾನವಿಲ್ಲದಿದ್ದರೂ ವಿಶೇಷ ಶಿಕ್ಷಣ ಪಡೆದಿರದಿದ್ದರೂ ಇಷ್ಟೊಂದು ಉನ್ನತ ಮಟ್ಟಕ್ಕೆ ನಾನು ಏರಿದುದನ್ನು ಸಹಿಸಲಾರದೆ ಕೆಲವರು ನನ್ನ ಅಪರೋಕ್ಷದಲ್ಲಿ ಕುಚೇಷ್ಟೆ ಮಾಡಲಾರಂಭಿಸಿದರು. ನನ್ನ ತಲೆ ತಿರುಗಿತು. ಆದರೆ ಏನು ಉತ್ತರ ಕೊಡಬೇಕೆಂದು ತಿಳಿ ಯದ್ದರಿಂದ ಮೌನ ತಾಳಿದೆ. ಈ ಜನರಿಗೆ ಬುದ್ಧಿಗಲಿಸಬೇಕೆಂದು ಮನದಲ್ಲಿಯೇ ನಿರ್ಧರಿ ಸಿದೆ. ಮುಂದಾಳಾಗುವದು ಯಾರೊಬ್ಬರ ಕಾಯ್ದಿಟ್ಟ ಹಕ್ಕಲ್ಲವೆಂದು ಯಾರೋ ಅಂದ ದ್ದನ್ನು ಕೇಳಿದ್ದೆ. ಅದನ್ನೇ ಸೂತ್ರವನ್ನಾಗಿಟ್ಟು ಕೊಂಡು, ನನ್ನ ಪರಿಚಯದ ಒಬ್ಬ ನುರಿತ ಲೇಖಕರ ಕಡೆಗೆ ಹೋಗಿ ನನ್ನ ವಿಷಯವಾಗಿ ಪ್ರಚಾರ ಮಾಡಬೇಕೆಂದೂ ನನ್ನ ಹೆಸರಿನಲ್ಲಿ ಒಂದು ಲೇಖನ ಬರೆಯಬೇಕೆಂದೂ ಕೇಳಿಕೊಂಡೆ.

ಯಾವುದೊಂದು ಸಂಘ-ಸಂಸ್ಥೆಯ ಅಧ್ಯಕ್ಷ ನಾಗಲಿಕ್ಕೆ ಯೋಗ್ಯತೆಯೇನೂ ಬೇಕಿಲ್ಲ. ಹಾಗೆ ಹೇಳುವವರು ಶೋಷಕ ವೃತ್ತಿಯ ಬುದ್ಧಿಜೀವಿ ಗಳು ಮಾತ್ರ. ಕೆಲಸ ಮಾಡುವ ಹುರುಪು ಇರಬೇಕು. ಹುಮ್ಮಸ್ಸು ಇರಬೇಕು. ಇವುಗಳ ಜೊತೆಗೆ ಜನಬೆಂಬಲವಿದ್ದರೆ ಸಾಕು. ಅವರೇ ಆ ಅಧಿಕಾರ ಸ್ಥಾನಗಳಿಗೆ ಅರ್ಹರು ಎಂಬ ಪ್ರಚಾರಕ್ಕಾರಂಭವಾಯ್ತು. ಅಧಿಕಾರ ಪದವಿ ನಮಗಿಂತ ದೊಡ್ಡದೆಂದು ನಾವೇಕೆ ಭಾವಿಸ



ಬೇಕು? ಈ ಸ್ಥಾನ ಈ ಪದವಿ ನಿಜವಾಗಿಯೂ ಮೇಲ್ಮಟ್ಟದಲ್ಲಿದ್ದರೆ, ಅದನ್ನು ಮೇಲ್ಮಟ್ಟದಲ್ಲಿಟ್ಟೇ ಅಲಂಕರಿಸಲು ಸಾಧ್ಯವಿಲ್ಲದಿದ್ದರೆ ಅದನ್ನು ನಾವಿದ್ದ ಮಟ್ಟಕ್ಕೆ ಕೆಳಕ್ಕೆ ಜಗ್ಗಿ ಅದನ್ನು ಅಲಂಕರಿಸಿದರೆ, ಅದಕ್ಕೆ ಜನರ ಬೆಂಬಲ ವಿದ್ದರೆ, ತಪ್ಪೇನು? ಎಂಬ ಪ್ರಚಂಡ ಪ್ರಚಾರವನ್ನಾರಂಭಿಸಿದೆ. ಎದುರಾಳಿಗಳು ನನ್ನ ಈ ಪ್ರಚಂಡ ಪ್ರಚಾರಕ್ಕೆ ಬೆದರಿ ಬೆಚ್ಚಿಬಿದ್ದು ನಾನು ಹೊಕ್ಕ ಸಂಸ್ಥೆಗಳ ಸನಿಯಕ್ಕೆ ಬರದಂತಾದರು. ಅಂದಿನಿಂದ ನಾನೇ ಹಿರಿಯನಾದೆ. ನವ ನಾಡಿನ ಹಣೇಬರಹ ಬರೆಯುವದೂ ನನ್ನ ಕೈಯಲ್ಲಿದೆ ಎಂದು ನಿಶ್ಚಯಿಸಿದೆ. ನನ್ನ ಮಹತ್ವಾಕಾಂಕ್ಷೆ ಇನ್ನಷ್ಟು ಬೆಳೆಯಿತು.

ದೊಡ್ಡವನಾದೆ, ಮುಖಂಡನಾದೆ, ಅಧ್ಯಕ್ಷನಾದೆ. ಎಲ್ಲವೂ ಆದೆ. ಹೀಗಾಗುವಷ್ಟರಲ್ಲಿ ನನ್ನಲ್ಲಿಂದ ಬಂಡವಾಳ ಪೂರಾ ಕರಗಿ ಮಾಯವಾಗಿ ನೀಗಲಾರದ ಸಾಲದ ಹೊರೆ ಹೊತ್ತುಕೊಂಡಿದ್ದೆ. ಈ ಅಧಿಕಾರ ಸ್ಥಾನಬಲದಿಂದ ನನ್ನ ಜೀವನ ಮಟ್ಟ ಏರಿ ನಿಂತಿತ್ತು. ಆದರೆ ಜೀವನ ಸಾಗಿಸುವದು ಕಠಿಣವಾಗತೊಡಗಿತ್ತು. ಹಣವನ್ನು ನ್ಯಾಯ ಮಾರ್ಗದಿಂದ ಗಳಿಸುವ ಯೋಗ್ಯತೆಯಾಗಲಿ, ಬುದ್ಧಿಯಾಗಲಿ ಬೇಕಲ್ಲ? ಅವುಗಳನ್ನಂತೂ ಮೊದಲೇ ತ್ಯಾಗ ಮಾಡಿಬಿಟ್ಟಿದ್ದೆ. ನನ್ನ ಜೀವನ ಸಾಗಿಸುವದೇ ಕಠಿಣವಾಗಿ ಕಾಣಹತ್ತಿತು.

ಕೊನೆಗೆ ಒಂದು ಉಪಾಯ ಹೊಳೆಯಿತು.

ಹೇಗೂ ಕೈಯಲ್ಲಿ ಅಧಿಕಾರ ಬಂದಿತ್ತು. ಒಂದು ಪ್ರಸಂಗದಲ್ಲಿ ಅದರ ಉಪಯೋಗವನ್ನು ಸೂಕ್ಷ್ಮವಾಗಿ ಮಾಡಿನೋಡಿದೆ. ಅದು ಫಲಕಾರಿಯಾಯಿತು. ನನ್ನಿಂದ ಉಪಕಾರ ಹೊಂದಿದವರು ಕೈಬಿಚ್ಚಿ ನನಗೆ ಸಹಾಯ ಮಾಡತೊಡಗಿದರು. ನಮ್ಮ ಪಾರ್ಟಿ ಫಂಡಿನ ಹೆಸರಿನಲ್ಲಿ ಅಂಥವರಿಂದ ಹಣ ವಸೂಲು ಮಾಡತೊಡಗಿದೆ. ದಾರಿ ಕಾಣದ ನನಗೆ ಬೆಳಕು ಕಂಡಂತಾಗಿತ್ತು. ಅಲ್ಪಾವಧಿಯಲ್ಲಿ ನನ್ನ ಕಷ್ಟ ಪರಿಹಾರವಾಗಿ ಮಕ್ಕಳು ಮೊಮ್ಮಕ್ಕಳು ಸುಖವಾಗಿ ಜೀವನ ಸಾಗಿಸುವದಕ್ಕೆ ಸಾಕಾಗುವಷ್ಟು ಸಂಪತ್ತಿನ ಮಾಲೀಕ ನಾನಾದೆ. ಅನೇಕರು ನನ್ನ ಮೇಲೆ ಲಂಚ, ಭ್ರಷ್ಟಾಚಾರಗಳ ಆಪಾದನೆ ಮಾಡತೊಡಗಿದರು. ನನ್ನ ಚಾರಿತ್ರ್ಯವಧೆ ಮಾಡತೊಡಗಿದರು. ನನ್ನ ಗದ್ದುಗೆ ಹೊಯ್ದಾಡುವ ಹಾಗೆ ಕಂಡಿತು.

ದೇಶದಲ್ಲಿ ಅನೇಕ ಪಕ್ಷಗಳು ದಿನವೊಂದಕ್ಕೆ ನಾಯಿ ಕೊಡೆಗಳಂತೆ ಹುಟ್ಟುತ್ತಿದ್ದುದನ್ನು ನಾನು ಕಂಡಿದ್ದೆ. ಈ ಪಕ್ಷಗಳು ಹುಟ್ಟುವದಕ್ಕೆ ತತ್ವಗಳನ್ನು ಮುಂದೆ ಮಾಡುವದು; ದೀನ, ದಲಿತ, ದರಿದ್ರರ ಉದ್ಧಾರದ ದೊಡ್ಡ ದೊಡ್ಡ ಮಾತುಗಳನ್ನು ಹೇಳುವದು; ಇವು ಆ ಪಕ್ಷಗಳ ಸಂಸ್ಥಾಪಕರ ಹೇಳಿಕೆಗಳಿದ್ದುದನ್ನು ನಾನು ತಿಳಿದುಕೊಂಡಿದ್ದೆ– ಆದರೆ ತಾವು ಮೊದಲು ಇದ್ದ ಸಂಸ್ಥೆಗಳಲ್ಲಿ ತಮಗೆ ಧುರೀಣತ್ವ ದೊರೆಯುದುದಕ್ಕೆ ಅಥವಾ ಅಲ್ಲಿ ತಮ್ಮ ಕೈಚಳಕ ಚಿನ್ನಾಟಗಳನ್ನಾಡಲಿಕ್ಕೆ ಆಸ್ಪದ ದೊರೆಯದುದಕ್ಕೆ ಅಸಂತುಷ್ಟರಾಗಿ ತಮ್ಮ ಹಿರಿತನದಲ್ಲಿಯೇ ಪಕ್ಷವನ್ನು ಕಟ್ಟುವದನ್ನೂ ನಾನು ಅನುಭವದಿಂದ ತಿಳಿದುಕೊಂಡಿದ್ದೆ.

ಅಂಥ ಪ್ರಸಂಗವೇ ಬಂದರೆ, ಯಾವ ಬಲದಿಂದ ನೀನು ಅಲ್ಲಿರುವಿ? ಎಂದು ನನ್ನ ಬೆಂಬಲಿಗರೇ ನನಗೆ ಸವಾಲು ಹಾಕಿದರೆ ಅವರಿಗೇನು ಉತ್ತರ ಕೊಡಲಿ? ಎಂದು ವಿಚಾರ ಮಾಡುತ್ತಿದ್ದಾಗ ನನಗೊಂದು ಯುಕ್ತಿ ಹೊಳೆಯಿತು. ಬೇರೆ ಸಂಸ್ಥೆಗಳಲ್ಲಿ ನಾನು ಅಧ್ಯಕ್ಷ ಪದದಲ್ಲಿದ್ದರೂ ಪ್ರಜಾಪ್ರಭುತ್ವದ, ಸಂಖ್ಯಾಬಲದ ಈಗಿನ ದಿನಗಳಲ್ಲಿ ಆ ಸಂಸ್ಥೆಗಳು ನನ್ನವು ಹೇಗೆ ಆದಾವು? ಎಷ್ಟೇ ಅಂದರೂ ಅವು ಬಾಡಿಗೆಯ ಮನೆಗಳಿದ್ದಂತೆ. ಆದುದರಿಂದ ಕೈ ನಡೆಯುವಾಗಲೇ ನಾನೂ ನನ್ನದೇ ಆದ ಸ್ವತಂತ್ರ ಪಕ್ಷವನ್ನೇಕೆ ಸ್ಥಾಪಿಸಬಾರದು? ಎಂಬ ವಿಚಾರ ಮೂಡಿತು. ಆ ಬಗೆಗೆ ಸುದೀರ್ಘ ವಿಚಾರ ಮಾಡಿದ ನಂತರ ಸ್ವತಂತ್ರ ಪಕ್ಷ ಸ್ಥಾಪಿಸುವ ದೃಢ ಸಿರ್ಧಾರ ಮಾಡಿದೆ. ಮತ್ತು ಈ ನನ್ನ ಹೊಸ ಪಕ್ಷದ ಧ್ಯೇಯ ಧೋರಣೆಗಳ ಕರಡನ್ನು ನನ್ನ ಮಿತ್ರರೊಡನೆ ವಿಚಾರಿಸಿ ಗೊತ್ತು ಮಾಡಿದೆ. ಈ ನನ್ನ ಹೊಸ ಪಕ್ಷದ ಕಾರ್ಯಕ್ರಮ, ರೂಪರೇಷೆಗಳು ಹೀಗಿವೆ:

೧. ಯಾರಿಗಿಂತಲೂ ಯಾರೂ ಸಣ್ಣವರಲ್ಲ. ಯಾರೂ ದೊಡ್ಡವರಲ್ಲ. ಯಾರಿಗೂ ಯಾರೂ ಆಜ್ಞೆ ಕೊಡುವಹಾಗಿಲ್ಲ. ಯಾರ ಮಾತನ್ನೂ ಯಾರೂ ಕೇಳಬೇಕಾಗಿಲ್ಲ.

೨. ತನ್ನ ಮನ ಬಂದಂತೆ ನಡೆಯಲು ಪ್ರತಿಯೊಬ್ಬನಿಗೆ ಸ್ವಾತಂತ್ರ್ಯವಿದೆ.



೩. ಶಾಸನಸಭೆ, ಲೋಕಸಭೆಗಳಂತೆ ಶಿಕ್ಷಣ ಸಂಸ್ಥೆಗಳು ಅಂದರೆ ಶಾಲೆ, ಕಾಲೇಜು, ವಿಶ್ವ ವಿದ್ಯಾಲಯಗಳಿಗೆ ಯಾರು ಬೇಕಾದವರು ಜನತಾ ಬಹುಮತದ ಬೆಂಬಲದಿಂದ, ಮುಖ್ಯಾಧ್ಯಾಪಕ ರಾಗಲಿ, ಪ್ರಾಧ್ಯಾಪಕರಾಗಲಿ, ಪ್ರಾಚಾರ್ಯ ರಾಗಲಿ, ಕುಲಪತಿಗಳಾಗಲಿ, ಕುಲಾಧಿಪತಿಗಳಾ ಗಲಿ ಆಗಬಹುದು. ಅದಕ್ಕೆ ಶೈಕ್ಷಣಿಕ ಅರ್ಹತೆ ಯೇನೂ ಬೇಕಾಗಿಲ್ಲ.

೪. ಶೈಕ್ಷಣಿಕ ಸಂಸ್ಥೆಗಳಲ್ಲಿ ಈಗ ಅನುಸರಿಸ ಲಾಗುತ್ತಿರುವ ಪರೀಕ್ಷಾ ಪದ್ಧತಿಯು ದೋಷ ಪೂರ್ಣವಾಗಿದ್ದು ಅದರಿಂದ ಭ್ರಷ್ಟಾಚಾರ, ನಕಲು ಮಾಡುವದು ಮುಂತಾದ ದುರ್ವ್ಯಾ ಪಾರಗಳಿಗೆ ಆಸ್ಪದವುಂಟಾಗುವದು. ಆದುದರಿಂದ ಪರೀಕ್ಷೆಗಳ ಪದ್ಧತಿಯನ್ನು ತತ್‌ಕ್ಷಣ ನಿಲ್ಲಿಸಿ ಗೊತ್ತುಪಡಿಸಿದ ಅವಧಿಯ ವರೆಗೆ ಆ ಸಂಸ್ಥೆ ಗಳಲ್ಲಿ ಅಭ್ಯರ್ಥಿಗಳಾದವರಿಗೆ ಆ ಅವಧಿಯ ಕೊನೆಗೆ ಪದವಿಗಳನ್ನು ಕೊಡುವಂತೆ ಶಾಸನಗಳ ತಿದ್ದುಪಡಿ ಮಾಡಲಾಗುವದು.

೫. ಉಚ್ಚ ಶಿಕ್ಷಣ ಪಡೆದರೆ ಅಂಥ ಉಚ್ಚ ಶಿಕ್ಷಣ ಪಡೆಯುವ ಅಭ್ಯರ್ಥಿಗಳು ಇತರರ ಶೋಷಣೆ ಮಾಡುವ ಸಾಧ್ಯತೆ ಇರುವದರಿಂದ ದೇಶದಲ್ಲಿಯ ಎಲ್ಲ ಉಚ್ಚ ಶಿಕ್ಷಣ ಸಂಸ್ಥೆಗಳನ್ನು ಮುಚ್ಚಿಬಿಡುವದು.

೬. ಈಗ ಧಾತುಗಳ ಬೆಲೆ ವಿಪರೀತವಾಗಿ ಏರಿರುವದರಿಂದ ಇನ್ನು ಮುಂದೆ ಧಾತುಗಳನ್ನು ನಾಣ್ಯ ಮಾಡಲಿಕ್ಕೆ ಉಪಯೋಗಿಸದೆ ಪ್ರತಿ ಯೊಂದು ನಾಣ್ಯದ ಬದಲಿಗೆ ಕಾಗದದ ನೋಟು ಗಳನ್ನಾಗಲಿ, ಬಟ್ಟೆಯ ನೋಟುಗಳನ್ನಾಗಲಿ ಮುದ್ರಿಸಿ ಅವುಗಳನ್ನು ಚಲಾವಣೆಯಲ್ಲಿ ತರ ಲಾಗುವದು.

೭. ಕೇವಲ ಕೆಲವೇ ಜನ ಮುಂದುವರಿದ ವರು ಶಿಕ್ಷಣ ಸಂಸ್ಥೆಗಳ ಲಾಭ ಪಡೆಯುತ್ತಿರು ವದರಿಂದ ಶಿಕ್ಷಣ ಪ್ರತಿಬಂಧಕ ಯೋಜನೆಯನ್ನು ಕಾರ್ಯರೂಪದಲ್ಲಿ ತರಲಾಗುವದು.

೮. ಅಪ್ಪಿ ತಪ್ಪಿ ಯಾರಾದರೂ ಸುಶಿಕ್ಷಿತರಾ ದರೆ ಅಂಥವರ ನಾಗರಿಕತ್ವದ ಹಕ್ಕನ್ನು ರದ್ದು-ಗೊಳಿಸಲಾಗುವದು.

೯. ಮದ್ಯಪಾನ ಪ್ರತಿಬಂಧದ ಯೋಜನೆಯು ನಿಷ್ಫಲವಾದುದನ್ನು ಗಮನಿಸಿ ಸರಕಾರವು ಆ ಯೋಜನೆಯನ್ನು ಬಿಟ್ಟುಕೊಟ್ಟಂತೆ, ಪೋಲೀಸ್ ಸಂಸ್ಥೆಗಳಿದ್ದರೂ ಕಳುವು, ಕೊಲೆ, ದರೋಡೆ ಮುಂತಾದ ಅನಾಚಾರಗಳು ಹಾಗೇ ನಡೆಯುತ್ತಿ ರುವದರಿಂದ ಸರಕಾರೀ ಬೊಕ್ಕಸಕ್ಕೆ ಉಳಿತಾಯ ಮಾಡುವದಕ್ಕಾಗಿ ಪೋಲೀಸ ಸಂಸ್ಥೆಗಳನ್ನು ವಿಸರ್ಜಿಸಲಾಗುವದು.

೧೦. ಅಪರಾಧ ಮಾಡಿದವನನ್ನು ಶಿಕ್ಷಿಸದೆ ಅಪರಾಧ ಮಾಡಲಿಕ್ಕೆ ಕಾರಣರಾದವರನ್ನು ಉಗ್ರ ಶಿಕ್ಷೆಗೆ ಗುರಿಪಡಿಸಲಾಗುವದು.

೧೧. ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ ಕ್ಯಾಪಿಟೇಶನ್ ಶುಲ್ಕದ ಹಾವಳಿ ವಿಶೇಷವಾಗಿದ್ದು ಆ ಶುಲ್ಕದ ಹೆಸರಿನಲ್ಲಿ ಆ ಸಂಸ್ಥೆಗಳ ಸಂಚಾಲಕ ವರ್ಗದವರೂ ಸರಕಾರಿ, ಅರ್ಧ ಸರಕಾರಿ ಮತ್ತು ಸಹ ಕಾರೀ ಹಾಗೂ ಖಾಸಗಿ ಸಂಸ್ಥೆಗಳ ಸಂಚಾಲ ಕರೂ ನೌಕರಿಗಳನ್ನು ಕೊಡುವಾಗ ಅಭ್ಯರ್ಥಿ ಗಳಿಂದ ಸಾವಿರಗಟ್ಲೆ ಹಣವನ್ನು ನುಂಗುತ್ತಿರುವ ದರಿಂದ ಸರಕಾರಗಳಿಗೆ ಬಹಳಷ್ಟು ಹಾನಿಯಾ ಗುವದರಿಂದ ಇಂಥ ಸ್ಥಳಗಳನ್ನು ತುಂಬಲಿಕ್ಕೆ ಜಾಹೀರ ಲಿಲಾವು ಪದ್ಧತಿಯನ್ನು ಜಾರಿಯಲ್ಲಿ ತರಲಾಗುವದು.

ಈ ಧ್ಯೇಯ ಧೋರಣೆಗಳನ್ನು ಮುಂದಿಟ್ಟು ಕೊಂಡು ಸ್ಥಾಪಿಸಬೇಕೆಂದಿರುವ ನನ್ನ ಪಕ್ಷದ ಕಾರ್ಯಕರ್ತರಿಗೆ ಯೋಗ್ಯ ಸಂಬಳವನ್ನು ಕೊಡ ಲಾಗುವದು. ಈ ನನ್ನ ಹೊಸ ಪಕ್ಷಕ್ಕೆ ಸೇರ ಬಯಸುವವರು ನನ್ನ ಈ ಧ್ಯೇಯ ಧೋರಣೆ ಗಳ ವಿಚಾರ ಮಾಡಲಿ. ಅಲ್ಲಿಯ ವರೆಗೆ ನನಗೆ ಸ್ಫೂರ್ತಿ, ನಾಡಿಗೆ ಶಾಂತಿ, ಓದುಗರಿಗೆ ವಿಶ್ರಾಂತಿ ಬೇಕಾಗಿದೆ. ✡

— ೪೮ —

## ಕನಸಿನಲ್ಲಿ ಹೆಣ್ಣು

ಭಾಷೆಯನ್ನು ನಾವು ಮಾತೃಮೂಲವಾಗಿ ಭಾವಿಸಿದರೂ ಅದರ ಕಲ್ಪನಾ ಸಾಹಿತ್ಯ ಬಹು ತರವಾಗಿ ಪುರುಷಕೃತವಾಗಿರುವುದರಿಂದ ಗಂಡಿನ ಬಗ್ಗೆ ಹೆಣ್ಣಿನ ಭಾವವಿಲಾಸಕ್ಕಿಂತ ಹೆಣ್ಣಿನ ಬಗ್ಗೆ ಗಂಡಿನ ಭಾವವೈಚಿತ್ರ್ಯವನ್ನೇ ಭಾಷೆಗಳು ಪ್ರತಿಬಿಂಬಿಸುತ್ತವೆ. ನಮ್ಮ ಕೋಶಗಳು ಸ್ತ್ರೀ ಸಾಮಾನ್ಯಕ್ಕೆ ಕೊಡುವಂಥ ಪರ್ಯಾಯ ಪದಗಳ ಮಾಲೆಯನ್ನೇ ನೋಡಿ. ಮಂಗರಾಜ ನಿಘಂಟು ತನ್ನ "ಗೋತ್ರ ವರ್ಗ"ದಲ್ಲಿ ಹೆಣ್ಣನ್ನು ನಿರ್ದೇಶಿಸಲು ಕೊಡುವ ಶಬ್ದಗಳು ಇವು: "ಭಾಮಿನಿ, ನಿತಂಬಿನಿ, ಪ್ರಮದೆ, ಸುಂದರಿ, ಲಲನೆ, ಕಾಮಿನಿ, ಪುರಂಧ್ರಿ, ವಧು, ಯುವತಿ, ಅಂಗನೆ, ರಮಣಿ, ವಾಮೆ, ಸೀಮಂತಿನಿ, ಸ್ತ್ರೀ, ವನಿತೆ, ನಾರಿ, ಯೋಷಿತ್, ಕಾಂತೆ, ಮಹಿಳೆ, ಅಬಲೆ, ರಾಮೆ, ವರವರ್ಣಿನಿ—ಎನಲ್ಕೆ ಹೆಂಗೂಸೆನಿಕ್ಕು."

ಇವನ್ನೆಲ್ಲ ಕೋಶಗಳ ಸಮಾನಾರ್ಥ ಪದಗಳೆಂದು ಎಣಿಕೆ ಮಾಡಿದ್ದರೂ ಮತ್ತು ನಮ್ಮ ಕವಿಗಳು ಕಂಡಾಬಟ್ಟೆಯಾಗಿ ಎಲ್ಲ ಸ್ತ್ರೀಯರಿಗೂ ಅವುಗಳನ್ನು ಪ್ರಯೋಗಿಸಿದ್ದರೂ ಅವು ನಿಜಕ್ಕೂ ಹೆಣ್ಣಿನಲ್ಲಿ ಭಾರತೀಯ ಗಂಡು ಕಂಡ ಅಥವಾ ಕಾಣಬಯಸಿದ ಗುಣ ಲಕ್ಷಣಗಳ ಒಂದು ರಾಶಿಯನ್ನೇ ವ್ಯಂಜಿಸುತ್ತವೆ.

ಕೆಲವನ್ನು ಇಲ್ಲಿ ವಿಶ್ಲೇಷಿಸುವಾ.

ಮೊದಲು ಸ್ತ್ರೀ. ಇದು ಹೆಣ್ಣಿನ ಪ್ರಧಾನ ಕರ್ಮಕ್ಕೆ ಸಂಬಂಧಿಸಿ ರೊಮ್ಯಾಂಟಿಕ್ ಕಲ್ಪನೆಗಳಿಂದ ಲಿಪ್ತವಾಗದ ಶಬ್ದ. ಬಹುಶಃ ಇದರ ಮೂಲ ರೂಪ ಸೂತ್ರಿ ಅಥವಾ ಸ್ತೋತ್ರಿ— ಅಂದರೆ (ಮಕ್ಕಳನ್ನು) ಹಡೆಯುವವಳು ಎಂದಿರಬೇಕು. ಅದೇ ವರ್ಗಕ್ಕೆ ಸೇರಿದವು ಜಾಯಾ, ಜಾನಿ ಮತ್ತು ಪುರಂಧ್ರಿ. ಜಾಯಾ, ಜಾನಿ ಎಂದರೆ ಜನನ ಕೊಡುವವಳು; ಪುರಂಧ್ರಿ ಎಂದರೆ ತುಂಬಾ ಫಲವೀಯುವವಳು— ಜನನಿ ಎಂದ ಹಾಗೆ. ಸತಿ ಎಂಬುದು 'ಸತ್'—ಒಳ್ಳೆಯದು. (ಗಂಡನಿಗೆ) ಸತ್ಯವಾಗಿರುವವಳು—ಪತಿವ್ರತೆ. ಶಿವನ ಮೊದಲ ಪತ್ನಿಗೂ ವಿಶ್ವಾಮಿತ್ರನ ಒಬ್ಬ ಹೆಂಡತಿಗೂ ಇದೇ ಹೆಸರಿತ್ತು. ಶಿವನ ಪತ್ನಿ ತನ್ನ ತಂದೆಯ ಯಜ್ಞದಲ್ಲಿ ಗಂಡನಿಗಾದ ಅವಮಾನವನ್ನು ತಾಳಲಾರದೆ ಅಗ್ನಿಪ್ರವೇಶ ಮಾಡಿದ್ದರಿಂದ, ಸತ್ತ ಗಂಡನ ಸಂಗಡ ಚಿತೆಯೇರುವ ಹೆಣ್ಣುಗಳಿಗೂ ಸತಿಯೆಂಬ ಹೆಸರು ಬಿತ್ತು. ಆದರೆ ನಮ್ಮ (ಕನ್ನಡ) ಕವಿಗಳು ಈ ವಿಶಿಷ್ಟಾರ್ಥಕ ಪದವನ್ನು ಎಲ್ಲ ಹೆಂಗಸರಿಗೆ ಲಘುವಾಗಿ ಬಳಸಿದ್ದಾರೆ. ವಧು ಎಂಬುದನ್ನೂ ಕವಿಗಳು ದುರ್ಲಕ್ಷ್ಯದಿಂದ ಹೆಂಗಸರಿಗೆಲ್ಲ ಅನ್ವಯಿಸಿದ್ದಾರೆ. ಅದರ ಅರ್ಥ ಬಹುಶಃ ವಹ್ ಕರೆದುಕೊಂಡು ಅಥವಾ ಹೊತ್ತುಕೊಂಡು ಬಂದವಳು ಅಂದರೆ ಮದುವೆ ಮಾಡಿಕೊಂಡು ಬಂದವಳು ಎಂದು. ಇದರಲ್ಲಿ ಬಲಾತ್ಕಾರದಿಂದ ಅಪಹರಿಸಿ (ವಹ್) ತಂದ ಹೆಂಡತಿಯೂ ಇರಬಹುದಾಗಿತ್ತು—ಅನ್ನಿ. ಲಗ್ನವಾಗಿ ಬಂದವಳು ಎಂಬುದರಿಂದಲೇ "ವಧು" ಶಬ್ದ ಮದುವಣಗಿತ್ತಿ ಸೊಸೆ (ಹಿಂದೀ—ಬಹೂ) ಎಂಬರ್ಥಗಳನ್ನೂ ಸಂಚಯಿಸಿಕೊಂಡಿದೆ.

ಹೆಣ್ಣಿನಲ್ಲಿ—ಸ್ವತಃ ಅವಳೂ ಸೇರಿದಂತೆ—ನಾವು ಅಪೇಕ್ಷಿಸುವ ಗುಣ ಚಂದವಾಗಿರಬೇಕು ಎಂಬುದಲ್ಲವೇ? ಆದ್ದರಿಂದ ಸುಂದರಿಯೆಂಬುದು ಕೂಡ ಸ್ತ್ರೀ ಸಾಮಾನ್ಯಕ್ಕೆ ತಗಲಿದ ಹೆಸರಾಗಿ ಬಿಟ್ಟಿತು. ಸುಂದರಿ ಎಂಬುದಕ್ಕೆ ಸು – ನರಿ ಒಳ್ಳೆ ಹೆಣ್ಣು ಎಂಬುದು ಮೂಲವಿರಬೇಕೆಂದು

ಮೋನಿಯರ್ ವಿಲಿಯಮ್ಸ್ ತರ್ಕಿಸುತ್ತಾನೆ. ಕನ್ನಡದಲ್ಲಿ ಚೆನ್ನೆ ಎಂದಂತೆ. ನರೀ=ನಾರಿ; ನರ ಶಬ್ದದ ಸ್ತ್ರೀಲಿಂಗ ರೂಪ: ಮನುಷ್ಯೆ. ಯೌವನೆಯಾದ ಹೆಣ್ಣು ತಾನೆ ಸುಂದರಿಯೂ ಅಪೇಕ್ಷಣೀಯಳೂ ಆಗಿರುವುದು? ಆದ್ದರಿಂದ ಅವಳು ಯೋಷಾ ಅಥವಾ ಯೋಷಿತ್—ಜವ್ವನಗಿತ್ತಿ.

ಸೌಂದರ್ಯದ ಸಾಮಾನ್ಯ ಇಚ್ಛೆಯನ್ನು ವಾಚಿಸಿದ ಮೇಲೆ ವಿಶೇಷಗಳನ್ನು ಹೇಳುವ ಪದಗಳನ್ನು ನೋಡಬಹುದು. ಅವಳು ಅಂಗನೆ. ಮಾಟವಾದ ಅಂಗಗಳುಳ್ಳವಳು. ಎಲ್ಲ ಆರ್ಯ ಜನಗಳಂತೆ ಭಾರತದವರೂ ದಪ್ಪನ್ನ ಹೆಣ್ಣುಗಳನ್ನು ಇಷ್ಟಪಡುತ್ತಿರಲಿಲ್ಲ. ಆದ್ದರಿಂದ ಹೆಂಗಸು ತನ್ವಂಗಿ, ಕೃಶಾಂಗಿ (ತನು=ತೆಳ್ಳಗೆ). ಕನ್ನಡ ಕವಿಗಳು ಅಸಿಯಳ್ ಎನ್ನುತ್ತಿದ್ದರು. (ಅಸಿಯ=ತೆಳ್ಳನ್ನ) ಆದರೆ ದ್ರಾವಿಡ ಮೂರ್ತಿಶಿಲ್ಪಗಳನ್ನು ನೋಡಿದರೆ ದ್ರಾವಿಡರಿಗೆ ಕೃಶಾಂಗಿಯರಿಗಿಂತ ಪುಷ್ಟಾಂಗಿಯರೇ ಇಷ್ಟವಾಗಿದ್ದರೇನೋ ಅನಿಸುತ್ತದೆ! ಅದು ಬೇರೆ ಸಂಗತಿ. ಮೈಕೈ ತೆಳ್ಳಗಿರಬೇಕು ಸ್ಯೆ. ಆದರೆ ಲತಾಂಗಿ(ಬಳ್ಳಿಯಂಥವಳು)ಯಾದರೂ ಹೆಣ್ಣು ನಿತಂಬಿನಿಯಾಗಿರಬೇಕು. ನಿತಂಬ ಎಂದರೆ ಕುಂಡೆ, ಮಧ್ಯ ಶರೀರದ ಈ ಪ್ರದೇಶ ಒಳ್ಳೇ ದಪ್ಪವಾದವಳು ನಿತಂಬಿನಿ. ಆದ್ದರಿಂದ ಹೆಣ್ಣನ್ನು ನಿತಂಬಿನಿಯೆಂದೇ ಕರೆಯುವುದು ಕವಿಗಳಿಗೆ ವಾಡಿಕೆ. ಹೆಂಗಸರು ಬೈತಲೆ ತೆಗೆಯುವುದು ಆರ್ಯರಿಗೆ ಸೌಂದರ್ಯಕ್ಕಲ್ಲದೆ ಧಾರ್ಮಿಕವಾಗಿಯೂ ಅಗತ್ಯವಾಗಿತ್ತು. ಆದ್ದರಿಂದ ಹೆಣ್ಣು ಸೀಮಂತಿನಿ (ಸೀಮಂತ=ನೇರವಾದ ಬೈತಲೆ). (ಧಾರ್ಮಿಕವಾಗಿ ಬಸಿರಿಯರಿಗೆ ಸೀಮಂತ ಸಮಾರಂಭ ವೈದಿಕ ಕರ್ಮ.) ಅವಳ ಮೈಬಣ್ಣ ಚೆನ್ನಾಗಿರಬೇಕು. ಆದ್ದರಿಂದ ಅವಳು ವರವರ್ಣಿನಿ.

ಅವಳು "ಸತಿ"ಯಾಗಿರಬೇಕು ಎಂದೆನಲ್ಲ. ಆದರೆ ಬರೀ ಸತಿಯಾದರೆ ಭಾರತೀಯ ಗಂಡಸಿಗೆ ಸಾಲುತ್ತಿರಲಿಲ್ಲ. ಅವಳು ವನಿತೆಯಾಗಿರಬೇಕು. ವನ್ ಅಂದರೆ ಆಶೆಪಡು, ಗೆಲ್ಲು, ಅಂದರೆ ಅವಳನ್ನು ಗೆದ್ದುಕೊಳ್ಳಬೇಕೆಂದು ಗಂಡನಿಗೆ ಹಂಬಲವಾಗುವಷ್ಟು ಉದ್ವೇಗ ಹುಟ್ಟಿಸುವಂತಿರಬೇಕು. (ರೋಮನ್ನರ ಪ್ರೇಮದೇವತೆಯಾದ "ವೀನಸ್" ಹೆಸರು ಕೂಡ ಇದೇ ಶಬ್ದಕ್ಕೆ ಸಂಬಂಧಿಸಿದ venia ಎಂಬ ಲ್ಯಾಟಿನ್ ಧಾತುವಿನಿಂದು ಹುಟ್ಟಿದ್ದು) ಅಲ್ಲದೆ ಅವಳು ಮಹಿಳಾ ಕೂಡ ಆಗಿರಬೇಕು ಮಹ್ ಎಂದರೆ ಉತ್ತೇಜನಗೊಳಿಸುವುದು, ಅವಳು ರಾಮಾ, ರಮಣಿ ಕೂಡ ಹೌದು. ಅರ್ಥಾತ್ ಅವಳಲ್ಲೇ ರಮ್ ಅಂದರೆ ಸದಾ ರಮಿಸುವಂತೆ, ಆಸಕ್ತನಾಗುವಂತೆ ಗಂಡನ್ನು ಪ್ರೇರಿಸುವ ಶಕ್ತಿ ಇರಬೇಕು. ಅವಳು ಲಲ್ಲೆಗರೆಯುವವಳಾದರೆ ಮಾತ್ರ ಗಂಡನ್ನು ನಿರಂತರವಾಗಿ ಹುಚ್ಚೆಬ್ಬಿಸಬಲ್ಲಳು. ಆದ್ದರಿಂದ ಅವಳು ಲಲನಾ. ಗಂಡಸರೇ ಕಾಮುಕರು ಎನ್ನುವುದರಲ್ಲಿ ನಮ್ಮವರಿಗೆ ನಂಬಿಕೆ ಇದ್ದಿಲ್ಲ. ಹೆಂಗಸರಿಗೆ ಎಂಟು ಮಡಿ ಕಾಮ ಎಂದವರು ನಾವು. ಹೆಂಗಸರು ಕಾಮಿನಿಯರು; ಸ್ವತಃ ಕಾಮೋನ್ಮಾದವುಳ್ಳವರೂ ಅರ್ಥಾತ್ ಪ್ರಮದೆಯರೂ ಆಗಿದ್ದರೆ ಸ್ವಾರಸ್ಯ.

ಇಷ್ಟೆಲ್ಲ ಇದ್ದರೂ ಹೆಣ್ಣನ್ನು ಯಾವಾಗಲೂ ಸೊನಸಲು ಸಾಲವೆಂದು ನಮ್ಮ ರಸಿಕರು ಬಲ್ಲರು. ಅವಳು ಯಾವಾಗಲೂ ವಶಾ (ಅಂಕೆಯಲ್ಲಿರುವವಳು) ಮಾತ್ರ ಆಗಿದ್ದರೆ ಸ್ವಾರಸ್ಯವಿಲ್ಲ. ಅವಳು ಮಾನಿನೀ ಸ್ವಲ್ಪ ಹಮ್ಮುಳ್ಳವಳಾಗಿದ್ದರೆ ಗಂಡಿಗೆ ಮಜಾ ಎನಿಸುತ್ತದೆ. ಮಾನ ಎಂದರೆ ಆತ್ಮಗೌರವ, ಅಹಂಕಾರ, ಕೆರಳು, ವೈಪರೀತ್ಯ, ಹಾಗೆಯೆ ಅವಳು ಭಾಮಾ, ಭಾಮಿನಿ ಕೋಪ ಮಾಡಿಕೊಳ್ಳುವವಳು, ಉತ್ತೇಜಿತಳಾಗಬಲ್ಲವಳು, ಛಲವುಳ್ಳವಳು ಇರಬೇಕು. ಈ ಕೋಪತಾಪ ಊಟಕ್ಕೆ ಉಪ್ಪಿನ ಕಾಯಿಯಂತೆ. ಇಷ್ಟೆಲ್ಲ ಗಡುಸು ಇದ್ದೂ ಅವಳು ಅಬಲಾ ಆಗಿರಬೇಕು. ಅಂದರೆ ಮಾತ್ರ ಅವಳನ್ನು ಕಾಯುವ ಹೆಮ್ಮೆಯನ್ನು ಗಂಡು ಅನುಭವಿಸಬಲ್ಲ.

ಇಂಥಎಲ್ಲ ಪರಸ್ಪರ ವಿರೋಧವಾದ ಗುಣ ಲಕ್ಷಣಗಳನ್ನು ಭಾರತೀಯ ರೊಮ್ಯಾಂಟಿಕ್ ಗಂಡಸು ಹೆಣ್ಣಿನಲ್ಲಿ ನಿರೀಕ್ಷಿಸಿದ್ದಾನೆ. ಇದು ಈ ಶಬ್ದಗಳು ಕೊಡುವ ಮಾಹಿತಿ. —ಪಾವೆಂ.

# ಡೈನೋಸಾರುಗಳ ಮಾರಣಹೋಮ

**ಜಿ. ಟಿ. ನಾರಾಯಣರಾವ್**

ಚಿತ್ರ : ಕೆ. ಮುರಳೀಧರರಾವ್

## ಪ್ರಾಚೀನ ಜಲಜಶಿಲೆ ಎದುರಿಟ್ಟ ಒಗಟು

ಲುಯಿಸ್ ಅಲ್ವಾರಿಸ್ (೧೯೧೧) ಅಮೆರಿಕದ ಒಬ್ಬ ನೊಬೆಲ್ ಪ್ರಶಸ್ತಿ ವಿಜೇತ (೧೯೬೮) ಭೌತವಿಜ್ಞಾನಿ. ನ್ಯೂಕ್ಲಿಯರ್ ಭೌತವಿಜ್ಞಾನ ಇವರ ಸಂಶೋಧನ ಕ್ಷೇತ್ರ. ಐತಿಹಾಸಿಕ ಸಂಶೋಧನೆಗೆ ಭೌತವಿಜ್ಞಾನದ ತಂತ್ರಗಳನ್ನು ಅನ್ವಯಿಸುವುದರಲ್ಲಿ ಇವರಿಗೆ ಅಪಾರ ಆಸಕ್ತಿ.

ಲುಯಿಸರ ಮಗ ವಾಲ್ಟರ್. ಇವರು ಪ್ರಾಗ್ಜೀವಿವಿಜ್ಞಾನಿ. ಅಂದರೆ ಹಲವು ಕೋಟಿ ವರ್ಷಗಳ ಹಿಂದೆ ಜೀವಿಸಿದ್ದು ಕ್ರಮೇಣ ನಶಿಸಿ ಹೋಗಿ ಈಗ ಪಳೆಯುಳಿಕೆಗಳಲ್ಲಿ ಮಾತ್ರ ಸಾಕ್ಷ್ಯ ಒದಗುವ ನಷ್ಟವಂಶಜೀವಿಗಳ ಬಗೆಗೆ ಅಧ್ಯಯನ ಗೈಯುವ ವಿಜ್ಞಾನಿ. ಆರ್ಕಿಯಾಪ್ಟೆರಿಕ್ಸ್ ಎಂಬ ವಿಚಿತ್ರ ವಾಯುಚರಿ, ಡೈನೊಸಾರ್ ಎಂಬ ದೈತ್ಯ ಭೂಚರಿ ಪ್ರಾಗ್ಜೀವಿಗಳಿಗೆ (ಅಥವಾ ನಷ್ಟ ವಂಶಜೀವಿಗಳಿಗೆ) ನಿದರ್ಶನಗಳು.

ವಾಲ್ಟರ್ ೧೯೭೮ರಲ್ಲಿ ಒಂದು ದಿನ ತಮ್ಮ ತಂದೆಗೊಂದು ಅಮೂಲ್ಯ ಬಹುಮಾನ ನೀಡಿದರು: ಇಟಲಿಯಲ್ಲಿ ಸಂಗ್ರಹಿಸಿದ ಸುಮಾರು ೬೫.೦೦೦.೦೦೦ ವರ್ಷಗಳಷ್ಟು ಪ್ರಾಚೀನ ಕಾಲದ ಜಲಜಶಿಲೆ.

ಕಲ್ಲುಗಳಲ್ಲಿ ಮೂರು ಬಗೆಗಳಿವೆ: ಅಗ್ನಿಶಿಲೆ, ಜಲಜಶಿಲೆ, ರೂಪಾಂತರಿತಶಿಲೆ. ಜ್ವಾಲಾಮುಖಿ ಕಾರಿದ ಲಾವಾರಸ ಹೆಪ್ಪುಗಟ್ಟಿ ಮೈದಳೆದ ಕಲ್ಲು ಅಗ್ನಿಶಿಲೆ. ಕಡಲಾಳದಲ್ಲಿ ಹೂಳಿನ ಪದರುಗಳು ಒಂದರ ಮೇಲೊಂದು ಪೇರಿ ತಜ್ಜನಿತ ಸಂಮರ್ದ ಹಾಗೂ ಶಾಖಗಳಿಂದ ರೂಪುಗೊಂಡ ಕಲ್ಲು ಜಲಜಶಿಲೆ. ಪದರಶಿಲೆ ಅಥವಾ ಅವಸಾದನ ಶಿಲೆ ಎಂದರೂ ಇದೇ. ಭೂಗರ್ಭದಲ್ಲಿಯ ಅಗಾಧ ಸಂಮರ್ದ ಮತ್ತು ಅತಿ ಶಾಖಗಳ ಕಾರಣವಾಗಿ ದ್ರವ್ಯದ ವಿವಿಧ ಬಗೆಗಳು ಕಾದು ಕರಗಿ ಶಿಲಾಪಾಕವೇರ್ಪಡುತ್ತದೆ. ಇದರ ಘನೀಭವಿತರೂಪವೇ ರೂಪಾಂತರಿತ ಶಿಲೆ.

ಜಲಜಶಿಲೆ ಭೂಚರಿತ್ರೆಯ ದಾಖಲೆಗಳನ್ನೊಳಗೊಂಡಿರುವ ಮಹಾಗ್ರಂಥ. ಇದರ ಮೊದಲ ಪುಟ ತಳದಲ್ಲಿಯೂ ಕೊನೆಯ ಪುಟ ಮೇಲೆಯೂ ಇರುತ್ತವೆ—ಸರ್ಕಾರಿ ಕಚೇರಿಯ ದಫ್ತರದಂತೆ. ಇದನ್ನು ಓದುವುದು ಕೆಳಗಿನಿಂದ ಮೇಲಕ್ಕೆ. ಅಂದ ಮೇಲೆ ಜಲಜಶಿಲೆ ಪ್ರಾಚೀನವಾದಷ್ಟೂ ಅದರಲ್ಲಿ ದಾಖಲಾಗಿರುವ ಮಾಹಿತಿ ಅಷ್ಟು ಗತಕಾಲದ್ದು ಎಂಬುದು ಸ್ಪಷ್ಟ—ದಫ್ತರ ಹಳೆಯದಾದಷ್ಟೂ ಅದು ಭೂತಕಾಲದ ಅಷ್ಟು ಆಳಕ್ಕೆ ಹಿನ್ನೋಟ ಒದಗಿಸುವಂತೆ.

ವಾಲ್ಟರ್ ಬಹುಮಾನಿಸಿದ ಆ ಶಿಲೆಯಲ್ಲಿ

ಗಹನ ಒಗಟೊಂದು ಅಡಗಿತ್ತು: ಅದರ ಕೆಳ ಅರ್ಧದಲ್ಲಿ ಮಾತ್ರ ಸಾಗರ ಸೂಕ್ಷ್ಮಜೀವಿಗಳ ಅಸಂಖ್ಯ ಪಳೆಯುಳಿಕೆಗಳು ಅಚ್ಚುಗೊಂಡಿದ್ದುವು, ಮೇಲು ಅರ್ಧದಲ್ಲಿ ಇಂಥ ಯಾವ ದಾಖಲೆಗಳೂ ಇರಲಿಲ್ಲ. ದಫ್ತರದ ಕೆಳ ಅರ್ಧದಲ್ಲಿ ಪೂರ್ತಿ ಲಿಖಿತ ಹಾಳೆಗಳೂ ಮೇಲು ಅರ್ಧದಲ್ಲಿ ಪೂರ್ತಿ ಖಾಲಿ ಹಾಳೆಗಳೂ ಇರುವಂಥ ಪರಿಸ್ಥಿತಿ. ಈ ವೈಚಿತ್ರ್ಯದ ಅರ್ಥವೇನು? ಆ ಶಿಲೆಯ ಮೇಲು ಅರ್ಧ ರೂಪುಗೊಳ್ಳಲು ಆರಂಭವಾದ ವೇಳೆಗೆ ಭೂಮಿಯಲ್ಲಿಯ ಎಲ್ಲ ಸೂಕ್ಷ್ಮದರ್ಶಕೀಯ ಜೀವಿಗಳೂ ನಿರ್ನಾಮವಾಗಿರಬಹುದೇ?

## ಡೈನೊಸಾರುಗಳ ಸಾಮೂಹಿಕ ನಾಶ

ಡೈನೊಸಾರುಗಳು ಇಂದು ಜೀವಿಸಿಲ್ಲ. ಮೀಸೊಜೋಯಿಕ್ ಯುಗದ (ಕಾಲವ್ಯಾಪ್ತಿ ಸುಮಾರು ೨೨೫,೦೦೦,೦೦೦ನಿಂದ ಸುಮಾರು ೬೫,೦೦೦,೦೦೦ ವರ್ಷ ಪ್ರಾಚೀನ) ಮೊದಲನೆಯ ಭಾಗವಾದ ಟ್ರಯಾಸಿಕ್ ಕಲ್ಪದಲ್ಲಿ (ಕಾಲವ್ಯಾಪ್ತಿ ಸುಮಾರು ೨೨೫,೦೦೦,೦೦೦ ನಿಂದ ಸುಮಾರು ೧೯೦,೦೦೦,೦೦೦ ವರ್ಷ ಪ್ರಾಚೀನ) ಕೋಡಿಬಿರಿದು ಹರಿಯುತ್ತಿದ್ದ ಅತಿ ಸಮೃದ್ಧ ಮತ್ತು ಸರ್ವಪೋಷಕ ಪರಿಸರದಲ್ಲಿ ಕೊಬ್ಬಿ ಬೆಳೆದು ಹಲವಾರು ಕವಲುಗಳಾಗಿ ವಂಶವೃದ್ಧಿಗೊಂಡ ಧರಣಿಚಕ್ರವರ್ತಿಗಳಿವು. ಆರಂಭದಲ್ಲಿ ಇಂಥ ಪ್ರರೂಪೀ ಪ್ರಾಣಿಯೊಂದರ ಉದ್ದ ೪.೫ ಮೀಟರಿಗಿಂತ ಜಾಸ್ತಿ ಇರಲಿಲ್ಲ. ಆದರೆ ವಿಕಾಸದ ಅಂತಿಮ ಹಂತದಲ್ಲಿ — ಅಂದರೆ ಟ್ರಯಾಸಿಕ್ ಕಲ್ಪದ ಕೊನೆಯ ಪಾದದಲ್ಲಿ — ಅದರ ಉದ್ದ ೧೪ ಮೀಟರ್, ಎತ್ತರ ೬.೧ ಮೀಟರ್ ಮತ್ತು ತೂಕ ೮೦ ಟನ್ ಇದ್ದುವು. ಈ ದೈತ್ಯಕಾಯದೊಡನೆ ಹೋಲಿಸುವಾಗ ಇಂದಿನ ಗಜರಾಜ—ಉದ್ದ ೩ ಮೀಟರ್, ಎತ್ತರ ೩.೧ ಮೀಟರ್ ಮತ್ತು ತೂಕ ೬.೫ ಟನ್—ಎಂಥ ಕುಬ್ಜ ವಾಮನರೂಪಕ್ಕೆ ಕುಸಿಯುತ್ತದೆ ಎಂಬುದನ್ನು ಊಹಿಸಿಕೊಳ್ಳಬಹುದು.

ಡೈನೊಸಾರುಗಳು ಚತುಷ್ಪಾದಿಗಳು. ಆದರೆ ಹಿಂಗಾಲುಗಳನ್ನು ಮಾತ್ರ ಆಧರಿಸಿ ಸಂಚರಿಸುತ್ತಿದ್ದುದು ವಾಡಿಕೆ. ವಿಕಾಸಶ್ರೇಣಿ ಮುಂದುವರಿದಂತೆ ಈ ವರ್ಗದಲ್ಲಿ ಮಾಂಸಾಹಾರಿ ಮತ್ತು ಸಸ್ಯಾಹಾರಿ ಪ್ರಭೇದಗಳು ಬೇರ್ಪಟ್ಟು ಪ್ರತ್ಯೇಕವಾಗಿ ಅಭಿವರ್ಧಿಸಿದುವು. ಹೀಗೆ ಸುಖಸತ್ಕಥಾ ವಿನೋದದಲ್ಲಿ ಅಜಾತಶತ್ರುಗಳಾಗಿ ಪ್ರವರ್ಧಿಸುತ್ತಿದ್ದ ಈ ಹೆಗ್ಗೌಳಿಗಳು ಅಥವಾ ಪೆಡಂಭೂತಗಳು ಮೀಸೊಜೋಯಿಕ್ ಯುಗಾಂತ್ಯದಲ್ಲಿ ಹಠಾತ್ತನೆ ನಿರ್ವಂಶಿಗಳಾಗಿಹೋದುವು — ಅಜ್ಞಾತ ರಾಕ್ಷಸಕರವೊಂದು ಇವುಗಳ ಸಮಗ

### ಊರ್ತನ ಮೇಘ

ಸೂರ್ಯ–ಭೂಮಿ ಸರಾಸರಿ ಅಂತರಕ್ಕೆ ಖಗೋಳ ಮಾನವೆಂದು ಹೆಸರು.

೧ ಖಮಾ = ೧೪೯,೬೦೦,೦೦೦ ಕಿಮೀ

ಸೂರ್ಯನಿಂದ ಸುಮಾರು ೨೦,೦೦೦—೧೦೦,೦೦೦ ಖಮಾ ದೂರದಲ್ಲಿರುವ ಧೂಮಕೇತು ನಿವಾಸಕ್ಕೆ (ಜೇನ್ ಊರ್ತ್ ಎಂಬಾತ ಇದರ ಶೋಧ ಮಾಡಿದುದರಿಂದ) ಊರ್ತನ ಮೇಘವೆಂದು ಹೆಸರು. ಇಲ್ಲಿ ೨೦೦,೦೦೦,೦೦೦,೦೦೦ ಧೂಮಕೇತುಗಳ ಒಂದು ಜೇನುಗೂಡೇ ಸೌರವ್ಯೂಹವನ್ನು ಸುತ್ತುವರಿದಿರಬಹುದೆಂದು ಅಂದಾಜು. ಈ ವಲಯದಲ್ಲಿ ಆಗಂತುಕ ನಕ್ಷತ್ರವೊಂದರ ಪ್ರವೇಶದ ಕಾರಣವಾಗಿ ಗುರುತ್ವ ಕ್ಷೋಭೆ ತಲೆದೋರುತ್ತದೆ. ಆಗ ಕೆಲವು ಧೂಮಕೇತುಗಳು ತಮ್ಮ ಚಿರ ಘನೀಭವಿತ ನಿದ್ರಾಸ್ಥಿತಿಯಿಂದ ಎಚ್ಚರಗೊಂಡು ಸೂರ್ಯಾಭಿಮುಖವಾಗಿ ಸಂಚರಿಸತೊಡಗುತ್ತವೆ.

ಕುಲವನ್ನು ಬರಗಿ ಹಿಡಿದು ಹೊಸಕಿ ಅಳಿಸಿ ಹಾಕಿದಂತೆ. ಇದು ಸಂಭವಿಸಿದ್ದು ಸುಮಾರು ೫೫,೦೦೦,೦೦೦ ವರ್ಷಗಳ ಹಿಂದೆ, ಕ್ರಿಟೇಶಿಯಸ್ ಕಲ್ಪದ (ಮೆಸೋಜೋಯಿಕ್ ಯುಗದ ಮೂರನೆಯ ಮತ್ತು ಕೊನೆಯ ಭಾಗ) ಅಂತಿಮ ದಿನಗಳಲ್ಲಿ. ಈ ಪ್ರವರ್ಧಿತ ಪ್ರಾಣಿಗಳು ಒಮ್ಮೆಗೇ ಮರಣ ಅಪ್ಪಿದುದರ ಕಾರಣವೇನಿರಬಹುದು? ವಿಷಾನಿಲ? ಭೂಸ್ಫೋಟ? ಒಂದು ಪ್ರಭೇದದ ವಿಕಾಸ ಹಂತ ಪರಿಪೂರ್ಣತೆ ಐದಿದಾಗ ಸಂಭವಿಸುವ ಜೀನ್ (ವಂಶವಾಹಿ) ನಷ್ಟ?

## ಅಪೊಲೊ ಕಾಯಗಳ ಆತ್ಮಾಹುತಿ

ಸೌರವ್ಯೂಹದ ಚಿತ್ರದಲ್ಲಿ ಗ್ರಹಕಕ್ಷೆಗಳು ಏಕಾಯಾಮದ ರೇಖೆಗಳಾಗಿ ಕಾಣುವುದು ಸರಿಯಷ್ಟೆ. ಇವುಗಳಿಗೆ ಉದ್ದವಿದೆ, ಅಗಲವಾಗಲಿ ದಪ್ಪವಾಗಲಿ ಇಲ್ಲ. ಚಿತ್ರ ಇಷ್ಟಕ್ಕೇ ಮುಗಿಯುವುದಿಲ್ಲ. ಕುಜ-ಗುರು ಕಕ್ಷೆಗಳ ನಡುವಿನ ವಿಶಾಲ ತೆರಪಿನಲ್ಲಿ ಎರಡು ಆಯಾಮಗಳ (ಅಂದರೆ ಉದ್ದ ಮತ್ತು ಅಗಲ ಇರುವ, ದಪ್ಪ ಇರದ) ಪಟ್ಟಿಯೊಂದಿದೆ. ಇದು ಕ್ಷುದ್ರ ಗ್ರಹಗಳ ಹೊನಲು. ಅತ್ತ ಗ್ರಹವಾಗಿ ಸ್ವಂತ ಕಕ್ಷೆ ಗಳಿಸಲು ಸಾಕಷ್ಟು ಸರಕು ಪಡೆದಿರದ, ಇತ್ತ ಧೂಮಕೇತುವಾಗಿ ಊರ್ತನ ಮೇಘದಲ್ಲಿ (ಪ್ರತ್ಯೇಕವಾಗಿ ವಿವರಣೆ ಕೊಟ್ಟಿದೆ) ನೆಲಸಲು ತಕ್ಕಷ್ಟು ಲಘುತ್ವ ಹೊಂದಿರದ ಕಸಕಡ್ಡಿ ರಾಡಿ ಮಡ್ಡಿ ಈ ವಲಯದಲ್ಲಿ ಸಂಗ್ರಹೀತವಾದುವು. ಇವು ಕ್ಷುದ್ರ ಗ್ರಹಗಳು—ಅಸಂಖ್ಯ ಕಲ್ಲು ಬಂಡೆಗಳ ಮತ್ತು ಮಣ್ಣು ಹೆಂಟೆಗಳ ಮಹಾಸಮುದಾಯ. ಒಟ್ಟಾರೆ ಈ ಹಿಂಡಿಗೆ ಒಂದು ನೆಲೆ, ಒಂದು ಕಕ್ಷೆ, ಒಂದು ವೇಗ ಇದ್ದರೂ ಹಲವಾರು ಬಿಡಿ ಕಾಯಗಳು ಈ ಸಾಮೂಹಿಕ ನಿಯಮಗಳಿಗೆ ಅಪವಾದವಾಗಿರುವುದು ಅಪರೂಪವೇನಲ್ಲ. ಇಂಥವು ಹಿಂಡನ್ನಗಲಿ ಸಾಮೂಹಿಕ ಶಿಸ್ತನ್ನು ಉಲ್ಲಂಘಿಸಿ ಗ್ರಹಕಕ್ಷೆಗಳ (ಇವು ನಮ್ಮ ಹೆದ್ದಾರಿಗಳಿಂತೆ ಖಚಿತವಾಗಿ ನಿರ್ಣೀತವಾಗಿವೆ) ನಿಷೇಧಿತ ಪ್ರದೇಶಗಳಿಗೆ ಅತಿಕ್ರಮ ಪ್ರವೇಶ



ಗೈಯುವುದುಂಟು.

ಈ ವರ್ಗದ ಕ್ಷುದ್ರ ಗ್ರಹಗಳ ಒಂದು ಗುಂಪಿಗೆ ಅಪೊಲೊ ಕಾಯಗಳೆಂದು ಹೆಸರು. ಇವು ಸೂರ್ಯನಿಗೆ ತೀರ ಸಮೀಪ—ಸ್ವಂತ ಅಸ್ತಿತ್ವಕ್ಕೆ ಅಪಾಯಕಾರಿ ಎನ್ನಿಸುವಷ್ಟು ಹತ್ತಿರ —ಸುಳಿಯುತ್ತವೆ ಮತ್ತು ಭೂಕಕ್ಷೆಯನ್ನು ಅಡ್ಡ ಹಾಯುತ್ತವೆ. ಅಂದ ಮೇಲೆ ಅಪೊಲೊ ಕಾಯ ಗಳಿಗೆ ಎರಡು ರೀತಿಗಳಲ್ಲಿ ಮರಣ ಸಂಭವಿಸು ವುದು ಸಾಧ್ಯ: ಸೂರ್ಯನಿಂದ ಸ್ವಾಹಾಕಾರಿಸ ಲ್ಪಡುವುದು, ಭೂಮಿಗೆ ಡಿಕ್ಕಿ ಹೊಡೆಯುವುದು.

## ಜಲಜಶಿಲೆ ಕೊಟ್ಟ ಒಡಪು

ಜಲಜಶಿಲೆಯಲ್ಲಿಯ 'ಖಾಲಿ ಪುಟಗಳ' ಆರಂ ಭವೂ ಡೈನೊಸಾರುಗಳ ಹಠಾತ್ ಅಂತ್ಯವೂ ಸರಿಸುಮಾರು ಒಂದೇ ಅವಧಿಯಲ್ಲಿ — ಅಂದಾಜು ೬೫.೦೦೦,೦೦೦ ವರ್ಷಗಳ ಹಿಂದೆ — ಸಂಭವಿಸಿ ದುವು ಎಂಬುದನ್ನು ಗಮನಿಸಿದ ಅಲ್ವಾರಿಸ್ ಈ ಹೊಂದಾಣಿಕೆ ಆಕಸ್ಮಿಕವೇ, ಅಲ್ಲವೇ ಮತ್ತು ಇದರಲ್ಲಿ ಅಂದು ಘಟಿಸಿರಬಹುದಾದ ದುರ್ಘಟ ನೆಯ ಬೆರಳಚ್ಚು ದೊರೆತೀತೇ ಎಂಬ ಅಂಶಗಳನ್ನು ತುಬ್ಬು ಮಾಡಲು ಮುಂದಾದರು.

ಪ್ರತ್ಯೇಕ ಮೂಲಗಳಿಂದ ಇವರಿಗೆ ಆಗ ಬೇರೊಂದು ಸುಳುಹು ಒದಗಿತು: ಕ್ರಿಟೇಶಿ ಯಸ್ ಕಲ್ಪದ ಅಂತ್ಯದಲ್ಲಿ ಭೂಮಿಯಲ್ಲಿಯ ಇರಿಡಿಯಮ್ ಮೊತ್ತ ಇದ್ದಕ್ಕಿದ್ದಂತೆ ೩೦ರಿಂದ ೧೬೦ ಮಡಿ, ಕೆಲವು ಕಡೆ ೪೬೦ ಮಡಿ ಕೂಡ, ಏರಿದುದನ್ನು ಪಳೆಯುಳಿಕೆಗಳು, ಶಿಲಾಸಂಚಯ ಗಳು ಮತ್ತು ಸಾಗರ ನಿಕ್ಷೇಪಗಳು ಸ್ಪಷ್ಟಪಡಿಸಿ ದುವು. ಅಸ್ವಾಭಾವಿಕ ಮರಣಕ್ಕೆ ತುತ್ತಾದ ವ್ಯಕ್ತಿಯ ಶವದಲ್ಲಿ ಶಂಖಪಾಷಾಣದ ಕುರುಹು ಪತ್ತೆಯಾದರೆ ವೈದ್ಯನ ತೀರ್ಮಾನವೇನು? ವ್ಯಕ್ತಿ ಶಂಖಪಾಷಾಣ ವಿಷಪ್ರಾಶನದಿಂದ ಮೃತ ನಾಗಿರುವನು ಎಂದು ತಾನೇ? ಇಂಥ ಒಂದು ಸೂಚನೆ ಆಗ ಅಲ್ವಾರಿಸರಿಗೆ ಸ್ಫುರಿಸಿತು.

ಭೂತಲಕ್ಕೆ ಇರಿಡಿಯಮ್ಮನ್ನು ಊಡುವ ಮೂಲಗಳು ಎರಡು: ಜ್ವಾಲಾಮುಖಿಗಳು ಕಾರುವ ಲಾವಾರಸ, ಉಲ್ಕಾಪಾತದಿಂದ ಒದ ಗುವ ಧೂಳು. ಉಭಯ ಮೂಲಗಳಿಂದಲೂ ಜಮೆಯಾಗುವ ಮೊತ್ತ ಅತ್ಯಲ್ಪ. ಪರಿಸ್ಥಿತಿ ಹೀಗಿರುವಾಗ ಕ್ರಿಟೇಶಿಯಸ್ ಕೊನೆಯಲ್ಲಿ ಇರಿಡಿ ಯಮ್ ಜಮಾವಣೆ ಹಠಾತ್ತನೆ ಏರಬೇಕಾದರೆ ಈ ಮೂಲಗಳ ಪೈಕಿ ಯಾವುದೋ ಒಂದರಲ್ಲಿ (ಅಥವಾ ತೀರ ಅಸಂಭಾವ್ಯ ಸಂದರ್ಭದಲ್ಲಿ ಎರಡ ರಲ್ಲಿಯೂ) ಏನೋ ಆಕಸ್ಮಿಕ ಘಟಿಸಿರಬೇಕೆಂದು ಅಲ್ವಾರಿಸ್ ತರ್ಕಿಸಿದರು. ಜ್ವಾಲಾಮುಖಿಗಳ ಪಾತ್ರವನ್ನು ಸಕಾರಣವಾಗಿ ನಿರಾಕರಿಸಿದ ಬಳಿಕ ಅವರ ಲಕ್ಷ್ಯ ಗಗನದತ್ತ ಹರಿಯಿತು.

ಆಸ್ಫೋಟಿಸಿದ ನಕ್ಷತ್ರವೊಂದು ಭೂಮಿಯ ಮೇಲೆ ಇರಿಡಿಯಮ್ ಮಳೆಗರೆದಿರಬಹುದೇ? ಗಣನೆಗಳು ಈ ವಾದವನ್ನು ತಳ್ಳಿಹಾಕಿದುವು. ಮತ್ತೆ 'ಅಪರಾಧಿ'ಗಳಾಗಿ ಉಳಿದವು ಎರಡು ಮಾತ್ರ: ಧೂಮಕೇತು ಅಥವಾ ಅಪೊಲೊ-ಕಾಯ. ಇವೆರಡರ ಪೈಕಿ ಯಾವುದೋ ಒಂದು ಆಕಸ್ಮಿಕವಾಗಿ ಭೂಮಿಗೆ ಬಡಿದುದರ ಕಾರಣವಾಗಿ ಇಲ್ಲಿಯ ಇರಿಡಿಯಮ್ ಮೊತ್ತ ಆಗ ಹಠಾತ್ತನೆ ಮೇಲಕ್ಕೆ ಜಿಗಿದಿರಬೇಕೆಂದು ಅಲ್ವಾರಿಸ್ ವಾದಿಸಿ ದರು (೧೯೮೦).

ರಿಚರ್ಡ್ ಮುಲ್ಲರ್ ಇವರ ಶಿಷ್ಯ. ಮೂಲತಃ ಇವರು ತಮ್ಮ ಗುರುವಿನ ಚಿಂತನ ಮತ್ತು ತರ್ಕಗ ಳಿಂದ ಪ್ರಭಾವಿತರಾದರೂ ಅವರ ತೀರ್ಮಾನ ವನ್ನು ಮಾತ್ರ ಇವರು ಒಪ್ಪಲಿಲ್ಲ. ಅಥವಾ ಅದರಲ್ಲಿ ಒಂದು ಮಾರ್ಪಾಡು ಸೂಚಿಸಿದರು ಎಂದು ಹೇಳುವುದು ಹೆಚ್ಚು ಯುಕ್ತ.

ಅಲ್ವಾರಿಸರ ವಾದದಲ್ಲಿ ಅಪೊಲೊ ಅಥವಾ ಧೂಮಕೇತು ಕೇವಲ ಯಾದೃಚ್ಛಿಕ ಘಟನೆ ಯಾಗಿ ಪ್ರಕಟವಾಗುತ್ತದೆ. ಅದು ಸಂಭವಿಸಿದುದು ಆಕಸ್ಮಿಕ, ಸಂಭವಿಸದಿರಲು ಸಂದರ್ಭಗಳು ಅಧಿಕ ಎನ್ನುವುದು ಅಧ್ಯಾಹಾರ. ಮುಲ್ಲರ್ ಈ ಯಾದೃಚ್ಛಿಕತೆಯನ್ನು ಒಪ್ಪಿಲ್ಲ. ಇದರ ಬದಲು ಖಚಿತತೆಯನ್ನು ಸೂಚಿಸಿದ್ದಾರೆ. ಇವರ ಈ ನೂತನ ಚಿಂತನಧಾಟಿಗೆ ಪ್ರೇರಣೆ ನೀಡಿದ್ದು ಶಿಕಾಗೊ ವಿಶ್ವವಿದ್ಯಾಲಯದ ಡೇವಿಡ್ ರಾಪ್ ಮತ್ತು ಜೆ. ಜಾನ್ ಸೆಪ್ಕೊಸ್ಕಿ ಮುಂಡಿಸಿದ ಹೊಸ ವಾದ. ಇದರ ಪ್ರಕಾರ ಭೂಮಿಯಲ್ಲಿ ಸಕಲಜೀವಿಗಳೂ ಪ್ರತಿ ೨೬,೦೦೦,೦೦೦ ವರ್ಷ ಗಳ ಕ್ಲುಪ್ತ ಅವಧಿಯಲ್ಲಿ ಸರ್ವನಾಶಹೊಂದು

ತ್ತಿದ್ದುವು. ಇಂಥ ಒಂದು ಸರ್ವನಾಶ ೬೫,೦೦೦,೦೦೦ ವರ್ಷಗಳ ಹಿಂದೆಯೂ ಒಮ್ಮೆ ಸಂಭವಿಸಿತು. ಇದರ ಮುಂದಿನದು ೩೯,೦೦೦,೦೦೦ ವರ್ಷಗಳ ಹಿಂದೆಯೂ ಅನಂತರದ್ದು ೧೩,೦೦೦,೦೦೦ ವರ್ಷಗಳ ಹಿಂದೆಯೂ ಘಟಿಸಿದುವು. ಈ ಚಕ್ರದ ಪ್ರಕಾರ ಮುಂದಿನ ಮಾರಣಹೋಮ ಇನ್ನು (ಕೇವಲ!) ೧೩,೦೦೦,೦೦೦ ವರ್ಷಗಳ ಬಳಿಕ ಭುಗಿಲೇಳಲಿದೆ. ಆದ್ದರಿಂದ ಸದ್ಯ ನಿಶ್ಚಿಂತೆ. ಆದರೂ ತಸ್ಮಾಜ್ಜಾಗ್ರಜಾಗ್ರತಾ!

## ಮೃತ್ಯು ನಕ್ಷತ್ರದ ಯಮಪ್ರಹಾರ

ಮುಲ್ಲರ್ ಯೋಚಿಸಿದರು: ೨೬,೦೦೦,೦೦೦ ವರ್ಷಗಳ ನಿಯತಕಾಲಿಕತೆಗೂ ಆಕಾಶದಲ್ಲಿಯ ಒಂದು ವಿಶೇಷ ಘಟನೆಗೂ ಏನಾದರೂ ಸಂಬಂಧ ಇರಬಹುದೇ? ಇಲ್ಲಿ ಇವರ ನೆರವಿಗೆ ಮಾರ್ಕ್ ಡೇವೀಸ್ ಮತ್ತು ಪೀಟ್ ಹಟ್ ಎಂಬ ಇಬ್ಬರು ಖಗೋಳವಿಜ್ಞಾನಿಗಳು ಬಂದರು. ಇವರೊಂದು ಸ್ವತಂತ್ರ ವಾದ ಮುಂಡಿಸಿದ್ದರು. ಇದರ ಪ್ರಕಾರ ಸೂರ್ಯ ಒಂಟಿ ತಾರೆ ಅಲ್ಲ, ಯಮಳ ವ್ಯವಸ್ಥೆಯ ಒಂದು ಸದಸ್ಯ. ಯಮಳ ವ್ಯವಸ್ಥೆಯಲ್ಲಿ ಸಮ ರಾಶಿಯ ಎರಡು ನಕ್ಷತ್ರಗಳು ಪರಸ್ಪರ ಗುರುತ್ವ ಬಂಧಿತವಾಗಿರುವವು — ಒಂದು ಇನ್ನೊಂದರ ಸುತ್ತ ಪರಿಭ್ರಮಿಸುತ್ತಿರುವ ವಿದ್ಯಮಾನ, ನಭೋಂಗಣದಲ್ಲಿಯ ಅಪ್ಪಾಲೆ ತಿಪ್ಪಾಲೆ ಆಟ. ಸೂರ್ಯನಿಂದ ಈ ಸಂಗಾತಿ ತಾರೆಯ ದೂರ ಸುಮಾರು ೨೧೦,೦೦೦ ಖಮಾ. (ಊರ್ತನ ಮೇಘದ ಹೊರ ಅಂಚಿನ ದೂರ ೧೦೦,೦೦೦ ಖಮಾ.) ಪ್ರತಿ ೨೬-೩೦ ಮಿಲಿಯನ್ ವರ್ಷಗಳಿಗೊಮ್ಮೆ ಸಂಗಾತಿ ತಾರೆ ಊರ್ತನ ಮೇಘದ ಅತಿಸಾಂದ್ರ ಪ್ರದೇಶದ ತೀರ ಸಮೀಪಕ್ಕಾಗಿ ಹಾದುಹೋಗುತ್ತದೆ. ಧೂಮಕೇತುಗಳ ನಿಬಿಡ ಒಕ್ಕೂಟಕ್ಕೆ ಹಠಾತ್ತನೆ ಪ್ರಹಾರವಾಗುವ ಗುರುತ್ವಾಘಾತವಿದು. ಇದರ ಫಲವಾಗಿ ಹಲವು ಲಕ್ಷ ಕಿರಿ, ಮರಿ, ಹಿರಿ, ಭಾರಿ ಧೂಮಕೇತುಗಳು ಒಳ ಸೌರವ್ಯೂಹದೆಡೆಗೆ ಉತ್ಪಾಟಿಸಲ್ಪಡುತ್ತವೆ. ಅಲ್ಲಿಯ ಚಿರಶಾಂತಪ್ರದೇಶಕ್ಕೆ ಬಡಿದ ಮೃತ್ಯು ಪ್ರಹಾರವಿದು. ಎಂದೇ ಈ ನಕ್ಷತ್ರಕ್ಕೆ — ಸೂರ್ಯನ ಸಂಗಾತಿ ನಕ್ಷತ್ರ — ಮೃತ್ಯು ನಕ್ಷತ್ರವೆಂಬ ಹೆಸರು ಅನ್ವರ್ಥಕವಾಗಿದೆ.

ಮೃತ್ಯುನಕ್ಷತ್ರದ ಅನಿರೀಕ್ಷಿತ ತಾಡನೆಯಿಂದ ಚಟಕಿಸಲ್ಪಟ್ಟ ಧೂಮಕೇತುಗಳ ದಂಡು ಕ್ರಮೇಣ ಏರುವ ವೇಗದಿಂದ ಸೂರ್ಯಾಭಿಮುಖವಾಗಿ ಧಾವಿಸುತ್ತದೆ. ಈ ಜೈತ್ರಯಾತ್ರೆಯ ವೇಳೆ ಒಂದಾದರೂ ದೈತ್ಯ ಧೂಮಕೇತು ನೇರ ಭೂಮಿಯನ್ನು ಬಡಿಯುವುದು ಅಸಂಭಾವ್ಯವಲ್ಲ — ಕ್ಷಿಪ್ರ ಚಲನೆಯಲ್ಲಿರುವ ಲಕ್ಷ್ಯಕ್ಕೆ ಹಲವು ನೂರು ಗುಂಡುಗಳನ್ನು ಹೊಡೆದಾಗ ಒಂದಾದರೂ ಗುರಿ ತಾಗುವಂತೆ. ಇಂಥ ಒಂದು ಸಂಭಾವ್ಯ ಘಟನೆ ೬೫,೦೦೦,೦೦೦ ವರ್ಷಗಳ ಹಿಂದೆ ಘಟಿಸಿ ಡೈನೊಸಾರುಗಳು ಸರ್ವನಾಶ ಹೊಂದಿರಬೇಕೆಂಬುದು ಮುಲ್ಲರರ ವಾದದ ಸಾರ. ಅಳ್ವಾರಿಸರ ವಾದದಲ್ಲಿಯ ಅಸಂಭಾವ್ಯತೆ



ಇಲ್ಲಿ ಸಂಭಾವ್ಯತೆಗೆ ಎಡೆಗೊಟ್ಟಿದೆ ಎಂಬುದನ್ನು ಗಮನಿಸಬೇಕು. ಮುಲ್ಲರರ ವಾದ ಮಂಡನೆ ಯಾದದ್ದು ೧೯೮೦ರಲ್ಲಿ.

## ಮುಂದೇನಾಯಿತು ?

ಅಂದು ಏನು ಸಂಭವಿಸಿರಬಹುದು ಎನ್ನುವುದನ್ನು ವಿಜ್ಞಾನಿಗಳು ಊಹಿಸಿದ್ದಾರೆ. ಭೂಮಿ ಸಸ್ಯ ಶ್ಯಾಮಲವಾಗಿತ್ತು. ಮಾನವನ ಅವತಾರ ಆಗಿರಲಿಲ್ಲ. ಡೈನೊಸಾರುಗಳ ಮಹಾಸಾಮ್ರಾಜ್ಯ ವಿಜೃಂಭಿಸುತ್ತಿತ್ತು. ಈ ವರ್ಗದಲ್ಲಿ ಮಾಂಸಾಹಾರಿಗಳೂ ಸಸ್ಯಾಹಾರಿಗಳೂ ಇದ್ದುವು. ತುಂಬಿ ಬಿರಿಯುತ್ತಿದ್ದ ಗಿಡ ಮರಗಳ ಮತ್ತು ನೀರ ಊಟೆಗಳ ಸಮೃದ್ಧಿಯಿಂದ ಸಸ್ಯಾಹಾರಿಗಳು ಯಥೇಚ್ಛ ಆಹಾರ ಸೇವಿಸಿ ಸೊಕ್ಕಿ ಬೆಳೆದುವು. ಇವನ್ನು ಭಕ್ಷಿಸಿ ಮಾಂಸಾಹಾರಿಗಳು ಕೊಬ್ಬಿ ಉಕ್ಕಿದುವು. ಈ ಮಾಂಸಾಹಾರಿಗಳಲ್ಲೇ ವೈರಿಗಳು ಪರಸ್ಪರ ಕಾದಾಡಿ ಮಡಿದು ಸೃಷ್ಟಿಯ ಆಟವನ್ನು ಮುಂದುವರಿಸಿದುವು. ಹೀಗೆ ನಿಸರ್ಗದ ನಿಗೂಢ ಮತ್ತು ಗತ್ಯಾತ್ಮಕ ಸಮತೋಲ ಮುಂದುವರಿಯುತ್ತಿದ್ದಾಗ......

ಅಪೊಲೊ ಕಾಯಗಳ ಲೀಲಾರಂಗವಾದ ಸೂರ್ಯ-ಕ್ಷುದ್ರಗ್ರಹ ಪ್ರದೇಶದಲ್ಲಿ ಯಾವುದೋ ಒಂದು ಕಾಯ ಹಾದಿ ತಪ್ಪಿ ಭೂಗುರುತ್ವ ವಲಯವನ್ನು ಅತಿಕ್ರಮ ಪ್ರವೇಶಿಸಿತು — ತೊಂಡಿದನ ಬೇಲಿ ಮುರಿದು ಒಳಗಿನ ಹಸುರಿನತ್ತ ಮುಸುಡು ಚಾಚುವಂತೆ. ಆ ಕ್ಷಣ ಅದು ಭೂಗುರುತ್ವದ ಕಬಂದಭಾಹುಗಳಿಂದ ತಳದೆಡೆಗೆ ಚೂಷಿಸಲ್ಪಟ್ಟಿತು. ಸುಮಾರು ೧೦ ಕಿಲೊಮೀಟರ್ ವ್ಯಾಸವಿದ್ದಿರಬಹುದಾದ ಈ ಕಲ್ಲುಬಂಡೆ ಸೃಷ್ಟಿಕರ್ತ ಭೂಮಿಗೆ ಘಾತಿಸಿದ ವಜ್ರಕ್ಷಿಪಣಿಯಂತೆ ವಿರುವೇಗದಿಂದ ಬಂದೆರಗಿತು. ಅಥವಾ......

ಮೃತ್ಯುನಕ್ಷತ್ರದಿಂದ ತಾಡಿತವಾದ ಧೂಮಕೇತು ನಿವಾಸದಿಂದ ದೈತ್ಯಗಾತ್ರದ ಒಂದು ಧೂಮಕೇತು ಸೂರ್ಯಾಭಿಮುಖವಾಗಿ ಧಾವಿಸಿತು. ಮಾರ್ಗಮಧ್ಯೆ ಯುರೇನಸ್, ಶನಿ ಮತ್ತು ಗುರು ಗ್ರಹಗಳ — ಇವು ಸೌರವ್ಯೂಹದ ಗಡಿ ಕಾವಲು ಗ್ರಹಗಳು — ಗುರುತ್ವ ಹತಿಗೆ ಈಡಾಗಿ ನೇರ ಭೂಮಿಯೆಡೆಗೆ ಬೀರಲ್ಪಟ್ಟಿತು, ಬಾನ ಬಿಲಿಯರ್ಡ್ ಬಾಲಿನಂತೆ.

ಅದು ಅಪೊಲೊ ಇರಲಿ, ಧೂಮಕೇತುವೇ ಇರಲಿ — ಅದು ಭೂಮಿಗೆ ನೇರ ಬಡಿದು ಇಲ್ಲಿ ಸರ್ವನಾಶಕ್ಕೆ ಕಾರಣವಾದದ್ದಂತೂ ನಿಜ. ಈ ಆಘಾತದಿಂದ ಭೂಮಿ ಏನೂ ತತ್ತರಿಸಿರಲಾರದು. ಏಕೆಂದರೆ ಆನೆಯ ಮೇಲೆ ಸೊಳ್ಳೆ ಎರಗಿದರೆ ಆನೆಗೇನಾದೀತು? ಆದರೆ ಅದರ ಚರ್ಮರೋಮಗಳಲ್ಲಿ ನೆಲಸಿ ಸುಖಜೀವನ ನಡೆಸುತ್ತಿರುವ ಜೀವಿಗಳಿಗೆ ಪ್ರಾಣಾಂತಿಕವಾಗದಿರದು. ಭೂಗಾತ್ರದ ಜೊತೆ ಹೋಲಿಸುವಾಗ ಸಾಕ್ಷಾತ್ ಹಿಮಾಲಯವೂ ರೋಮಸದೃಶ ಸೂಕ್ಷ್ಮಕಾಯವಾಗುವುದೆಂದಾದ ಬಳಿಕ ಎಂಥ ಡೈನೊಸಾರಾದರೂ ಏನು ಸಾಪೇಕ್ಷಗಾತ್ರ ತಾನೇ ಪಡೆದೀತು?

ಅದು ಬಂದೆರಗಿತು — ಪ್ರಳಯ ರುದ್ರನ ವಿಲಯ ತಾಂಡವದಂತೆ. ಅದರ ಆಘಾತದ ಪ್ರತಾಪ ಎಷ್ಟಿದ್ದಿರಬಹುದು ಗೊತ್ತೇ? ಇಂದು ಪ್ರಪಂಚದಲ್ಲಿರುವ ನ್ಯೂಕ್ಲಿಯರ್ ಬಾಂಬ್ ಎಲ್ಲವನ್ನೂ ಏಕಕಾಲದಲ್ಲಿ ಒಂದೆಡೆಯಲ್ಲಿ



"ನಿಮ್ಮ ಭಾವನಿಗೆ ನಿನ್ನನ್ನು ಕಂಡ್ರೆ ಬೆಲ್ಲ ಕಂಡ ಹಾಗೆ ಆಗುತ್ತಂತೆ. ಅದಕ್ಕೆ ನೀ ಬೇಗನೇ ಊರಿಗೆ ಹೊರಟು ಹೋದ್ರೆ ಚಲೋ ತಂಗೆ..."

ಆಸ್ಫೋಟಿಸಿದಾಗ ಯಾವ ಪ್ರಮಾಣದ ಶಕ್ತಿ ಉತ್ಪಾದನೆ ಆದೀತೋ ಆದರೆ ೧೦,೦೦೦ ಪಟ್ಟು. ಈ ಹಠಾತ್ ತಾಡನೆಯ ಪರಿಣಾಮವಾಗಿ ವಾಯುಮಂಡಲದಲ್ಲಿ ಪ್ರಚಂಡ ಕ್ಷೋಭೆ ಉದ್ಭವಿಸಿತು — ಸಮುದ್ರ ಮಥನದಂತೆ. ನೆಲದಲ್ಲಿ ಛೇದಗೊಂಡ ಅಗಾಧ ಕಮರಿಯಿಂದ ಮಣ್ಣು ಧೂಳು ಅನಿಲ ಗಗನಕ್ಕೆ ಚಿಮ್ಮಿದುವು — ಹಲವು ನೂರು ಸಾವಿರ ಜ್ವಾಲಾಮುಖಿಗಳು ಏಕಕಾಲದಲ್ಲಿ ಲಾವಾ ಕಾರಿದಂತೆ. ಆಗ ಸಂಭವಿಸಿದ ಜಲ, ನೆಲ ಮತ್ತು ವಾಯು ಕಂಪನಗಳು ಭೂತಲವನ್ನು ಒಂದೇ ಬೀಸಿಗೆ ಸವರಿ ಬರಗಿ ನೆಕ್ಕಿ ನೀರ್ಗುಡಿದವು - ಹಸಿವಿನ ಭೂತದಿಂದ ಕಂಗಾಲಾದ ಕುಂಭಕರ್ಣ ಎದುರಿಗೆ ಸಿಕ್ಕಿದ್ದನ್ನು ಸ್ವಾಹಾಕರಿಸಿದಂತೆ.

ಈ ದುರ್ಘಟನೆ ಕೊನೆಗೊಂಡಾಗ ಉಳಿದದ್ದೇನು? ದೈತ್ಯ ಕಾಯಗಳ ಸರ್ವನಾಶ. ಚಿಕ್ಕ ಪುಟ್ಟ ಮರಗಿಡಗಳು ಮತ್ತು ಪಶುಪಕ್ಷಿಗಳು ಉಳಿದಿದ್ದರೂ ಅವುಗಳಿಗೆ ಆಹಾರ ದೊರೆಯದಿದ್ದಂಥ ತೀವ್ರಕ್ಷಾಮ. ಸಿಹಿನೀರಿಲ್ಲದ ಬಂಜರು. ನೇಸರಿಗೆ ತೆರೆಹಿಡಿದ ದೂಳಿನ ದಟ್ಟ ಮೋಡ. ಹೀಗಾಗಿ ಹಲವು ವರ್ಷ ಪರ್ಯಂತ ಭೂತಳಕ್ಕೆ ಸೂರ್ಯರಶ್ಮಿಯ ಸ್ಪರ್ಶವೇ ಇಲ್ಲ. ತತ್ಪರಿಣಾಮವಾಗಿ ಸಹಜವಿಕಾಸಕ್ರಿಯೆ ಕುಂಠಿತವಾಯಿತು. ಹಸಿವು ನೀರಡಿಕೆಗಳಿಂದ ಜರ್ಜರಿತವಾದ ಪ್ರಾಣಿಗಳು ಸಿಕ್ಕಿದುದನ್ನು ತಿಂದು ಕುಡಿಯುವ ಸರ್ವಭಕ್ಷಿಗಳಾದುವು. ಅಳಿದುಳಿದ ಡೈನೊಸಾರುಗಳು ಸ್ವಜಾತಿ ಭಕ್ಷಿಗಳಾಗಿ ಕ್ರಮೇಣ ಅವುಗಳ ಕುಲ ನಿಶ್ಶೇಷವಾಗಿ ಹೋಯಿತು. ಭೂಮಗಾತ್ರದ ಆದರೆ ಮೊದ್ದು ಚಟುವಟಿಕೆಯ ಈ ಜಂಗಮ ವೈಚಿತ್ರ್ಯಗಳು ಹೀಗೆ ಬದುಕಿನ ಹೋರಾಟದಲ್ಲಿ ಸೋತು ನಿರ್ವಂಶಿಗಳಾದುವು.

ವರ್ಷಗಳು ಉರುಳಿದವು. ಭೂಮಿಯನ್ನು ಮುಸುಕಿದ್ದ ಶುಕ್ರಸದೃಶ ಅನಿಲಾವರಣ ಕ್ರಮೇಣ ಮರೆಯಾಯಿತು. ಮಾಲಿನ್ಯವಿಮೋಚಿತ ವಾಯುಮಂಡಲದ ಮೂಲಕ ಜೀವಪ್ರೇರಕ ಸೌರವಿಕಿರಣ ಜಿನುಗಿ ನೆಲ ಜಲ ಸೋಂಕಿ ಮತ್ತೆ ಜೈವಿಕ ಪ್ರಕ್ರಿಯೆಗಳನ್ನು ಚಾಲೂಗೊಳಿಸಿತು. ಈ ನೆರಳು ಬೆಳಕು ಹಿಡಿವಾಟ ಮುಂದುವರಿದಂತೆ ವಿಕಾಸಕ್ರಿಯೆ ಹೊಸ ಜಾಡಿನಲ್ಲಿ ಹರಿಯಿತು. ಹೊಸ ಸಸ್ಯ ಪ್ರಾಣಿಗಳ ಉದಯಕ್ಕೆ ಕಾರಣವಾಯಿತು. ಹೊಸ ದಾಖಲೆಯನ್ನೇ ಸೃಷ್ಟಿಸಿತು. ಬದಲಾದ ಈ ಭೂಮಿಯ ಮುಖದಲ್ಲಿ ಡೈನೊಸಾರುಗಳಿಗೆ ಎಡೆ ಇರಲಿಲ್ಲ. ಹೀಗಾಗಿ ಇಂದು ಅವು ಪಳೆಯುಳಿಕೆಗಳಾಗಿ ಮಾತ್ರ ಉಳಿದಿವೆ ಅಷ್ಟೆ.

ಇನ್ನೂ ಪೂರ್ಣವಾಗಿ ಸಾಬೀತಾಗದ, ಆದರೆ ಲಭ್ಯ ಮಾಹಿತಿಗಳನ್ನು ತಾರ್ಕಿಕವಾಗಿ ವಿವರಿಸುವ, ಈ ಮೇಲಿನ ವಾದದಲ್ಲಿ ಇರಿಡಿಯಮ್ಮಿನ ಪಾತ್ರವೇನು? ಭೂಚರಿತ್ರೆಯ ಒಂದು ಪರ್ವಕಾಲದಲ್ಲಿ ಇರಿಡಿಯಮ್ಮಿನ ಪ್ರಮಾಣ ಹಠಾತ್ತನೆ ಏರಿದುದು ಸಂಶೋಧಕರ ಗಮನಕ್ಕೆ ಬಂದಿತು— ಉಲ್ಕಾಧೂಳಿನಿಂದ ಮತ್ತು ಜ್ವಾಲಾಮುಖಿ ಉತ್ಪಾಟನೆಯಿಂದ ಜಮೆಯಾಗುವ ಇರಿಡಿಯಮ್ ಪ್ರಮಾಣಕ್ಕಿಂತ ಇದು ಹಲವು ಮಡಿ ಜಾಸ್ತಿ ಇತ್ತು. ಅದೇ ಸಂದರ್ಭದಲ್ಲಿ ಡೈನೊಸಾರುಗಳ ಸಂತತಿ ಅಳಿದು ಹೋಯಿತೆಂದೂ ತಿಳಿಯಿತು. ಈ ಘಟನೆಗಳನ್ನು ಬೆಸೆಯುವ ದಿಶೆಯಲ್ಲಿ ವೈಜ್ಞಾನಿಕ ಚಿಂತನೆ ಹರಿದು ಸದ್ಯಕ್ಕೆ ಮೇಲಿನ ಎರಡು ವಾದಗಳಲ್ಲಿ ಪರ್ಯವಸಾನಗೊಂಡಿದೆ. ಹೀಗೆ ಇರಿಡಿಯಮ್ಮಿನ ಪಾತ್ರ ಇಲ್ಲಿ ಚಿಂತನಪ್ರೇರಕ.

ಡೈನೊಸಾರುಗಳ ಹಠಾತ್ ನಿಧನ ಸಂಭವಿಸದೇ ಇದ್ದಿದ್ದರೆ ವಿಕಾಸಕ್ರಿಯೆ ಯಾವ ಜಾಡಿನಲ್ಲಿ ಸಾಗಿರುತ್ತಿತ್ತು ಎಂಬ ಕುತೂಹಲಕರ ಪ್ರಶ್ನೆಯನ್ನು ಮುಲ್ಲರ್ ಎತ್ತಿ ಉತ್ತರವಿತ್ತಿದ್ದಾರೆ: ಆ ಸಂದರ್ಭದಲ್ಲಿ ಸ್ತನಿಗಳು ಎಂದೂ ಧರೆಯಲ್ಲಿ ತಮ್ಮ ಒಡೆತನ ಸ್ಥಾಪಿಸಿರುತ್ತಿರಲಿಲ್ಲ; ಆಗ ಬುದ್ಧಿವಂತಿಕೆ (ಇಂಟಲಿಜನ್ಸ್) ಡೈನೊಸಾರ್ ಪಥದಲ್ಲಿ ಮುಂದುವರಿದಿರುತ್ತಿತ್ತು; ಮತ್ತು ಇದರ ಫಲವಾಗಿ ಇಂದು ಭೂಮಿಯ ಮೇಲೆ ಸ್ತನಿ ಲಕ್ಷಣಗಳ ಬುದ್ಧಿವಂತ ಪ್ರಾಣಿಯಾದ ಮಾನವ ಇರುವುದರ ಬದಲು ಸರೀಸೃಪ ಲಕ್ಷಣಗಳ ಬುದ್ಧಿವಂತ ಪ್ರಾಣಿಯೊಂದು ವಿಜೃಂಭಿಸಿರುತ್ತಿತ್ತು. ✡

# ಮದ್ಯಪಾನ: ಪ್ರಾಚೀನರು ಕಂಡಂತೆ

ಪುಂಡಿಕ್ಕಾಯ್ ಗಣಪಯ್ಯ ಭಟ್

"ಚತುರ್ವೇದಗಳನ್ನು ತೂಕದ ತಟ್ಟೆಯೊಂದರಲ್ಲಿರಿಸಿ ಇನ್ನೊಂದರಲ್ಲಿ ಬ್ರಹ್ಮಚರ್ಯವನ್ನಿರಿಸಿದಲ್ಲಿ ಅವೆರಡರದು ಸಮಭಾರ; ಅಂತೆಯೆ ಸರ್ವಪಾತಕಗಳನ್ನೂ ಒಂದು ತಟ್ಟೆಯಲ್ಲಿರಿಸಿ ಇನ್ನೊಂದರಲ್ಲಿ ಮದ್ಯಪಾನವನ್ನಿರಿಸಿದಲ್ಲಿ ಅವೆರಡರದು ಸಮತೂಕ"—ಇದೊಂದು ಪ್ರಾಚೀನ ಹೇಳಿಕೆ. ಮದ್ಯಪಾನವನ್ನು ಪ್ರಾಚೀನ ಭಾರತೀಯರು ಎಲ್ಲ ಪಾತಕಗಳಿಗಿಂತ ಮಿಗಿಲಾದ ಪಾತಕವೆಂದು ಗಣಿಸಿದ್ದರೆಂಬ ವಿಚಾರ ಮೇಲಿನ ಹೇಳಿಕೆಯಿಂದ ಸ್ಪಷ್ಟ. ಮದ್ಯಪಾನ ಕುರಿತ ನಮ್ಮ ಪ್ರಾಚೀನರ ಅಭಿಪ್ರಾಯಗಳನ್ನು ಪರಂಪರಾಗತವಾಗಿ ಬಂದ ಹೇಳಿಕೆಗಳು, ಪ್ರಾಚೀನ ಸಾಹಿತ್ಯ ಕೃತಿಗಳು ಹಾಗೂ ಧರ್ಮಗ್ರಂಥಗಳು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತವೆ.

ವೈದಿಕ ಸಾಹಿತ್ಯ ಭಾರತದ ಪ್ರಾಚೀನತಮ ಸಾಹಿತ್ಯ ಎಂಬುದು ನಿರ್ವಿವಾದ. ಇದರಲ್ಲಿ ಮದ್ಯಪಾನಕ್ಕೆ ಸಂಬಂಧಿಸಿದಂತೆ ಹಲವು ಕುತೂಹಲಕರ ವರ್ಣನೆಗಳಿವೆ. ವೈದಿಕ ಸಾಹಿತ್ಯದಲ್ಲಿ ಮುಖ್ಯವಾಗಿ ಪ್ರಸ್ತಾಪಿಸಲಾದ ಪಾನೀಯಗಳು 'ಸೋಮ' ಮತ್ತು 'ಸುರಾ.' ಸೋಮ ಎಂಬುದು ಯಜ್ಞ ಮುಖೇನ ದೇವತೆಗಳಿಗೆ ಅರ್ಪಿಸಲಾಗುತ್ತಿದ್ದ ಉತ್ಸಾಹಕಾರೀ ಪಾನೀಯ. ಸೋಮ ಸಸ್ಯ ರಸದಿಂದ ತಯಾರಾದ ಸೋಮ ರಸ ದೇವತೆಗಳನ್ನು ತೃಪ್ತಿಪಡಿಸುತ್ತದೆ ಹಾಗೂ ಅವರ ಶಕ್ತಿಯನ್ನು ವರ್ಧಿಸುತ್ತದೆ ಎಂದು ವೈದಿಕ ಸಾಹಿತ್ಯದಲ್ಲಿ ವಿವರಿಸಲಾಗಿದೆ.

ಸೋಮರಸದ ಗುಣ ವಿಶೇಷಗಳ ಕುರಿತು ವಿದ್ವಾಂಸರಲ್ಲಿ ಏಕಮತವಿಲ್ಲ. ಇದು ಒಂದು ಅಮಲ ತರಿಸುವ ಪಾನೀಯವಾಗಿತ್ತು ಎಂಬುದು ಕೆಲವರ ಅಭಿಪ್ರಾಯ. ಇದಕ್ಕೆ ವಿರುದ್ಧವಾಗಿ ಸೋಮರಸ ಅಮಲು ತರಿಸುವ ಪಾನೀಯವಲ್ಲ, ಅದು ಶಕ್ತಿವರ್ಧಕ, ಉತ್ಸಾಹದಾಯಕ ಪೇಯ ಎಂಬ ವಾದವೂ ಇದೆ. ಅದೇನೇ ಇರಲಿ, ವೈದಿಕ ಸಾಹಿತ್ಯದಲ್ಲಿ ಹೆಸರಿಸಲಾದ ಸುರಾ ಒಂದು ಅಮಲು ತರಿಸುವ ಪಾನೀಯವಾಗಿತ್ತು ಎಂಬುದರ ಕುರಿತು ಎರಡು ಮಾತಿಲ್ಲ. ಈ ಪಾನೀಯವನ್ನು ಆರಂಭದಿಂದಲೇ ವಿರೋಧಿಸಲಾಗುತ್ತಿತ್ತು ಎಂಬ ವಿಚಾರ ವೈದಿಕ ಸಾಹಿತ್ಯದಲ್ಲಿ ಕಂಡುಬರುವ ಹಲವು ಹೇಳಿಕೆಗಳಿಂದ ಖಚಿತವಾಗುತ್ತದೆ. 'ಶತಪಥ ಬ್ರಾಹ್ಮಣ' ದ ಪ್ರಕಾರ ಸೋಮ ಎಂಬುದು ಸತ್ಯ, ಬೆಳಕು ಹಾಗೂ ಸಂತುಷ್ಟಿ; ಸುರಾ ಎಂಬುದು ಅಸತ್ಯ, ಅಂಧ

ಕಾರ ಹಾಗೂ ಅಶಾಂತಿ.

ವೈದಿಕ ಯುಗದಲ್ಲಿ ಸುರೆಯನ್ನು 'ದುರ್ಮದ' ಎಂಬ ಹೆಸರಿನಿಂದಲೂ ಗುರುತಿಸಲಾಗುತ್ತಿತ್ತು. ಅಂದರೆ, ಇದು ಮಾನಸಿಕ ಶಾಂತಿಯನ್ನು ಕೆಡಿಸಬಲ್ಲ ಅಮಲು ಪಾನೀಯ ಎಂಬುದು ಇಲ್ಲಿ ಸೂಚ್ಯ. ಸುರಾಪಾನವನ್ನು ತೀವ್ರವಾಗಿ ವಿರೋಧಿಸಲು ಇದೇ ಕಾರಣ. ಸುರಾಪಾನವನ್ನು ಜೂಜಾಟ, ಮಾಂಸ ಭಕ್ಷಣ ಮುಂತಾದ ದುರ್ವ್ಯಸನಗಳ ಸಾಲಿಗೆ ಸೇರಿಸಲಾಗಿದೆ ಅಥರ್ವ ವೇದದಲ್ಲಿ. "ಸುರಾಪಾನ ಮಾಡಿದವರು ವಿನಾಕಾರಣ ತಮ್ಮ ತಮ್ಮೊಳಗೇ ಕಾದಾಡುತ್ತಾರೆ, ಅಲ್ಲದೆ ಇದರ ಸೇವನೆಯಿಂದ ದೈಹಿಕ ಬಲ ಕುಂದುವುದರಿಂದ ಅವರು ಅಕಾಲ ವೃದ್ಧಾಪ್ಯಕ್ಕೆ ಗುರಿಯಾಗುತ್ತಾರೆ"–ಇದು ಸುರಾಪಾನದ ದುಷ್ಪರಿಣಾಮಗಳ ಕುರಿತು ಋಗ್ವೇದದಲ್ಲಿ ಬರುವ ವರ್ಣನೆ.

ಸುರಾಪಾನವನ್ನು ಪಂಚ ಮಹಾಪಾತಕಗಳಲ್ಲೊಂದು ಎಂದು ಗಣಿಸಲಾಗಿದೆ ಛಾಂದೋಗ್ಯ ಉಪನಿಷತ್ತಿನಲ್ಲಿ. ಕಳ್ಳತನ, ಬ್ರಹ್ಮಹತ್ಯೆ ಸುರಾಪಾನ, ಪರಸ್ತ್ರೀ ಸಂಗ ಮತ್ತು ಇಂಥವರ ಒಡನಾಟ–ಇವೇ ಆ ಪಂಚ ಮಹಾಪಾತಕಗಳು. ಸುರಾಪಾನ ಹಾಗೂ ಜೂಜಾಟಗಳನ್ನು ಪಂಚ ಮಹಾಪಾತಕಗಳ ಗುಂಪಿಗೆ ಸೇರಿಸಿದ್ದನ್ನು ವೈದಿಕ ಸಾಹಿತ್ಯದಲ್ಲಿ ಹಲವೆಡೆ ಕಾಣುತ್ತೇವೆ. "ಮಾನವನು ತನ್ನ ಸ್ವಂತ ಬುದ್ಧಿ ಸಾಮರ್ಥ್ಯದಿಂದ ಪಾಪ ಕಾರ್ಯಗಳಲ್ಲಿ ತೊಡಗುವುದಿಲ್ಲ, ಬದಲಾಗಿ ಆತನ ಎಲ್ಲ ಪಾಪ ಕಾರ್ಯಗಳಿಗೂ ಕಾರಣ" ಎಂದು ವಸಿಷ್ಠನು ವರುಣದೇವನೊಂದಿಗೆ ಬಿನ್ನವಿಸುವ ಪ್ರಸಂಗವಿದೆ ಋಗ್ವೇದದಲ್ಲಿ.

ಭಾರತದ ಪ್ರಾಚೀನ ಧರ್ಮಸೂತ್ರಕಾರರು ಮದ್ಯಪಾನವನ್ನು ಏಕಕಂಠದಿಂದ ವಿರೋಧಿಸಿದ್ದಲ್ಲದೆ ಅದರ ಸೇವನೆ ನಿಷೇಧಾರ್ಹ ಎಂದು ಸಾರಿದ್ದಾರೆ. ಬೌಧಾಯನನ ಮತದಂತೆ ಅದು ಮಹಾಪಾತಕಗಳಲ್ಲೊಂದು. ಮದ್ಯಪಾನಿಯಾದ ಬ್ರಾಹ್ಮಣನಿಗೆ ಆತನ ಹಣೆಯಲ್ಲಿ ಪಾನಪಾತ್ರೆಯ ಮುದ್ರೆಯೊತ್ತಿ ದೇಶಭ್ರಷ್ಟನನ್ನಾಗಿಸುವುದೇ ಮುಂತಾದ ಕಟು ಶಿಕ್ಷೆಗಳನ್ನು ವಿಧಿಸುವಂತೆ ಸೂಚಿಸಿದ್ದಾರೆ ಧರ್ಮಸೂತ್ರಕಾರರು.

ಭಾರತದ ಪ್ರಾಚೀನ ಕೃತಿಗಳಲ್ಲೊಂದಾದ ಮಹಾಭಾರತದಲ್ಲಿ ಮದ್ಯಪಾನ ಕುರಿತಂತೆ ಹಲವಾರು ಕುತೂಹಲಕರ ವಿವರಣೆಗಳಿವೆ. ಆದಿಪರ್ವದಲ್ಲಿ ಬ್ರಾಹ್ಮಣರಿಗೆ ಮದ್ಯಪಾನ ನಿಷೇಧ ಎಂಬ ಶುಕಮುನಿಗಳ ಹೇಳಿಕೆಯಿದೆಯಲ್ಲದೆ ಬ್ರಾಹ್ಮಣರು ಮದ್ಯಪಾನ ಮಾಡುವುದು ಬ್ರಹ್ಮಹತ್ಯಾ ಪಾತಕಕ್ಕೆ ಸಮ ಎನ್ನಲಾಗಿದೆ. ಶಾಂತಿಪರ್ವದಲ್ಲಿ ಒಂದೆಡೆ ಯಾವನು ಹುಟ್ಟಿನಿಂದಲೇ ಸುರಾಪಾನ–ಮಾಂಸಾಹಾರ ವರ್ಜಿತನೋ ಆತನು ಸರ್ವಸಂಕಷ್ಟಗಳಿಂದಲೂ ಮುಕ್ತನಾಗಬಲ್ಲ ಎಂಬ ಹೇಳಿಕೆಯಿದೆ, ಯಾವನೇ ಬ್ರಾಹ್ಮಣನು ತನ್ನ ಪ್ರಾಣಾಪಾಯ ಸಂದರ್ಭದಲ್ಲಾಗಲಿ ಅಜ್ಞಾನದಿಂದಾಗಲಿ ಸುರಾಪಾನ ಮಾಡಿದಲ್ಲಿ ಆತನು ಪುನಃ ಉಪನಯನ ಕರ್ಮ ಕೈಕೊಳ್ಳಬೇಕು ಎಂದು ವಿಧಿಸಲಾಗಿದೆ ಇಲ್ಲಿ.

ಅನುಶಾಸನ ಪರ್ವದ ೧೪೫ ನೇ ಅಧ್ಯಾಯದಲ್ಲಿ ಬರುವ ಭೀಷ್ಮ—ಯುಧಿಷ್ಠಿರರ ಸಂವಾದ ಸಂದರ್ಭದಲ್ಲಿ ಮದ್ಯಪಾನದ ದುಷ್ಪರಿಣಾಮಗಳ ಕುರಿತಂತೆ ವಿಶೇಷವಾದ ವರ್ಣನೆಯಿದೆ. ಭೀಷ್ಮನು ಯುಧಿಷ್ಠಿರನಿಗೆ ಹೇಳುತ್ತಾನೆ—"ಮದ್ಯಪಾನದ ಪ್ರಭಾವಕ್ಕೊಳಗಾದವರು ವಿಕಲಮತಿಗಳಂತೆ ವರ್ತಿಸಲಾರಂಭಿಸುವರು. ಕೆಲವರು ವಿನಾಕಾರಣ ನಗಾಡುತ್ತಾರೆ, ಇನ್ನು ಕೆಲವರು ಅಸಂಬದ್ಧ ಪ್ರಲಾಪದಲ್ಲಿ ತೊಡಗುತ್ತಾರೆ; ನೃತ್ಯನಿರತರಾಗುತ್ತಾರೆ, ಅರ್ಥಹೀನ ಹಾಡಿನ ಮಗ್ನರಾಗುತ್ತಾರೆ. ಮದ್ಯಪಾನದ ಗುಲಾಮರಾಗುವವರು ಪಾಪಿಗಳೇ ಸರಿ. ಮದ್ಯವು ತಾಳ್ಮೆ, ಸಹನೆ, ತಿಳುವಳಿಕೆಗಳಿಗೆ ವಿನಾಶಕಾರಿ. ತಮ್ಮ ಇಂದ್ರಿಯಗಳ ಮೇಲಿನ ಹಿಡಿತವನ್ನೇ ಕಳೆದುಕೊಳ್ಳುವುದರಿಂದ ಮದ್ಯಪಾನಿಗಳಿಗೆ ಯಾವುದು ಸರಿ, ಯಾವುದು ತಪ್ಪು ಎನ್ನುವ ಪ್ರಜ್ಞೆಯೇ

ಇರಲಾರದು. ಅವರು ಸ್ತ್ರೀಯರ ಮಾನಹರಣ ದಂತಹ ಕುಕೃತ್ಯಗಳಿಗೂ ಹೇಸಲಾರರು. ಆದ್ದರಿಂದ ಯಾವನು ಸ್ವಕ್ಷೇಮದ ಕುರಿತು ಕಾಳಜಿ ವಹಿಸುತ್ತಾನೋ ಆತನು ಮದ್ಯಪಾನದ ವ್ಯಸನಿಯಾಗಲೇಬಾರದು."

ಸುರಾಪಾನ ದುಷ್ಪರಿಣಾಮಕ್ಕೆ ಸಂಬಂಧಿಸಿದಂತೆ ಅತ್ಯಂತ ಸ್ವಾರಸ್ಯಕರ ಘಟನೆಯೊಂದರ ವರ್ಣನೆಯಿದೆ ಮೌಸಲ ಪರ್ವದಲ್ಲಿ. ಸುರಾಪಾನ ದಂತಹ ಒಂದು ಕ್ಷುಲ್ಲಕ ವಿಚಾರವು ಹೇಗೆ ಯಾದವ ಕುಲನಾಶಕ್ಕೇ ಮೂಲವಾಯಿತು ಎಂಬುದನ್ನು ಈ ಘಟನೆಯಿಂದ ಅರಿತುಕೊಳ್ಳಬಹುದು. ಯಾದವ ಪಂಗಡದ ವೃಷ್ಣಿ ಮತ್ತು ಅಂಧಕರು ದ್ವಾರಕೆಯಿಂದ ಪ್ರಭಾಸಕ್ಕೆ ವಿಹಾರ ಯಾತ್ರೆಗೆ ಹೋದ ಸಂದರ್ಭ. ಮದ್ಯಪಾನ ಮತ್ತರಾದ ಸಾತ್ಯಕಿ ಮತ್ತು ಕೃತವರ್ಮರ ನಡುವೆ ಹೊಡೆದಾಟ ಪ್ರಾರಂಭವಾಗುತ್ತದೆ. ಈ ಹೊಡೆದಾಟವೇ ನಂತರ ಯಾದವ ಪಂಗಡಗಳೊಳಗಿನ ಹೋರಾಟಕ್ಕೆ ಹೇತುವಾಗಿ ಅಂತಿಮವಾಗಿ ಯಾದವಕುಲ ನಾಶಕ್ಕೇ ಕಾರಣವಾಗುತ್ತದೆ. ಪಾನಮತ್ತರಾದ ಯಾದವರು ತಂದೆ-ಮಕ್ಕಳು, ಅಣ್ಣತಮ್ಮಂದಿರು ಎಂಬ ಭೇದವಿಲ್ಲದೆ ತಮ್ಮ ತಮ್ಮೊಳಗೇ ಹೋರಾಡುತ್ತ ನಾಶ ಹೊಂದುತ್ತಾರೆ. ಈ ವಾರ್ತೆಯನ್ನು ದಾರುಕನ ಮೂಲಕ ಯುಧಿಷ್ಠಿರನಿಗೆ ತಿಳಿಸುತ್ತ ಶ್ರೀಕೃಷ್ಣ ನಾಡಿದ ಈ ಮಾತು ಗಮನಾರ್ಹ— "ಯಾದವ ವೀರರು ಎಷ್ಟು ಹೀನ ಮಟ್ಟಕ್ಕೆ ಇಳಿದಿದ್ದಾರೆಂದರೆ ಅವರ ನಾಶಕ್ಕೆ ಕೇವಲ ಒಂದು ಪಾನಪಾತ್ರೆಯೇ ಕಾರಣವಾಗುವ ಸ್ಥಿತಿ ಬಂತು."

ಸಮಕಾಲೀನ ಸಮಾಜದ ಧಾರ್ಮಿಕ, ನೈತಿಕ ನಡವಳಿಕೆ-ನಂಬಿಕೆಗಳನ್ನು ಬಿಂಬಿಸುವ ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ ಮುಂತಾದ ಕೃತಿಗಳಲ್ಲೂ ಮದ್ಯಪಾನದ ಕುರಿತು ತಿರಸ್ಕಾರ ಎದ್ದು ಕಾಣಿಸುತ್ತದೆ. ಮದ್ಯಪಾನವನ್ನು ವಿರೋಧಿಸುವ, ಮದ್ಯಪಾನಾಸಕ್ತರಿಗೆ ಕಟು ಶಿಕ್ಷೆಗಳನ್ನು ವಿಧಿಸುವ, ಮದ್ಯಪಾನವನ್ನು ಮಹಾಪಾತಕಗಳಲ್ಲಿ ಒಂದು ಎಂದು ಗಣಿಸುವ ಅಭಿಪ್ರಾಯ ಈ ಕೃತಿಗಳಲ್ಲಿ ವ್ಯಕ್ತವಾಗಿದೆ.

ಪ್ರಾಚೀನ ಭಾರತದ ಆಡಳಿತ ವ್ಯವಸ್ಥೆಗೆ ಕನ್ನಡಿ ಹಿಡಿಯುವ ಕೌಟಿಲ್ಯನ ಅರ್ಥಶಾಸ್ತ್ರ ಮೌರ್ಯ ಯುಗದಲ್ಲಿ ರಚಿತವಾದ ಒಂದು ಅಮೂಲ್ಯ ಕೃತಿ. ಇದರಲ್ಲಿ ಮದ್ಯಪಾನವನ್ನು ಚತುರ್ವಿಧ ವ್ಯಸನಗಳಲ್ಲಿ ಒಂದು ಎಂದು ನಿರೂಪಿಸಲಾಗಿದೆ. ಬೇಟೆಗಾರಿಕೆ, ಜೂಜಾಟ, ಹಾಗೂ ಪರಸ್ತ್ರೀ ಸಂಗ ಇವು ಇನ್ನುಳಿದ ಮೂರು ವ್ಯಸನಗಳು. ಈ ಪೈಕಿ ಅತ್ಯಂತ ಕೆಟ್ಟ ವ್ಯಸನ ಯಾವುದು ಎಂದು ವಿಶ್ಲೇಷಿಸುತ್ತ ಮದ್ಯಪಾನವೇ ಇತರ ಎಲ್ಲಾ ವ್ಯಸನಗಳಿಗೂ ಮೂಲ ಎಂಬ ತೀರ್ಮಾನಕ್ಕೆ ಬರುತ್ತಾನೆ ಕೌಟಿಲ್ಯ. ಚತುರ್ವಿಧ ವ್ಯಸನಗಳ ದುಷ್ಪರಿಣಾಮಗಳ ಹೋಲಿಕೆಯಿಂದ ಬೇಟೆಗಿಂತ ಜೂಜಾಟ ಕೆಟ್ಟದ್ದು, ಜೂಜಾಟಕ್ಕಿಂತ ಪರಸ್ತ್ರೀ ಸಂಗ ಕೀಳು, ಪರಸ್ತ್ರೀ ಸಂಗಕ್ಕಿಂತಲೂ ಮದ್ಯಪಾನ ವ್ಯಸನ ಕೆಟ್ಟದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ 'ಅರ್ಥ ಶಾಸ್ತ್ರ'ದಲ್ಲಿ. ಮದ್ಯಪಾನದ ದುಷ್ಪರಿಣಾಮಗಳನ್ನು ಪಟ್ಟಿಮಾಡುತ್ತ ಕೌಟಿಲ್ಯನು ಧನನಷ್ಟ, ಜೀವಹಾನಿ, ಬುದ್ಧಿಮಾಂದ್ಯ, ಸ್ನೇಹನಾಶ, ಪ್ರೇತಕಳೆ, ನಗ್ನತೆ ಹಾಗೂ ನೋವುಗಳನ್ನು ಹೆಸರಿಸುತ್ತಾನೆ.

ವೈದಿಕ ಸಾಹಿತ್ಯದ ತಾತ್ವಿಕ ಸಾರವನ್ನು ಕತೆಗಳ ಹಾಗೂ ಸಂವಾದಗಳ ಮೂಲಕ ಸಾರುವ ಜನಪ್ರಿಯ ಕೃತಿರತ್ನಗಳು ಪುರಾಣಗಳು. ಇವುಗಳ ನೈತಿಕ ಮಹತ್ವ ಅಪಾರವಾದದ್ದು. ಸಂಖ್ಯೆಯಲ್ಲಿ ಇವು ಒಟ್ಟು ಹದಿನೆಂಟು. ಈ ಪುರಾಣಗಳ ಕೃತಿಕಾರರು ಕೂಡ. ಮದ್ಯಪಾನದ ಕುರಿತ ತಮ್ಮ ವಿರೋಧವನ್ನು ವ್ಯಕ್ತಪಡಿಸುವಲ್ಲಿ ಹಿಂದುಳಿದಿಲ್ಲ. ಯದುಕುಲ ನಾಶಕ್ಕೆ ಮದ್ಯಪಾನ ಮತ್ತತೆಯೇ ಮೂಲವಾದ ಘಟನೆಯ ವಿಶ್ಲೇಷಣೆಯಿದೆ ಭಾಗವತ ಪುರಾಣದಲ್ಲಿ. ಶ್ರೀ ದೇವೀ ಭಗವದ್ ಪುರಾಣದ ಪ್ರಕಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಮದ್ಯಪಾನಾಸಕ್ತರಾದಲ್ಲಿ ಅವರು ನರಕ ಭಾಜನರಾಗುವುದು ಮಾತ್ರವಲ್ಲದೆ, ಅಲ್ಲಿ ಕಾದ

ಕಬ್ಬಿಣವನ್ನು ಗಂಟಲಿಗೆ ಹುಯ್ಯಿಸಿಕೊಳ್ಳುವುದೇ ಮುಂತಾದ ಕಠಿಣ ಶಿಕ್ಷೆಗಳಿಗೆ ಗುರಿಯಾಗುತ್ತಾರೆ. ಈ ದೃಷ್ಟಿಯಲ್ಲಿ ಒಂದು ಹೆಜ್ಜೆ ಮುಂದುವರಿದಿರುವ ಗರುಡ ಪುರಾಣ ಶೂದ್ರರು ಹಾಗೂ ಸ್ತ್ರೀಯರು ಕೂಡ ಮದ್ಯಪಾನ ವ್ಯಸನಿಗಳಾಗಲೇ ಬಾರದೆಂದು ಸೂಚಿಸುತ್ತದೆ.

ಅನಾದಿಯಿಂದಲೇ ವಿದೇಶಿಯರನ್ನು ಬಹುವಾಗಿ ಆಕರ್ಷಿಸಿದ ದೇಶ ಭಾರತ. ನೂರಾರು ವಿದೇಶೀ ಪ್ರವಾಸಿಗಳು ಬೇರೆ ಬೇರೆ ಕಾಲದಲ್ಲಿ ಭಾರತದ ವಿವಿಧ ಪ್ರದೇಶಗಳನ್ನು ಸಂದರ್ಶಿಸಿ ಅಲ್ಲಿನ ಸಮಕಾಲೀನ ಸಾಮಾಜಿಕ ರೀತಿ ನೀತಿಗಳನ್ನು ಕುರಿತಂತೆ ವೈವಿಧ್ಯಮಯ ವರ್ಣನೆಗಳನ್ನಿತ್ತಿದ್ದಾರೆ. ಪ್ರಾಚೀನತಮ ವಿದೇಶೀ ಸಂದರ್ಶಕರಲ್ಲೊಬ್ಬನಾದ ಮೆಗಾಸ್ತನೀಸ್ ಮೌರ್ಯ ಯುಗದಲ್ಲಿ ಭಾರತಕ್ಕೆ ಬಂದ ಗ್ರೀಕ್ ರಾಜಕಾರಣಿ. ಈತನ ವಿವರಣೆಯಲ್ಲಿ ಮೌರ್ಯ ದೊರೆಗಳು ಮದ್ಯಪಾನ ನಿಷೇಧಕ್ಕಾಗಿ ವಿಶೇಷವಾದ ಕ್ರಮಗಳನ್ನು ಕೈಗೊಂಡಿದ್ದರೆಂಬ ಪ್ರಸ್ತಾಪವಿದೆ. ಘಜನಿ ಮಹಮ್ಮದನ ಜೊತೆ ಭಾರತಕ್ಕೆ ಬಂದ ಅಲ್‌ಬೆರೂನಿ (ಕ್ರಿಸ್ತ ಶಕ ೧೧ನೇ ಶತಮಾನ) ಸಮಕಾಲೀನ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಕುರಿತು ಅತ್ಯಂತ ನಂಬಲರ್ಹವಾದ ಮಾಹಿತಿಯನ್ನು ನೀಡಿದ್ದಾನೆ. ಈತನ ಹೇಳಿಕೆಯಂತೆ ಹಿಂದುಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯರಿಗೆ ಮದ್ಯಪಾನ ನಿಷೇಧವಿತ್ತು. ಆದರೆ ಶೂದ್ರರಿಗೆ ಮದ್ಯಪಾನ ಸಮ್ಮತವಾಗಿದ್ದರೂ ಅವರು ಅದರ ಮಾರಾಟದಲ್ಲಿ ತೊಡಗುವಂತಿರಲಿಲ್ಲ.

೧೬೫೬ ರಿಂದ ೧೬೬೮ರ ತನಕ, ಸುಮಾರು ೨೨ ವರ್ಷಗಳ ಕಾಲ ಭಾರತದಲ್ಲಿ ತಂಗಿದ್ದ ಫ್ರಾನ್ಸಿಸ್ ಬೆರ್ನಿಯರ್ ಎಂಬ ವಿದೇಶೀ ಪ್ರವಾಸಿಯು ಮದ್ಯವು ಇಲ್ಲಿ ಲಭ್ಯವಿಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದ್ದ. ಈತನ ಮಾತಿನಂತೆ "ಮನರಂಜನೆಯ ಒಂದು ಪ್ರಮುಖ ಮೂಲವಾದ ಮದ್ಯವು ದೆಹಲಿಯ ಯಾವ ಅಂಗಡಿಗಳಲ್ಲೂ ದೊರಕದು. ಇದು ಹಿಂದೂ ಹಾಗೂ ಮುಸ್ಲಿಂ ಜನಾಂಗದವರಿಬ್ಬರಿಗೂ ನಿಷೇಧಿಸಲಾದ ಪೇಯ" ಮುಂದುವರಿಸುತ್ತ ಆತ ಹೇಳುತ್ತಾನೆ, "ಇಲ್ಲಿಯ ವಿಶಿಷ್ಟವಾದ ಒಂದು ಮದ್ಯವೆಂದರೆ ಶರಾಬು; ಅಶುದ್ಧ ಸಕ್ಕರೆಯನ್ನು ಭಟ್ಟಿ ಇಳಿಸಿ ತಯಾರಿಸಲಾದ ಅಮಲು ಪಾನೀಯ. ಇದರ ಮಾರಾಟಕ್ಕೂ ನಿಷೇಧವಿದೆ. ಕ್ರೈಸ್ತರ ಹೊರತು ಇನ್ನಿತರರು ಇದನ್ನು ಸಾರ್ವಜನಿಕವಾಗಿ ಕುಡಿಯುವ ಧೈರ್ಯ ತೋರಲಾರರು. ಇಲ್ಲಿನ (ಭಾರತದ) ಜ್ಞಾನಿಗಳು ಕೇವಲ ಶುದ್ಧ ಜಲ ಸೇವನೆಯಿಂದಲೇ ತೃಪ್ತರಾಗುವರು. ಹೆಚ್ಚೆಂದರೆ ಲಿಂಬೆಹಣ್ಣಿನ ಪಾನಕ ತೆಗೆದುಕೊಂಡಾರು..." ಬೆರ್ನಿಯರ್‌ನ ಈ ಹೇಳಿಕೆಯನ್ನು ಅವನಿಗಿಂತ ಪೂರ್ವದಲ್ಲಿ ಭಾರತಕ್ಕೆ ಆಗಮಿಸಿದ್ದ ವಾಸ್ಕೋ-ಡಿ ಗಾಮಾನ ಹೇಳಿಕೆಗಳೂ ಪುಷ್ಟೀಕರಿಸುತ್ತವೆ.

ಮದ್ಯಪಾನವನ್ನು ಕುರಿತಂತೆ ಪ್ರಾಚೀನ ಭಾರತೀಯರ ಮನೋಭಾವನೆ ಏನಿತ್ತು ಎಂಬುದು ಮೇಲಿನ ವಿವರಣೆಗಳಿಂದ ಸ್ಪಷ್ಟವಾಗದಿರದು. ಭಾರತೀಯರು ಎಂದೂ ಮದ್ಯಪಾನವನ್ನು ಪ್ರೋತ್ಸಾಹಿಸಿದವರಲ್ಲ, ಬದಲಾಗಿ ಅತಿ ಪ್ರಾಚೀನದಿಂದಲೇ ಮದ್ಯಪಾನದ ಕುರಿತು ವಿರೋಧವನ್ನೇ ವ್ಯಕ್ತಪಡಿಸುತ್ತ ಬಂದಿದ್ದಾರೆಂಬುದು ನಿಜ. ಭಾರತದ ಎಲ್ಲ ಪ್ರಾಚೀನ ಕೃತಿಕಾರರೂ ಮದ್ಯಪಾನವನ್ನು ಏಕ ಕಂಠದಿಂದ ವಿರೋಧಿಸಿದ್ದಾರಲ್ಲದೆ ಅದರ ದುಷ್ಪರಿಣಾಮಗಳ ಕುರಿತು ಸಾಕಷ್ಟು ಎಚ್ಚರಿಕೆಯನ್ನು ಕೊಟ್ಟಿದ್ದರು ಎಂಬುದು ಸ್ಪಷ್ಟವಾಗುವ ಅಂಶ. ●





# ಅಮೇರಿಕದ ಚಲಿಸುವ ಮನೆಗಳು

ವಿಜಯಾ ಜಿ. ಕಣೇಕಲ್

ಮನೆಗಳು ಚಲಿಸುತ್ತವೆಯೆ! ಹೌದು, ಅಮೇರಿಕದಲ್ಲಿ! ವಿಚಿತ್ರವಾಗಿದೆಯಲ್ಲ! ಆದರೆ ಅಮೇರಿಕನ್ನರಿಗೆ ನಿತ್ಯಸತ್ಯ! ಈ ಚಲಿಸುವ ಮನೆಗಳು, ಎಂದರೆ, ಮನೆಯಲ್ಲಿ ಇರುವ ಎಲ್ಲ ಬಗೆಯ ಸೌಕರ್ಯಗಳನ್ನು ಹೊಂದಿದ ಮೋಟಾರು ವಾಹನಗಳು, ಅಮೇರಿಕದ ಜನಜೀವನದ ಅವಿಭಾಜ್ಯ ಅಂಗವಾಗಿದೆಯೆಂದರೆ ತಪ್ಪಾಗ-ಲಿಕ್ಕಿಲ್ಲ.

ಕಳೆದ ವರುಷ ನಾವು — ನಾನು ಮತ್ತು ನನ್ನ ಪತಿ — ಅಮೇರಿಕಕ್ಕೆ ನನ್ನ ಮಗಳ ಹತ್ತಿರ ಹೋದಾಗ, ಇಂತಹ ಒಂದು ಮೋಟಾರು ವಾಹನದಲ್ಲಿ ಹದಿನೈದು ದಿನಗಳ ವರೆಗೆ ಸುಮಾರು ಐದು ಸಾವಿರ ಮೈಲುಗಳಷ್ಟು ದೂರ ಪ್ರವಾಸ ವನ್ನು ಮಾಡುವ ಅವಕಾಶ ದೊರಕಿತು.

ಅಮೇರಿಕದಲ್ಲಿ ಬೇರೆ ಬೇರೆ ಸಂಸ್ಥೆಗಳು ಇಂತಹ ಮೋಟಾರು ವಾಹನಗಳ ತಯಾರಿಕೆ ಮತ್ತು ಬಾಡಿಗೆ ಕೊಡುವ ಉದ್ಯೋಗವನ್ನು ಮಾಡುತ್ತವೆ. ಈ ಸಂಸ್ಥೆಗಳ ಶಾಖೆಗಳು ದೇಶದ ಪ್ರಮುಖ ಊರುಗಳಲ್ಲೆಲ್ಲ ಇರುತ್ತವೆ. ವಾರದಲ್ಲಿ ಐದು ದಿನ ಕೆಲಸ ಮಾಡಿ, ಶನಿವಾರ ಭಾನುವಾರಗಳನ್ನು ವಿಹಾರಗಳಲ್ಲಿ ಕಳೆಯಬಯಸುವ ಅಮೇರಿಕನ್ನರು ಇಂಥ ವಾಹನಗಳಲ್ಲಿ ದೂರ ದೂರ ಪ್ರದೇಶಗಳಿಗೆ ಹೋಗುತ್ತಾರೆ. ಬೇಸಿಗೆ ಕಾಲ ಬಂದರಂತೂ ಹದಿನೈದು ದಿನಗಳ ವರೆಗೂ ಕೆಲವೊಮ್ಮೆ ತಿಂಗಳ ವರೆಗೂ ಹೋಗುತ್ತಾರೆ. ಇವುಗಳಿಗೆ ರಿಕ್ರಿಯೇಷನಲ್ ವೆಹಿ-

ಕಲ್ಸ್ ಅಥವಾ ಆರ್. ವಿ. ಎಂಬುವದಾಗಿಯೂ ಮೋಟಾರ್ ಹೋಮ್ಸ್, ಮೊಬ್ಯಾಲ್ ಹೋಮ್ಸ್ ಎಂಬುದಾಗಿಯೂ ಕರೆಯುತ್ತಾರೆ. ಈ ವಾಹನ ವನ್ನು ಯಾವುದೇ ಕಂಪನಿಯ ಯಾವುದೇ ಒಂದು ಊರಿನಲ್ಲಿರುವ ಶಾಖೆಯಿಂದ ಬಾಡಿಗೆ ಪಡೆಯ ಬಹುದು. ಆದರೆ ಮತ್ತೆ ಅದೇ ಊರಿನ ಅದೇ ಶಾಖೆಗೇ ಆ ವಾಹನವನ್ನು ವಾಪಸು ಮಾಡ ಬೇಕೆಂದೇನೂ ಇಲ್ಲ. ದೇಶದ ಬೇರೆ ಯಾವುದೇ ಊರಿನಲ್ಲಿರುವ ಆ ಕಂಪನಿಯ ಶಾಖೆಗೆ ಹಿಂದಿರುಗಿಸಬಹುದು. ಇಷ್ಟಲ್ಲದೆ ಮಾರ್ಗ ಮಧ್ಯದಲ್ಲಿ ವಾಹನವೇನಾದರೂ ಕೆಟ್ಟುಹೋದರೆ ಹತ್ತಿರದ ಊರಿನಲ್ಲಿರುವ ಆ ಕಂಪನಿಯ ಶಾಖೆಯವರು ಪುಕ್ಕಟೆಯಾಗಿ ವಾಹನವನ್ನು ರಿಪೇರಿ ಮಾಡಿಕೊಡುವರು. ಅಕಸ್ಮಾತ್ ನಡು ರಾತ್ರಿಯಲ್ಲೆಲ್ಲೋ ವಾಹನ ಕೆಟ್ಟರೂ ಭಯವಿಲ್ಲ. ಏಕೆಂದರೆ ಈ ಮಾರ್ಗಗಳಲ್ಲಿ – ಬಹುತೇಕವಾಗಿ ಇವೆಲ್ಲ ರಾಷ್ಟ್ರೀಯ ಹೆದ್ದಾರಿಗಳೇ ಆಗಿರುತ್ತವೆ— ಒಂದೆರಡು ಮೈಲುಗಳ ಅಂತರದಲ್ಲಿ ಅಲ್ಲಲ್ಲಿ ಟೆಲಿಫೋನುಗಳ ವ್ಯವಸ್ಥೆ ಇರುತ್ತದೆ. ನೀವು A. A. A. ಅಂದರೆ 'ಅಮೇರಿಕನ್ ಆಟೊಮೊಬ್ಯಾಲ್ಸ್ ಅಸೋಸಿಯೇಷನ್'ನ ಸದಸ್ಯರಾಗಿದ್ದರೆ, ಟೆಲಿಫೋನ್ ಮೂಲಕ A. A. A. ಅವರ ತೀರ ಹತ್ತಿರದ ಶಾಖೆಗೆ ತಿಳಿಸಿದರೆ, ಅವರೇ ತಮ್ಮ ಸಿಬ್ಬಂದಿಯನ್ನು ಕಳುಹಿಸಿ ವಾಹನದ ರಿಪೇರಿಗೆ ವ್ಯವಸ್ಥೆ ಮಾಡು ತ್ತಾರೆ. ಈ ಬಗೆಯ ವಾಹನಗಳನ್ನು ಭಾಡಿಗೆಗೆ ಕೊಡುವ ಅನೇಕ ಸಂಸ್ಥೆಗಳಲ್ಲಿ 'ಫ್ಲೀಟ್‌ವುಡ್' ಎಂಬ ಸಂಸ್ಥೆಯೂ ಒಂದು. ಈ ಸಂಸ್ಥೆಯಿಂದ ನಾವು ಬಾಡಿಗೆಗೆ ಪಡೆದ ವಾಹನದ ಹೆಸರು 'ಸೌಥ್ ವಿಂಡ್.' ವಾಹನದ ಬಾಡಿಗೆ ಒಂದು ವಾರಕ್ಕೆ ೫೦೦ ಡಾಲರುಗಳು. ನಮಗೆ ಮೋಟಾರು ನಡೆಸಲು ಬರುವುದಿಲ್ಲವಾದರೆ ಚಾಲಕನನ್ನೂ ಬಾಡಿಗೆಗೆ ಪಡೆಯಬಹುದು. ನನ್ನ ಮಗ ಮತ್ತು ಅವನ ಸ್ನೇಹಿತ ಇಬ್ಬರೂ ಚೆನ್ನಾಗಿ ಮೋಟಾರನ್ನು ನಡೆಸಬಲ್ಲವರಾಗಿದ್ದರಿಂದ ನಮಗೆ ಚಾಲಕನ ಅಗತ್ಯ ಬೀಳಲಿಲ್ಲ.

ನಾವು ಬಾಡಿಗೆಗೆ ಪಡೆದ ಮೋಟಾರು ವಾಹನದ ಉದ್ದ ಇಪ್ಪತ್ತೇಳು ಅಡಿ, ಅಗಲ ಎಂಟು ಅಡಿ ಮತ್ತು ಎತ್ತರ ಹನ್ನೊಂದು ಅಡಿ. ಮುಂಭಾಗ ದಲ್ಲಿ ಚಾಲಕ ಮತ್ತು ಇನ್ನೊಬ್ಬರು ಕೂಡಲು ವ್ಯವಸ್ಥೆ. ಈ ಎರಡು ಆಸನಗಳ ನಡುವೆ, ರಸ್ತೆ ನಕಾಶೆಗಳನ್ನು, ಚಿಲ್ಲರೆ ಹಣವನ್ನು, ಕಾಫಿ ಕಪ್ಪನ್ನು ಇಡಲು ಜಾಗ. ಅಲ್ಲಿಯೇ ಟೇಪ್ ರೆಕಾರ್ಡರ್ ಸಹ ಉಂಟು. ನಮಗಿಷ್ಟವಾದ ರೆಕಾರ್ಡ್ ಹಾಕಿಕೊಂಡು ಸಂಗೀತವನ್ನು ಸವಿಯುತ್ತ ದಾರಿ ಸವೆಸಬಹುದು. ಎದುರಿಗಿನ ಕಂಟ್ರೋಲ್ ಪ್ಯಾನೆಲ್ ಎಂದರೆ ವಾಹನದ ನಿಯಂತ್ರಣ ವಿಭಾಗದಲ್ಲಿ ರೇಡಿಯೋ ವ್ಯವಸ್ಥೆಯೂ ಇರುವುದು. (ಕೆಲವೊಂದು ಮೋಟಾರ್ ಹೋಮ್ಸ್‌ಗಳಲ್ಲಿ ದೂರದರ್ಶನವೂ ಉಂಟು.) ಸಂಗೀತವನ್ನು ಕೇಳಲು ಹಿಂಭಾಗದಲ್ಲಿ ಪಕ್ಕದಲ್ಲಿ ಸ್ಪೀಕರುಗಳು ಇರುತ್ತವೆ. ಚಾಲಕನು ಮಾತ್ರವೇ ಕೇಳಬಯಸಿದರೆ ಇತರ ಸ್ಪೀಕರು ಗಳನ್ನು ನಿಷ್ಕ್ರಿಯಗೊಳಿಸಬಹುದು. ಚಾಲಕನ ಆಸನದ ಹಿಂದೆ ಇಬ್ಬರು ಕುಳಿತುಕೊಳ್ಳ ಬಹುದಾದ ಸೋಫಾ; ಅದರ ಮುಂದೆ ಊಟದ ಮೇಜು. ಮೇಜಿನ ಇನ್ನೊಂದು ಬದಿಗೆ ಮತ್ತೊಂದು ಸೋಫಾ. ಹೀಗೆ ನಾಲ್ವರು ಊಟ ಮಾಡಬಹುದು. ಮುಂಭಾಗದ ಇನ್ನೊಂದು ಆಸನದ ಹಿಂದೆ ಒಂದು ಉದ್ದನೆಯ ಸೋಫಾ. ಹೀಗೆ ಮೋಟಾರಿನ ಒಂದು ಬದಿಗೆ ಊಟದ ಮೇಜು, ಇನ್ನೊಂದು ಬದಿಗೆ ಸೋಫಾ; ಎರಡು ಕಡೆಗೂ ಹೊರಗಿನ ದೃಶ್ಯಗಳನ್ನು ವೀಕ್ಷಿಸುವುದಕ್ಕಾಗಿ ದೊಡ್ಡ ದೊಡ್ಡ ಕಿಟಕಿಗಳು. ಹಾಗೆಯೇ ಊಟದ ಮೇಜಿನ ಇನ್ನೊಂದು ಬದಿಯ ಸೋಫಾದ ಹಿಂದುಗಡೆ ಪುಟ್ಟದಾದ ಅಡಿಗೆಯ ಸ್ಥಳ — ಕಟ್ಟೆಯೆಂದೇ ಕರೆಯ- ಬಹುದು. ಅಲ್ಲಿ ನಾಲ್ಕು ಗ್ಯಾಸ್ ಒಲೆಗಳು. ಪಕ್ಕದಲ್ಲಿಯೇ ಒಂದು ಸಣ್ಣ ಕೈಬಚ್ಚಲು–ಸಿಂಕ್. ಅದರ ಮೇಲೆ ನಲ್ಲಿ. ಹತ್ತಿರದಲ್ಲಿಯೇ ಒಂದು

'ಗಾರ್ಬೇಜ್ ಬಿನ್' ಎಂದರೆ, ಅಡಿಗೆ ಮಾಡುವಾಗ ತರಕಾರಿ ಹೆಚ್ಚಿದಾಗ ಉಳಿಯುವ ಸಿಪ್ಪೆ ಮುಂತಾದವುಗಳನ್ನು ಹಾಕಿಡುವ ಒಂದು ಬೇಸಿನ್. ಅದಕ್ಕೆ ಮೇಲೆ ಮುಚ್ಚಳ—ವಾಸನೆ ಬರದಿರಲೆಂದು. ಈ ಜಾಗದ ಕೆಳಗೆ, ಗ್ಯಾಸ್ ಸಿಲಿಂಡರ್ ಅಲ್ಲದೆ, ಪಾತ್ರೆಗಳು ಮತ್ತು ಇತರ ಸಾಮಾನುಗಳನ್ನಿಡಲು ಡ್ರಾಅರ್‌ಗಳು. ಇವೆಲ್ಲವುಗಳು, ಮೇಲಿನ ಸ್ಟೇನ್‌ಲೆಸ್ ಸ್ಟೀಲ್ ಹೊದಿಕೆಯನ್ನು ಬಿಟ್ಟರೆ ಮರದಿಂದ ಮಾಡಿದವುಗಳು. ಅಡಿಗೆಯ ಕಟ್ಟೆಯ ಎದುರುಗಡೆಯೇ ಮೋಟಾರು ವಾಹನದ ಬಾಗಿಲು; ಬಾಗಿಲ ಎಡಪಕ್ಕದಲ್ಲಿ, (ಬಲಪಕ್ಕದಲ್ಲಿ ಉದ್ದನೆಯ ಸೋಫಾ ಇದೆ), ಒಂದು ಸಣ್ಣ ರಿಫ್ರಿಜರೇಟರ್. ಅದರಲ್ಲಿ ಹಾಲು, ಮೊಸರು, ತರಕಾರಿಗಳನ್ನು, ನಾವು ಊರಿಂದೂರಿಗೆ ಹೋಗುವಾಗ ಎಲ್ಲೆಲ್ಲಿ ಸಿಕ್ಕುತ್ತವೆಯೋ ಅಲ್ಲಲ್ಲಿ ಕೊಂಡುಕೊಂಡು, ಶೇಖರಿಸಿಡಬಹುದು. ಗ್ಯಾಸ್ ಒಲೆಯ ಮೇಲ್ಭಾಗದಲ್ಲಿ ಮೈಕ್ರೋವೇವ್ ಒಲೆಯೂ ಉಂಟು. ರಿಫ್ರಿಜರೇಟರ್ ಪಕ್ಕದಲ್ಲಿ ಅಡಿಗೆ ಸಾಮಾನುಗಳನ್ನಿಟ್ಟುಕೊಳ್ಳಲು ಒಂದು ಕಪಾಟು. ಅದರ ಎಡಬದಿಗೆ ಇಬ್ಬರು ಮಲಗಬಹುದಾದ ಒಂದು ದೊಡ್ಡ ಮಂಚ. ಅದೂ ಮರದ್ದೇ. ಇನ್ನು ಗ್ಯಾಸ್ ಒಲೆಯ ಇನ್ನೊಂದು ಬದಿಗೆ ಎಂದರೆ ಅಡಿಗೆ ಸಾಮಾನುಗಳನ್ನಿಡುವ ಕಪಾಟಿಗೆ ಎದುರಾಗಿ ಬಟ್ಟೆಗಳನ್ನಿಡಲು ಒಂದು ಪುಟ್ಟ ವಾರ್ಡರೋಬ್ — ಬಾಗಿಲು ತೆಗೆದೊಡನೆಯೇ ಒಳಗಡೆಯ ದೀಪ ಹತ್ತಿಕೊಳ್ಳುತ್ತದೆ. ಈ ವಾರ್ಡರೋಬ್ ಪಕ್ಕದಲ್ಲಿ ಎಡಗಡೆ, ಎಂದರೆ ವಾಹನದ ಹಿಂಭಾಗದಲ್ಲಿ ಒಂದು ವಾಶ್ ಬೇಸಿನ್. ಅದರ ಹತ್ತಿರ ಒಂದು ಕಮೋಡ್ ಅಲ್ಲದೆ ಸ್ನಾನ ಮಾಡಲು ಒಂದು ಬಾಥ್‌ಟಬ್—ಈ ಚಿಕ್ಕ ಬಚ್ಚಲು ಮನೆ(!)ಗೂ ಹಿಂಭಾಗದ ದೊಡ್ಡ ಮಂಚಕ್ಕೂ ಮಧ್ಯದಲ್ಲಿ ಚರ್ಮದ ಸರಿಸಾಡಲು ಬರುವಂಥ ಪರದೆ. ಬೇಕಾದಾಗ ಹಾಕಕೊಳ್ಳಬಹುದು. ವಾಹನದ ಒಳಭಾಗದಲ್ಲಿ ಎಲ್ಲ ಕಡೆಗೂ ಮೇಲ್ಭಾಗದಲ್ಲಿ ಸಾಮಾನುಗಳನ್ನಿಟ್ಟುಕೊಳ್ಳಲು ಪುಟ್ಟ ಪುಟ್ಟ ಖಾನೆಗಳು. ಹೀಗೆ ಎಲ್ಲ ಬಗೆಯ ಸೌಕರ್ಯಗಳನ್ನೂ ಈ ವಾಹನ ಹೊಂದಿದೆ. ಅಲ್ಲದೆ ಚಾಲಕನ ಮತ್ತು ಮುಂಭಾಗದ ಆಸನಗಳ ಮೇಲ್ಭಾಗದಲ್ಲಿ (ವಿಂಡ್‌ಸ್ಕ್ರೀನ್ ಮೇಲೆ), ಒಂದು ಹಾಸಿಗೆಯ ವ್ಯವಸ್ಥೆಯೂ ಉಂಟು. ರಾತ್ರಿ ಕಾಲದಲ್ಲಿ ಊಟದ ಮೇಜನ್ನು ತಗ್ಗಿಸಿ, ಅದರ ಮೇಲೆ ಎರಡೂ ಕಡೆಯ ಸೋಫಾಗಳನ್ನು ಎಳೆದರೆ ಒಂದು ಹಾಸಿಗೆ ಸಿದ್ಧ. ಪಕ್ಕದ ಉದ್ದನೆಯ ಸೋಫಾವನ್ನು ಜರುಗಿಸಿದರೆ ಅಲ್ಲೊಂದು ಹಾಸಿಗೆ ಸಿದ್ಧ. ಮೇಲ್ಭಾಗದಲ್ಲಿರುವ ಹಾಸಿಗೆಯನ್ನು ಜಗ್ಗಿ ಕೆಳಗೆ ಎಳೆಯಬಹುದು, ಹಿಂಭಾಗದ ದೊಡ್ಡ ಮಂಚವಂತೂ ಸರಿಯೇ ಸರಿ. ಹೀಗೆ ಒಟ್ಟು ಐದು ಜನರು ಸುಖವಾಗಿ ಮಲಗಬಹುದು. ಹಗಲು ಹೊತ್ತಿನಲ್ಲಂತೂ ಆರಾಮವಾಗಿ ಕುಳಿತುಕೊಂಡು ಹೋಗಲು ಬಹಳೇ ಅನುಕೂಲ. ಇದು ವಾಹನದ ಒಳಭಾಗದ ವ್ಯವಸ್ಥೆ. ಇಷ್ಟಾದರೆ ಮಾತ್ರ ಸಾಲದು. ವಾಹನದ ಹಿಂಭಾಗದಲ್ಲಿ ಕೆಳಗಡೆ ಒಂದು ವಿದ್ಯುತ್-ಜನರೇಟರನ್ನು ಅಳವಡಿಸಲಾಗಿರುತ್ತದೆ. ಇದು ರಾತ್ರಿಕಾಲದಲ್ಲಿ ವಾಹನದ ಒಳಭಾಗದ ದೀಪಗಳನ್ನು ಉರಿಸಲು, ಸೆಕೆಯಾದರೆ ಹವಾ ನಿಯಂತ್ರಣ (air condition) ಮಾಡಲು, ಸ್ನಾನಕ್ಕಾಗಿ ನೀರು ಕಾಯಿಸಲು ಉಪಯುಕ್ತ. ನೀರು ಎಲ್ಲಿದೆ ಎನ್ನುವಿರೋ! ವಾಹನದ ಮೇಲ್ಗಡೆ ದೊಡ್ಡದೊಂದು ಟ್ಯಾಂಕ್ ಉಂಟು. ರಿಫ್ರಿಜಿರೇಟರ್ ಮೇಲ್ಭಾಗದಲ್ಲಿ ಸ್ವಿಚ್‌ಗಳು ಉಂಟು—ಈ ಎಲ್ಲವುಗಳನ್ನು ಕಾರ್ಯಾಚರಣೆಗೆ ತರಲು. ಹಾಗಾದರೆ ಸ್ನಾನ ಮಾಡಿದ ನೀರು ಎಲ್ಲಿಗೆ ಹೋಗುತ್ತದೆ? ಪ್ರಾತರ್ವಿಧಿಗಳನ್ನು ಪೂರೈಸಿದಾಗ ಆ ಅಶೌಚದ ಗತಿಯೇನು? ಹಾ! ಅವುಗಳಿಗೂ ಪ್ರತ್ಯೇಕ ವ್ಯವಸ್ಥೆ ಇದೆ. ಸ್ನಾನದ ಟಬ್ ಕೆಳಗೆ, ಕಮೋಡಿನ ಕೆಳಗೆ, ವಾಷ್ ಬೇಸಿನ್ ಕೆಳಗಡೆ, ವಾಹನದ ತಳಭಾಗದಲ್ಲಿ ಟ್ಯಾಂಕುಗಳಿವೆ. ಇವುಗಳಿಗೆ

ಹೋಲ್ಡಿಂಗ್ ಟ್ಯಾಂಕುಗಳೆಂದು ಹೆಸರು. ಇವುಗಳಿಗೆ ಮತ್ತೆ ಔಟ್‌ಲೆಟ್ಸ್ ಎಂದರೆ ಹೊರಚೆಲ್ಲುವ ಬಾಯಿಗಳು ಉಂಟು. ವಾಹನವನ್ನು ನಾವು ಯಾವುದಾದರೊಂದು ಎಡೆಯಲ್ಲಿ ನಿಲ್ಲಿಸಿದಾಗ, ಅಲ್ಲಿ ಒಂದೊಂದು ವಾಹನಕ್ಕೂ ಒಂದೊಂದು ಸ್ಥಳವನ್ನು ನಿಗದಿಪಡಿಸಿರುತ್ತಾರೆ. (ಈ ಎಡೆಗಳು ಸಾಮಾನ್ಯವಾಗಿ ಇವು ರಾಷ್ಟ್ರೀಯ ಉದ್ಯಾನವನಗಳು–ನ್ಯಾಷನಲ್ ಪಾರ್ಕುಗಳಾಗಿರುತ್ತವೆ. ಇಂಥ ಕಡೆಗೆ ಅನೇಕ ಪ್ರವಾಸಿಗರು ತಮ್ಮ ಆರ್. ವಿ. ಗಳಲ್ಲಿ ಬರುವವರಾಗಿದ್ದರಿಂದ ನಾವು ಮೊದಲೇ ನಮ್ಮ ಆರ್. ವಿ. ಗಾಗಿ ಸ್ಥಳವನ್ನು ಫೋನ್ ಮೂಲಕ ಅಥವಾ ಪತ್ರಮುಖೇನ ಮುಂಗಡ ಹಣ ಸಲ್ಲಿಸಿ ಕಾಯ್ದಿರಿಸಿಕೊಳ್ಳಬೇಕು.) ಹೀಗೆ ನಮ್ಮ ವಾಹನಕ್ಕಾಗಿ ನಿಗದಿಪಡಿಸಿದ ಸ್ಥಳದಲ್ಲಿ, ನಮ್ಮ ವಾಹನದಿಂದ ಹೋಲ್ಡಿಂಗ್ ಟ್ಯಾಂಕುಗಳಲ್ಲಿ ಸೇರಿದ ನೀರು ಮುಂತಾದವನ್ನು ಹೋಸ್ ಪೈಪುಗಳ ಮೂಲಕ ಭೂಮಿಯಲ್ಲಿ ಇರುವ ಒಳಚರಂಡಿಯ ಮಾರ್ಗಗಳಿಗೆ ಬಿಡಬಹುದು. ಅಲ್ಲದೇ ಇನ್ನೊಂದು ಸಿಹಿ ನೀರಿನ ನಲ್ಲಿಯಿಂದ ಇನ್ನೊಂದು ಪೈಪ್ ಮೂಲಕ ವಾಹನದ ಮೇಲ್ಭಾಗದ ಟ್ಯಾಂಕಿಗೆ ನೀರು ತುಂಬಿಕೊಳ್ಳಬಹುದು. ನಮ್ಮ ವಾಹನವನ್ನೂ ತೊಳೆಯಬಹುದು. ಹೀಗೆ ಎಲ್ಲ ಬಗೆಯ ಸೌಕರ್ಯಗಳನ್ನು ಈ ಚಲಿಸುವ ಮನೆ ಅಥವಾ ಮೊಬೈಲ್ ಹೋಮ್ ಪಡೆದಿರುತ್ತದೆ. ನಾಲ್ಕೈದು ಜನರ ಒಂದು ಕುಟುಂಬ ಬಹಳ ಸುಖವಾಗಿ ಇದರಲ್ಲಿ ಪ್ರಯಾಣ ಮಾಡಬಹುದು. ಕೆಲವು ವಾಹನಗಳಿಗೆ, ದೋಣಿ, ಸೈಕಲ್ಲುಗಳನ್ನು ಜೊತೆಗೆ ಕೊಂಡೊಯ್ಯಲು ಟ್ರೇಲರುಗಳನ್ನು ಜೋಡಿಸುವ ಸೌಲಭ್ಯಗಳೂ ಉಂಟು. ಅಮೇರಿಕನ್ನರು ಈ ಚಲಿಸುವ ಮನೆಗಳಲ್ಲಿ ಪ್ರಯಾಣಿಸಿ, ವಿಹಾರೋದ್ಯಾನಗಳಲ್ಲಿರುವ ಕೆರೆಗಳಲ್ಲಿ ದೋಣಿ ವಿಹಾರವನ್ನೂ ಮಾಡುವರು. ಸೈಕಲ್ಲುಗಳಲ್ಲಿ ದೂರ ದೂರ ಹೋಗಿ ಬರುವರು. ಈ ವಾಹನವನ್ನು ಕಂಡು ನಾನು ಬೆರಗಾದೆ, ಅಮೇರಿಕದ ಜನ, ಕಷ್ಟಪಟ್ಟು ದುಡಿಯುವವರಲ್ಲದೇ ಭೋಗಪ್ರಿಯರೂ ಹೌದು ಎಂಬುದನ್ನೂ. ಜೀವನದ ಸೌಂದರ್ಯವನ್ನು ಸವಿಯಲು ಅವರು ಕಲ್ಪಿಸಿಕೊಂಡಿರುವ ಈ ಬಗೆಯ ಸೌಲಭ್ಯಗಳನ್ನೂ ಕಂಡು ಪ್ರತ್ಯಕ್ಷವಾಗಿ ಅನುಭವಿಸಿ ನಾನು ತಿಳಿದುಕೊಂಡೆ. ಈ ವಾಹನದಲ್ಲಿ ನಾವು ಕ್ಯಾಲಿಫೋರ್ನಿಯಾ, ಒರೆಗಾನ್, ವಾಷಿಂಗ್‌ಟನ್, ಇಡಾಹೋ, ವಯೋಮಿಂಗ್, ಉಟಾಹ, ನೆವಡಾ – ಮೊದಲಾದ ರಾಜ್ಯಗಳ ಕೆಲವು ಆಕರ್ಷಕ ಸ್ಥಳಗಳನ್ನು ಸಂದರ್ಶಿಸಿದೆವು. ಈ ಎಲ್ಲ ಕಾಲದಲ್ಲಿಯೂ ನನಗೆ ಆಗಾಗ ಉಂಟಾಗುತ್ತಿದ್ದ ಯೋಚನೆಯೆಂದರೆ — ಭಾರತದಲ್ಲಿಯೂ ಪ್ರವಾಸಿಗರನ್ನು ಆಕರ್ಷಿಸಲು ಅನೇಕ ಸುಂದರ ತಾಣಗಳಿವೆ. ಆದರೆ ಇಂತಹ ಅನುಕೂಲಗಳು ಏಕಿಲ್ಲ? ಎಂಬುದು. ಪ್ರಪಂಚದ ಅತಿ ಶ್ರೀಮಂತ ರಾಷ್ಟ್ರವಾದ ಅಮೇರಿಕ, ಏನೆಲ್ಲ ಸೌಕರ ಸೌಲಭ್ಯಗಳನ್ನು ಕಲ್ಪಿಸಲು ಸಾಧ್ಯ. ಅಲ್ಲದೆ ಈ ಸೌಕರ್ಯ, ಸೌಲಭ್ಯಗಳ ಪ್ರಯೋಜನ ಪಡೆಯುವವರೂ ಅಲ್ಲಿ ಹೇರಳವಾಗಿದ್ದಾರೆ. ನಮ್ಮ ದೇಶದಲ್ಲಿ ಇಂತಹ ಸೌಕರ್ಯಗಳನ್ನು ಕಲ್ಪಿಸುವುದು ಸ್ವಲ್ಪ ಕಷ್ಟವೇ. ಒಂದು ವೇಳೆ ಸಾಧ್ಯವಾದರೂ, ಅವುಗಳ ಪ್ರಯೋಜನ ಪಡೆಯುವವರು ಎಷ್ಟು ಜನ? ಜೋಗದ ಜಲಪಾತವನ್ನು ನೋಡಲು ಎಷ್ಟು ಜನ ಬರುತ್ತಾರೆ? ಆದರೆ ವಿದೇಶೀಯ ಪ್ರವಾಸಿಗರನ್ನು ಆಕರ್ಷಿಸಲು ಭಾರತೀಯ ಪ್ರವಾಸಿ ಇಲಾಖೆ ಇಂತಹ ಯೋಜನೆಗಳನ್ನು ಕಾರ್ಯಗತಗೊಳಿಸಿದರೆ ನಾವು ಸಾಕಷ್ಟು ಸಂಪಾದನೆ ಮಾಡಬಹುದು. ✡



ಬಾ. ರಾ. ಗೋಪಾಲ

# ತೊಂದರೆಯಿಂದ ಯಶಸ್ಸು

ನನಗೆ ಬಹಳ ವರ್ಷಗಳಿಂದಲೂ ಅನುಭವ ವೇದ್ಯವಾದ ಮಾತು ಇದು. ವಾರಪತ್ರಿಕೆ, ಮಾಸಪತ್ರಿಕೆ ಇತ್ಯಾದಿಗಳಲ್ಲಿ ಭವಿಷ್ಯ ಕುರಿತು ಬರೆಯುವಾಗ ದೈವಜ್ಞರು ಮೇಲಿಂದ ಮೇಲೆ ಇದನ್ನು ಬಳಸುತ್ತಿರುತ್ತಾರೆ. ನಿಮಗೆ ಯಶಸ್ಸು ಎಂದು ಹೇಳುವುದಿಲ್ಲವಲ್ಲ ಅವರು. ಹಾಗೆಂದು ಯಶಸ್ಸಿಲ್ಲ ಎಂದುಬಿಟ್ಟರೆ ಅವರ ಹತ್ತಿರ ಯಾರು ಭವಿಷ್ಯ ಕೇಳ್ತಾರೆ? ಆದ್ದರಿಂದ ಈ ಅಡ್ಡ ಗೋಡೆಯ ಮೇಲಿನ ದೀಪದ ಮಾತು. ಯಶಸ್ಸಿನ ಮಜಲಿಗೆ ಮುಟ್ಟಬೇಕಾದರೆ ತೊಂದರೆಯ–ತೊಂದರೆಗಳ ಮಜಲನ್ನು ದಾಟಬೇಕು ಎನ್ನುತ್ತಾರೆ.

ಸುಮಾರು ೨೫ ವರ್ಷಗಳ ಹಿಂದಿನ ಮಾತು. ಪಿಎಚ್. ಡಿ. ಪದವಿಗಾಗಿ ಪ್ರಬಂಧ ಒಪ್ಪಿಸಿದ್ದೆ. ಸಂಶೋಧನ ವಿದ್ಯಾರ್ಥಿ ವಿಶ್ವವಿದ್ಯಾಲಯದಲ್ಲಿದ್ದೇ ಸಂಶೋಧನೆ ನಡೆಸಬೇಕೆಂಬ ನಿಯಮ ಆಗಿಸದು. ನಾನು ಕೇಂದ್ರ ಪುರಾತತ್ವ ವಿಭಾಗದ ಶಾಸನ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದೆ. ನನ್ನ ಸಂಶೋಧನೆಗೆ ಬೇಕಾದ ಮೂಲಸಾಮಗ್ರಿ ದೊರಕುವುದು ಆ ಇಲಾಖೆಯಲ್ಲಿ ಮಾತ್ರ. ಮೈಸೂರಿನಲ್ಲಿದ್ದರೂ ನಾನು ಅಲ್ಲಿಗೆ ಹೋಗಬೇಕಾಗುತ್ತಿಲ್ಲ ಎಂದೆ. ಕರ್ನಾಟಕದ ಅರಸುಮನೆತನವೊಂದರ ಕುರಿತ ನನ್ನ ಸಂಶೋಧನೆಯಲ್ಲಿ ನಿಮಗೆ ಆಸಕ್ತಿಯಿಲ್ಲವೇ ಎಂದು ಅಂದಿನ ಕುಲಪತಿಗಳಾಗಿದ್ದ ರಾಷ್ಟ್ರಕವಿ ಪೂಜ್ಯ ಕುವೆಂಪುರವರಲ್ಲಿ ವಾದಿಸಿದೆ. ಒಪ್ಪಿದರು. ನಂತರ ಕಾರ್ಯ ಮುಂದುವರಿಸಿದೆ. ಪ್ರಬಂಧವನ್ನು ಎರಡು ವರ್ಷಗಳೊಳಗೇ ಬರೆದು ಮುಗಿಸಿ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದೆ. ಆಗ ಶುರುವಾಯಿತು ನೋಡಿ ತೊಂದರೆಗಳ ಸರಪಳಿ! ನಾನು ಎಂ. ಎ. ಪದವಿ ಪಡೆದಾಗ ಪ್ರಾಚೀನ ಭಾರತೀಯ ಇತಿಹಾಸ ಎಂಬ ಪ್ರತ್ಯೇಕ ವಿಭಾಗವಿರಲಿಲ್ಲ. ನನ್ನ ಪ್ರಬಂಧ ಸ್ವಲ್ಪ ಮಟ್ಟಿಗೆ ಅದರೊಡನೆ ಸಂಬಂಧಿಸಿತ್ತು. ಸರಿ, ತಾಂತ್ರಿಕ ಪ್ರಶ್ನೆ. ಇದರ ಮೌಲ್ಯಮಾಪನ ಮಾಡಿಸುವ ಹೊಣೆ ಯಾರದು? ಎಂದು. ಪ್ರಾಚೀನ ಭಾರತೀಯ ಇತಿಹಾಸ ವಿಭಾಗದ್ದೇ? ಇತಿಹಾಸ ವಿಭಾಗದ್ದೇ? ಇದಕ್ಕಾಗಿ ಹಲವಾರು ತಿಂಗಳುಗಳು ಅವರಲ್ಲಿಯೇ ಪತ್ರವ್ಯವಹಾರ. ಕೊನೆಗೂ ಹೇಗೊ ಅದನ್ನು ಪರಿಹರಿಸಿ ಪರೀಕ್ಷಕರಿಗೆ ಕಳುಹಿಸಿದರು. ಅವರಿಂದ ವರದಿಗಳು ಬಂದದ್ದು ತಡ. ಅಂದು ಮೌಖಿಕ ಪರೀಕ್ಷೆ ಕಡ್ಡಾಯವಾಗಿರಲಿಲ್ಲ, ಅದರ ಅವಶ್ಯಕತೆಯೂ ಇಲ್ಲ ಎಂದು ಇಬ್ಬರೂ ಪರೀಕ್ಷಕರ ವರದಿ. ಆದರೆ ಪರೀಕ್ಷಾ ಸಮಿತಿಯ ಅಧ್ಯಕ್ಷರೇ ಅದಕ್ಕಾಗಿ ಪಟ್ಟು ಹಿಡಿದರು. ಆಗಲೇಬೇಕು ಎಂದರು. ಒಬ್ಬ ಪರೀಕ್ಷಕರು ಲಂಡನ್ನಿನಲ್ಲಿ. ಅವರನ್ನು ಕರೆಸಲಾದೀತೇ? ಆದುದರಿಂದ ಮುಂಬಯಿಯಲ್ಲಿದ್ದ ಇನ್ನೊಬ್ಬರನ್ನು ಬರಮಾಡಬೇಕಾಯಿತು. ಅವರಿಗೋ ಸಮಯದ ಅಭಾವ. ಹೇಗೋ ಮಾಡಿ ಬಂದರು. ಬಂದ ರೈಲಿನಲ್ಲಿಯೇ

ಹಿಂದಿರುಗುವಷ್ಟು ಅವಸರದಲ್ಲಿದ್ದರು. ಸಮಿತಿಯ ಅಧ್ಯಕ್ಷರು ಅವರನ್ನು ಹೇಗೋ ಒಪ್ಪಿಸಿ, ರೈಲಿನಿಂದ ಕೆಳಗಿಳಿಸಿದರು. ಪರೀಕ್ಷೆ ಎಂಬ ನಾಟಕವೂ ಮುಗಿಯಿತು. ಈ ವೇಳೆಗೆ ನಾನು ಪ್ರಬಂಧ ಸಲ್ಲಿಸಿ ಸುಮಾರು ಎರಡು ವರ್ಷಗಳೇ ಆಗಿದ್ದುವು. ಅಂತೂ ತೊಂದರೆಗಳಿಂದ ಪಾರಾದೆ ಎಂದುಕೊಂಡೆ. ಆದರೆ ಊಹೂಂ, ಹಾಗಾಗಲಿಲ್ಲ, ನಾಲ್ಕಾರು ತಿಂಗಳುಗಳು ಕಳೆದರೂ ಫಲಿತಾಂಶವನ್ನೇ ಪ್ರಕಟಿಸಲಿಲ್ಲ. ಹಲವಾರು ಬಾರಿ ಮೈಸೂರಿಗೆ ಅಲೆದಾಡಿದೆ. ಪರೀಕ್ಷಾ ನಿಯಂತ್ರಣಾಧಿಕಾರಿಗಳ ಬಗೆಗೆ ಅಲ್ಲಿ ಏನೋ ಹಗರಣ. ಕೊನೆಗೊಮ್ಮೆ ಬೇಸತ್ತು ಅಂದಿನ ಕುಲಪತಿಗಳಿಗೆ ಲಾಯರ್ ನೋಟಿಸ್ ಕೊಡಿಸಿದೆ. ಕೊನೆಗೊಮ್ಮೆ ಯಶಸ್ಸಿನ ಬಾಗಿಲು ತೆಗೆದಂತಾಯಿತು. ನಾಲ್ಕೇ ದಿನಗಳಲ್ಲಿ ತಂತೀ ವರ್ತಮಾನ ಬಂತು, 'ನಿಮಗೆ ಪದವಿ ನೀಡಲಾಗಿದೆ' ಎಂದು. ಅಂತೂ ಯಶಸ್ವಿಯಾದೆ ಎನಿಸಿತು. ಆದರೆ ಇದೊಂದೇ ಸ್ವಾಮಿ



ನಾನು ಕಂಡ 'ತೊಂದರೆಗಳಿಂದ ಯಶಸ್ಸು'. ನಂತರದ ಎಲ್ಲವೂ ತೊಂದರೆಗಳೇ! ಒಬ್ಬ ಜ್ಯೋತಿಷಿಯನ್ನು ಕೇಳಿದೆ 'ಏಕೆ ಹೀಗೆ?' ಎಂದು. ಬರೀ ತೊಂದರೆಗಳೇ ಆಯಿತಲ್ಲ! ಯಶಸ್ಸಿನ ದಾರಿಯೇ ಕಾಣುವುದಿಲ್ಲವಲ್ಲ ಎಂದು. ಅವರೆಂದರು 'ಶ್ರೇಯಾಂಸಿ ಬಹು ವಿಘ್ನಾನಿ ಸ್ವಾಮಿ.' ಒಪ್ಪಿದೆ. 'ಆದರೆ ಬರೀ ವಿಘ್ನವೇ ಆಯಿತಲ್ಲ' ಎಂದಿದ್ದಕ್ಕೆ 'ಜಾತಕ ಲಕ್ಷಣ ಸ್ವಾಮಿ' ಎಂದರು.

ನನಗೆ ಪರಿಚಿತರಾದ ಅಧ್ಯಾಪಕರೊಬ್ಬರಿದ್ದಾರೆ. ತಮ್ಮ ಕ್ಷೇತ್ರದಲ್ಲಿ ತಜ್ಞರೆಂಬ ಹೆಸರನ್ನು ಹೊರಗೆ ಪಡೆದಿದ್ದಾರೆ. ಆದರೆ ತಾವು ದುಡಿಯುವಲ್ಲಿಯೇ ಇವರಿಗೆ ಮಾನ್ಯತೆ ಇಲ್ಲ! ಇತ್ತೀಚೆಗೆ ಅದೇನೋ ಹೇಳ್ತಾರಲ್ಲ ಸ್ವಾಮಿ 'ಯೋಗ್ಯತಾ ಬಡ್ತಿ' ಅಂತ, ಅದಾದರೂ ಸಿಕ್ಕೀತೇನೋ ಎಂಬ ಆಸೆಗೆ ತುತ್ತಾದರು. ಆದರೆ ಅದಕ್ಕೂ ಸರಿಯಾದ ಕಾಯಕ ಮಾಡಬೇಕಲ್ಲ! ಊಹೂಂ, ಇವರು ಮಾಡಲಿಲ್ಲ. ಇವರ ಮೇಲಧಿಕಾರಿಗಳಿಗೆ ಇವರ ಬಗೆಗೆ ದಿವ್ಯ ನಿರ್ಲಕ್ಷ್ಯ. ತಮ್ಮ ಆಪ್ತರಿಗೆ ಅದು ದೊರೆಯಬೇಕಾದರೆ ಇವರಿಗೂ ಕೊಡಿಸಬೇಕು. ಹೀಗಾದರೂ ಸಿಗುತ್ತಲ್ಲ ಎಂದು ಇವರಿಗೆ ಧೈರ್ಯ. ಆದರೆ ಅವರು ಬುದ್ಧಿವಂತರು. ನಿಶಿತ ಪ್ರಜ್ಞೆ. ಕೊನೆಗೂ ಇವರನ್ನು ಕಡೆಗಣಿಸಿಯೇ ಇನ್ನೊಬ್ಬರಿಗೆ ಬಡ್ತಿ ಕೊಡಿಸಿದರು. ಇವರು 'ಹಾಳಾಗಲಿ' ಎಂದು ಸುಮ್ಮನಾದರು. ಆದರೆ ಅನಿರೀಕ್ಷಿತವಾಗಿ ಮೇಲಧಿಕಾರಿಗಳು ಇನ್ನೂ ಮೇಲೇರಿದರು. ಹೊಸಬರು ಬಂದರು. ನಿಷ್ಠಾವಂತರು ಇವರಿಗಾಗಿದ್ದ ಅನ್ಯಾಯವನ್ನು ಬಲ್ಲವರು. ಪ್ರಯತ್ನಪಟ್ಟು ಇವರ ಕಡತವನ್ನು ಚಲಿಸುವಂತೆ ಮಾಡಿದರು. ಎಲ್ಲ ಸುಗಮವಾಗಿ ಸಾಗಿದೆ ಎನಿಸಿತು. ಆದರೆ ಅಷ್ಟರಲ್ಲಿ ಅತ್ಯುನ್ನತ ಅಧಿಕಾರಿಗಳಲ್ಲಿಯೇ ಭಿನ್ನಾಭಿಪ್ರಾಯಗಳು, ವಿರಸಗಳು ಉಂಟಾದುವು. ಯೋಗ್ಯತಾಬಡ್ತಿಯ ಕಾಲಮಿತಿಯೂ ಮುಗಿಯುತ್ತಾ ಬಂತು. ಈ ಕಡತವೇ ಅವರಿಗೆ ಪರಸ್ಪರ ಆರೋಪಗಳನ್ನು ಹೊರಿಸಲು ಸಾಮಗ್ರಿ ಒದಗಿಸಿತು. ಆದರೇನು? ಇದರ ನೇರ ಪರಿಣಾಮ

ಇವರ ಮೇಲೆ ಕಾಲ ಮೀರಿ ಇನ್ನೇನು ಬಂತು ಎನ್ನುವ ಯಶಸ್ಸು ಹಿಂಜರಿಯಿತು. ಹೌದು ಇದು ಜಾತಕ ಲಕ್ಷಣವಲ್ಲದೆ ಇನ್ನೇನು? ಇಲ್ಲಿ ತೊಂದರೆ ಯಿಂದ ಯಶಸ್ಸು ಎನ್ನುವ ಮಾತಿನ ಮೊದಲ ಭಾಗ ಮಾತ್ರ ಸಾಫಲ್ಯ ಪಡೆದು ಯಶಸ್ಸು ಎಂಬುದು ಕನ್ನಡಿಯ ಗಂಟಾಗಿಬಿಡುತ್ತೆ.

ಈ ಕುರಿತು ಸ್ವಲ್ಪ ಯೋಚಿಸಿದ್ದೇನೆ. ಇದು ಕೇವಲ ಜಾತಕ ಲಕ್ಷಣವೂ ಅಲ್ಲ. ತೊಂದರೆಯ ಮಜಲಿನಿಂದ ಯಶಸ್ಸಿನ ಮಜಲು ಮುಟ್ಟಲು ತಕ್ಕ ಮನೋಭಾವ, ಪ್ರಯತ್ನಶೀಲತೆ ಇತ್ಯಾದಿ ಗಳು ಅಭ್ಯರ್ಥಿಯಲ್ಲಿರಬೇಕು.

ಇದರಲ್ಲಿ ಕನಿಷ್ಠ ಮೂರು ಬಗೆಗಳು. ಮೊದಲೇ ಹೇಳಿದೆನಲ್ಲ. ತೊಂದರೆಗಳೊಂದಿಗೇ ನಿಲ್ಲುವ, ಯಶಸ್ಸಿನ ಕುರುಹೇ ಇಲ್ಲ ದ್ದೊಂದು ವಿಧ. ಮೇಲೆ ಉದಾಹರಣೆ ಕೊಟ್ಟಿ ದ್ದೇನೆ. ತೊಂದರೆಗಳಾವುವೂ ಇಲ್ಲದೆಯೇ ಯಶಸ್ಸು ಪಡೆಯುವವರದೊಂದು ಬಗೆ. ಅಂತಹವರದು ಜ್ಯೋತಿಷಿಗಳ ಲೆಕ್ಕದಲ್ಲಿ 'ಅದೃಷ್ಟ ಜಾತಕ'ಗಳು; ಇಂತಹ ಕೆಲವರ ಪರಿ ಚಯವೂ ನನಗಿದೆ. ಇಂತಹವರಲ್ಲಿ ಕೆಲವರಾ ದರೂ ಶುದ್ಧ ಜೀವಿಗಳೂ ಹೌದು. ಆದರೂ ಇವರಿಗೂ ಹಿನ್ನೆಲೆಯಲ್ಲಿ ಯಾರಾದರೊಬ್ಬ God-father ಅಂತಾರಲ್ಲ ಅಂಥವರಿದ್ದೇ ಇರುತ್ತಾರೆ; ಇದ್ದೇ ಇರಬೇಕು. ಇವರು ಬ್ರಹ್ಮ ಚಾರಿಗಳಾಗಿದ್ದರಂತೂ ಸರಿಯೇ ಸರಿ. ಸ್ಥಾನ ಮಾನಗಳನ್ನು ಹೊಂದಿರುವವರು ಇವರನ್ನು ಬಲೆಗೆ ಕೆಡವಿಕೊಳ್ಳುತ್ತಾರೆ, ಮೇಲಕ್ಕೆ ತಳ್ಳು ತ್ತಾರೆ. ಇಲ್ಲಿ ತೊಂದರೆ-ವಿಘ್ನಗಳ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಬರೀ cake walk!

ಮೂರನೆಯ ಗುಂಪಿಗೆ ಸೇರಿದವರು ಯಶಸ್ಸಿ ಗಾಗಿಯೆ ತೊಂದರೆಗಳನ್ನೆದುರಿಸುವವರು. ನಮ್ಮ ಸಮಾಜದಲ್ಲಿ ಈ ಗುಂಪಿನದೇ ಬಹುಸಂಖ್ಯೆ! ಇತಿಹಾಸದ ವಿದ್ಯಾರ್ಥಿಯಾದ ನನಗೆ ಇವುಗಳಿಗೆ ಉತ್ತಮ ನಿದರ್ಶನಗಳು ಕಾಣಸಿಗುತ್ತವೆ. ಮೊಘಲ್ ಅರಸ ಬಾಬರ್ ಒಬ್ಬ. ಈತನಿಗೆ



ಯಶಸ್ಸಿನ ಮೇಲೆಯೇ ಕಣ್ಣು. ಹಿರಿದಾದ ಚಕ್ರಾಧಿಪತ್ಯಕ್ಕೆ ಒಡೆಯನಾಗುವ ಹಂಬಲ. ಆದರೆ ಇವನ ಪಾಲಿಗೆ ಲಭಿಸಿದ್ದು ಬರೀ ತೊಂದರೆಗಳೇ. ಎಲ್ಲವನ್ನೂ ಇದ್ದದ್ದನ್ನೂ ಕಳೆದುಕೊಂಡು ಭಿಕಾರಿಯಂತೆಯೂ ಆದ. ಭಾರತದಲ್ಲಿ ಮೊಘಲ್ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದ ಖ್ಯಾತಿ ಇವನದಾದರೂ ಇವನು ಪಟ್ಟ ಪಾಡುಗಳಿಗೆ ತಕ್ಕ ಪ್ರತಿಫಲವೇ ಅಲ್ಲ ಅದು. ಜೊತೆಗೆ ಅವನು ಕಟ್ಟಿದ ರಾಜ್ಯ ಮತ್ತೆ ಕುಸಿಯಿ ತೆಂದೇ ಹೇಳಬೇಕು. ಆದರೆ ಮುಹಮ್ಮದ್ ತೊಘ ಲಕ್ ನೋಡಿ. ಆತನದೂ ಇಂತಹದೇ ಬಯಕೆ. ಅದಕ್ಕಾಗಿ ಅಪರಿಮಿತವಾದ ತೊಂದರೆಗಳ ನ್ನೆದುರಿಸಿದ. ಆದರೆ ಆತ ಚಾಣಾಕ್ಷನಾಗಿರಲಿಲ್ಲ.

ಯಶಸ್ಸು ಬೇಕಿತ್ತೇ ಹೊರತು ಅದನ್ನು ಗಳಿಸಲು ತಕ್ಕ ವಿಚಕ್ಷಣಾಶೀಲ ಯೋಜನೆಗಳು ಅವನಲ್ಲಿರಲಿಲ್ಲ. ತಾನು ರೂಪಿಸಿದ ಯೋಜನೆಗಳು ತನಗೆ ಎಷ್ಟರಮಟ್ಟಿಗೆ ಯಶಸ್ಸನ್ನು ತಂದೀತು ಎಂಬುದನ್ನು ಯೋಚಿಸಲೂ ಇಲ್ಲ. ಅವನದು ವಿವೇಚನಾ ಶೂನ್ಯಪ್ರವೃತ್ತಿ.

ಯಶಸ್ಸಿಗಾಗಿ ತೊಂದರೆಗಳನ್ನನುಭವಿಸಿ ಯಶಸ್ಸನ್ನು ಕೊನೆಗೆ ಸಾಧಿಸುವವರು ದಕ್ಷ ಯೋಜಕರು — ಮೊದಲೇ ಎಲ್ಲವನ್ನೂ ನಿಯೋಜಿಸಿಕೊಂಡಿರುತ್ತಾರೆ. ಎಲ್ಲರೊಡನೆ ಹೇಗೆ ವರ್ತಿಸಬೇಕು ಎಂಬುದು ಇವರಿಗೆ ತಿಳಿದಿರುತ್ತದೆ. ರೊಟ್ಟಿಯ ಯಾವ ಭಾಗಕ್ಕೆ ಬೆಣ್ಣೆ ಹಚ್ಚಿದ್ದಾರೆ ಎಂಬುದನ್ನು ತಿಳಿದಿರುತ್ತಾರೆ. ಬೆಣ್ಣೆ ಹಚ್ಚುವ ಕೆಲಸದಲ್ಲೂ ನಿಷ್ಣಾತರಾಗಿರುತ್ತಾರೆ. ಇಂಥವರಿಗೆ ಹಲವಾರು ಮುಖವಾಡಗಳೂ ಇರುತ್ತವೆ. ತಮಗೆ ಅನುಕೂಲರಾದಂತಹ ಹಿರಿಯರಲ್ಲಿ ಭಯ, ಭಕ್ತಿ, ಗೌರವ, ಆದರಗಳು. ಸಮಾನರಲ್ಲಿ ತತ್ವನಿಷ್ಠೆಯ ಮಾತುಗಳು. ತತ್ವವೇ ಮೂರ್ತಿವೆತ್ತಂತಹ ನಡವಳಿಕೆ. ಕಿರಿಯರಲ್ಲಿ ದರ್ಪ. ನನಗೆ ತಿಳಿದವರೊಬ್ಬರಿದ್ದರು. ಅವರ ಯೋಗ್ಯತೆ ಎಲ್ಲರಿಗೂ ತಿಳಿದದ್ದೇ. ಆದರೂ ಅವರಷ್ಟು ಯಶಸ್ಸು ಗಳಿಸಿದವರಿನ್ನೊಬ್ಬರಿಲ್ಲ. ಯಾವುದೋ ಸಂದರ್ಭದಲ್ಲಿ ಉನ್ನತಾಧಿಕಾರಿಗಳೊಬ್ಬರ ಬಳಿ ಅವರ ಪ್ರಸ್ತಾಪ ಬಂದಾಗ "ಆ ಮನುಷ್ಯ ನೋಡೀಪ್ಪ Wonderful man. ಬಹಳ ಸ್ನೇಹಪರ. ನೋಡಿ, ಯಾವಾಗಲೂ ರಾತ್ರಿ ೯ರ ನಂತರ ಮನೆಗೇ ಬಂದು ಅನೇಕ ವಿಷಯಗಳನ್ನು ಚರ್ಚಿಸಿ ಹೋಗುತ್ತಿದ್ದರು. A fine fellow'' ಎಂದರು. 'ಆದರೆ, ಎಂದು ಗೊಣ



ಗಿದೆ. "ಕೆಲಸದ ವಿಷಯ ತಾನೇ? ಅಯ್ಯೋ ಅದನ್ನೆಲ್ಲಾ ಯಾರ್ರೀ ನೋಡ್ತಾರೆ? ಹೇಗೆ ನಿಭಾಯಿಸಿಕೊಂಡು ಹೋಗ್ತಾರೆ, ಹೇಗೆ ಎಲ್ಲರಲ್ಲೂ ಒಳ್ಳೆಯವರು ಎನಿಸಿಕೊಳ್ತಾರೆ ಎಂಬೋದು ಮುಖ್ಯಾರೀ. ಅವರ ಸಹೋದ್ಯೋಗಿಗಳೂ, ಕಚೇರಿಯವರೂ ಏನ್ರೀ ಸಾವಿರ ಹೇಳ್ತಾರೆ. ಬರೀ ಹೊಟ್ಟೆಕಿಚ್ಚು ಸ್ವಾಮಿ. Higher circlesನಲ್ಲಿ ಅವರ ವಿಷಯ ಕೇಳಿ. ಅದು important'' ಎಂದರು. ನಿಜವೇ ಎನಿಸಿತು.

ಲೌಕಿಕವಾಗಿ ಯಶಸ್ಸನ್ನು ಸಾಧಿಸಬೇಕಾದರೆ ಈ ನಡತೆ ಬೇಕು. ಆದರೆ ಇಂಥವರಿಗೆ ಮನಸ್ಸಮಾಧಾನ ಕಡಿಮೆ. ಯಾವಾಗಲೂ ತಾವು ನಿಂತ ನೆಲ ಜಾರದೆ ಇರುವಂತೆ ನೋಡಿಕೊಳ್ಳುತ್ತಲೇ ಇರಬೇಕು. ಇವರಲ್ಲಿ ಇನ್ನೂ ಒಂದು ಗುಣ ಇರುತ್ತೆ ಸ್ವಾಮಿ. ಇವರು ಎಲ್ಲರನ್ನೂ ತಮಗಾಗಿ ಬಳಸಿಕೊಳ್ಳುವುದರಿಂದ, ಯಾವಾಗ ಯಾರು ಇವರ ಹಿತೈಷಿಗಳು, ಯಾರು ಇವರ ಶತ್ರುಗಳು ಎಂಬೋದನ್ನು ಗುರುತು ಹಚ್ಚೋದೇ ಕಷ್ಟವಾಗಿ ಬಿಡುತ್ತೆ. ನಾನೇ ಕಂಡಿರುವ ಒಬ್ಬ ಹಿರಿಯ ವ್ಯಕ್ತಿ ಇನ್ನೊಬ್ಬರನ್ನು ಕುರಿತು 'ಅಯೋಗ್ಯ, ಸ್ವಾರ್ಥಿ, ತತ್ವಹೀನ, ಅನರ್ಹ' ಎಂಬ ಬಿರುದಾವಳಿಗಳನ್ನು ಬಳಸಿದ್ದರು. ಕೆಲವೇ ತಿಂಗಳುಗಳಲ್ಲಿ ಇವರ ಬಣ್ಣವೇ ಬದಲಾಗಿತ್ತು ಎಂಬುದರ ಸುಳಿವೂ ನನಗಿರಲಿಲ್ಲ. ಆ ಇನ್ನೊಬ್ಬರಿಂದ ಸ್ವಲ್ಪ ಮಟ್ಟಿನ ತೊಂದರೆಗೀಡಾಗಿದ್ದ ನಾನು ಇವರ ಬಳಿ 'ನೋಡಿ ಇವರೇ, ಹೀಗಾಯ್ತು. ಅವರು ಹೀಗೆ ಮಾಡಬಹುದೇ?' ಎಂದೆ. ಥತ್ ಎಂದು ಬಂತು ಉತ್ತರ. "ಅವರೇ? ಅವರು ಹೀಗೆ ಮಾಡಿದರೆ? No-No! ಅವರು ಅಂಥವರಲ್ಲವಲ್ಲ. ನೀವೇ ಎಲ್ಲೋ ಅಪಾರ್ಥ ಮಾಡಿಕೊಂಡಿದ್ದೀರಿ. ಆತ ಬಹಳ ಸಾಚಾ ವ್ಯಕ್ತಿ ಸ್ವಾಮಿ. ಇನ್ನೊಮ್ಮೆ ಕದಲಿಸಿ ನೋಡಿ. ಎಲ್ಲೋ ನೀವು ತಪ್ಪು ಕಲ್ಪ



ನೆಗೆ ಈಡಾಗಿದ್ದೀರಿ.' ದಂಗಾದೆ ಎನ್ನಬೇಕೇ? ನಂತರ ನೋಡ ನೋಡುತ್ತಿದ್ದಂತೆಯೇ ಅವರ ಸ್ನೇಹ ಗಾಢವಾಗಿ "ಪರಸ್ಪರಂ ಭಾವಯಂತಃ ಅಹೋ ರೂಪಮಹೋ ಧ್ವನಿಃ" ಆಯಿತು. ಅದು ಏಕೆ ಎಂಬುದೂ ತಿಳಿಯಿತು. ಆದರೆ ಇದು ಯಶಸ್ಸಿಗಾಗಿ ಅನುಭವಿಸುವ ತೊಂದರೆ. ಇಲ್ಲಿ ತೊಂದರೆ ಎಂಬುದು ವ್ಯರ್ಥವಾಗುವುದಿಲ್ಲವಲ್ಲ! ಇದು ಯಶಸ್ವೀ ತೊಂದರೆ.

ಈ ಸಂದರ್ಭದಲ್ಲಿ ನನಗೆ ಕರ್ನಾಟಕದ ಅರಸರ ಲೊಬ್ಬನಾದ ಕಲಚುರಿ ಬಿಜ್ಜಲನ ನೆನಪು ಬರುತ್ತೆ. ಎಂತಹ ಬುದ್ಧಿವಂತ ಸ್ವಾಮಿ ಅವನು. ನಿಸ್ಸಂಕೋಚವಾಗಿ ತಾನು ಮಾಡಿ-ದ್ದನ್ನು ಹೇಳಿಕೊಂಡಿದ್ದಾನೆ. ಅವನಿಗೂ ಅದೇ ಆಸೆ. ಚಕ್ರವರ್ತಿ ಆಗಬೇಕು ಎನ್ನುವುದು. ತನ್ನ ಕುಲದ ಬಗೆಗೆ ಸಂಶೋಧನೆ ಮಾಡಿದ. ಶತಮಾನಗಳ ಹಿಂದೆ ಕುಲಚುರಿಯ ಮೂಲ ಮನೆತನದವರು ಮಧ್ಯ ಪ್ರದೇಶದಲ್ಲಿ ಆಳಿದರು. ಅವರದೂ ಏನು ಮಹಾ ದೊಡ್ಡ ರಾಜ್ಯವೂ ಅಲ್ಲ. ಅವರಿಗೆ ತನ್ನ ತಾತ ಮುತ್ತಾತಂದಿರಿಗೂ ಇದ್ದಂತಹ ಸಂಬಂಧ ಎಂತಹುದು ಎಂಬುದು ಸಹ ಸರಿಯಾಗಿ ತಿಳಿಯದು. ಇಬ್ಬರದೂ ಕಲ ಚುರಿ ವಂಶ. ಆದರೂ ಈ ಒಂದು ಪಾಯಿಂಟ್ ಸಾಕಾಗಿತ್ತು ಅವನಿಗೆ ಸರಿ, ತನ್ನ ವಾದವನ್ನು ಸಿದ್ಧ ಪಡಿಸಿಕೊಂಡ. 'ಕಲಚುರಿವಂಶದಾದಿ ನೃಪರೆಲ್ಲರುತ್ತಮ ಚಕ್ರವರ್ತಿಗಳ್' ಎಂದು ಇರ ಬಹುದು. ಆದರೆ ಏನು? "ಹಾಂ, ನಮ್ಮ ಹಿರಿಯರು ಕೈಲಾಗದವರು. ಕೇವಲ ಮಂಡ-ಲೇಶ್ವರ ಪದವಿಗೆ ತೃಪ್ತಿ ಹೊಂದಿದವರು. 'ಅಂ ಬಲಯುತಂ' " ಓಹೋ, ಹಾಗೋ? ಅಷ್ಟಾದರೆ ಸಾಕೇ? ಅದಕ್ಕೂ ಉತ್ತರ ಸಿದ್ಧ-ವಿರಲಿ ಎನ್ನುವಂತೆ ಆ ವೇಳೆಗೆ ಚಾಲುಕ್ಯ ಚಕ್ರ ವರ್ತಿಯೊಡನೆ ಇವನ ತಾತ, ಸೋಮೇಶ್ವರ ನೊಡನೆ ಇವನ ತಂದೆ ಬೆಳೆಸಿದ್ದ ರಕ್ತಸಂಬಂಧ ವನ್ನು ಬಳಸಿಕೊಂಡ. ಅರಸು ಮನೆತನದ ರಕ್ತ ಸಂಬಂಧಿ ಎಂದ. ಅಷ್ಟು ಸಾಕೇ? ಸೋಮೇ ಶ್ವರನಿಗೇ ಉತ್ತರಾಧಿಕಾರಿಗಳಿದ್ದಾರಲ್ಲ? ನಿಂದೇನು ಎಂತ ಕೇಳಿದಿರಾ? ಅವನದು ಬಹಳ Simple ಉತ್ತರ ಸ್ವಾಮಿ—ವೀರಭೋಜ್ಯಾ ವಸುಂಧರಾ! ಅರಸು ಮಕ್ಕಳಾದರೆ ಆಯಿತೋ? ಅವರಿಗೆ ವೀರ್ಯ ಇರಬೇಡವೇ? ಭೂಪತಿ ಯಾದವನು ವೀರನಾಗಿರಬೇಕು. ಅವರಿಗದಿಲ್ಲ-ವಲ್ಲ. ಒಪ್ಪತಕ್ಕ ಮಾತುಗಳೇ. ಹೀಗೆ ಯೋಚಿಸಿ ಅದಕ್ಕಾಗಿ ಇನ್ನಷ್ಟು ತೊಂದರೆಗಳನ್ನು ಅನು ಭವಿಸಿ, ಅನ್ಯರಿಂದ ಅವಮಾನಿತನಾಗಿ, ಅವರನ್ನು ಅವಮಾನಗೊಳಿಸಿ, ದಂಗೆ ಎದ್ದು, ಅರಸು ಕುಮಾರನನ್ನು ಕೊಂದು ಪಟ್ಟಕ್ಕೆ ಬಂದ. ಅವನು ಪಟ್ಟ ಶ್ರಮ ಒಂದೇ ಎರಡೇ. ಕೊನೆಗೂ ಸಿಂಹಾಸನ ಸಾಧಿಸಿದ. ಆದರೆ ಮಹಾ ಮೂರ್ಖ ಸ್ವಾಮಿ. ಇಲ್ಲಿಯವರೆಗೂ ಬಳಸಿದ ಬುದ್ಧಿ ಮತ್ತೆಯ ಡಿಪಾಸಿಟ್ ಶೂನ್ಯವಾಗಿತ್ತು. ಪದವಿ ಬೇರೆ ಬಂತು. ಸಿಂಹಾಸನದ ಮೇಲೆ ಕುಳಿತವನಿಗೆ ರಾಜ್ಯದ ಆಗು ಹೋಗುಗಳ ಪರಿಕಲ್ಪನೆಯೇ ಇರದಿದ್ದರೆಂತು? ಸಮಾಜದಲ್ಲಿ ಆಗುತ್ತಿದ್ದ ಬದಲಾವಣೆಗಳೊಡನೆ ಬೆರೆತು, ಅದನ್ನು ಅರಿತು ಹೊಂದಿಕೊಂಡು ಹೋಗಿದ್ದರೆ ಗಳಿಸಿದ ಯಶಸನ್ನು ಉಳಿಸಿಕೊಳ್ಳಬಹುದಿತ್ತು. ಆದರೆ ಇವನ ಚಾಣಾಕ್ಷತೆ ಅಷ್ಟಕ್ಕೆ ಸೀಮಿತವಾಗಿತ್ತು. ಸಿಂಹಾಸನವನ್ನೇರಿದ ಐದು ವರ್ಷಗಳಲ್ಲಿಯೇ ಸಾಕಪ್ಪಾ ಸಹವಾಸ ಎನಿಸಿಬಿಟ್ಟಿತ್ತು. ಅಧಿಕಾರ ವನ್ನು ಮಕ್ಕಳಿಗೆ ಸೋದರರಿಗೆ ಹಂಚಿಬಿಟ್ಟ.

ಇದೆಲ್ಲ ನೋಡಿದಾಗ ಅನಿಸುತ್ತೆ. ಕೇವಲ ತೊಂದರೆ, ಕೇವಲ ಯಶಸ್ಸು. ಯಶಸ್ಸಿಗಾಗಿ ತೊಂದರೆ — ಯಶಸ್ವೀ ತೊಂದರೆ — ಇವು ಮೂರು ಮುಖಗಳು. ಜ್ಯೋತಿಷಿಗಳು ತೊಂದರೆಯಿಂದ ಯಶಸ್ಸು ಎಂದುದು ಹೇಗೆ ಎಂಬುದು ಅರ್ಥವಾಗ್ತಾ ಇಲ್ಲ. ✡

# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದಭಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಚಮತ್ಕಾರ
(ಅ) ಚರ್ಮಹದಮಾಡುವಿಕೆ (ಆ) ನೀರು ಚೀಪುವುದು (ಇ) ಹೊಳಪು (ಈ) ಸೋಜಿಗ

೨. ರೋಡಿಸು
(ಅ) ತಿರಸ್ಕರಿಸು (ಆ) ಅಳು (ಇ) ದಾರಿ ಹಿಡಿ (ಈ) ಕಾಡು

೩. ರೋಮಂಥ
(ಅ) ರೋಮ ತುಂಬಿದ (ಆ) ನವಿರಾದ (ಇ) ಮೆಲುಕು ಹಾಕುವುದು (ಈ) ಸುಂದರ

೪. ಪೋಕ
(ಅ) ಉಂಡಾಡಿ (ಆ) ಅಂಜುಬುರುಕ (ಇ) ಟೊಳ್ಳು (ಈ) ಅಡಿಗೆ

೫. ರಹಸ್ಯ
(ಅ) ಒಟ್ಟಿಗೆ ಬಾಳುವುದು (ಆ) ಒಳ್ಳೇ ರುಚಿ (ಇ) ಧೈರ್ಯ (ಈ) ಗುಟ್ಟು

೬. ಆಂಚಲಿಕ
(ಅ) ಅಂಚಿನಲ್ಲಿರುವ (ಆ) ನಿಂತಲ್ಲಿ ನಿಲ್ಲದ (ಇ) ಕಣ್ಮರೆಯಾದ (ಈ) ಸ್ಥಿರವಾದ

೭. ಆಹತ
(ಅ) ಸುಟ್ಟುಹೋದ (ಆ) ಹೊಡೆಯಲ್ಪಟ್ಟ (ಇ) ಹುಡುಕಿ ತಂದ (ಈ) ಕರೆಯಲ್ಪಟ್ಟ

೮. ಅಪರಿಗ್ರಹ
(ಅ) ದುರದೃಷ್ಟ (ಆ) ಕಳೆದು ಹೋಗುವಿಕೆ (ಇ) ದಾನ ತೆಗೆದುಕೊಳ್ಳದಿರುವುದು (ಈ) ಕ್ಷುದ್ರಗ್ರಹ

೯. ಚಿತ್ತು
(ಅ) ಅಂಗತ್ತ ಬೀಳುವುದು (ಆ) ಪ್ರೇರಣೆ (ಇ) ಹುಂಡು ಹುಂಡಾದ್ದು (ಈ) ಚಿಕ್ಕ ತುಣುಕು

೧೦. ತಂಗದಿರು
(ಅ) ಧರ್ಮಶಾಲೆ (ಆ) ಬೆಳುದಿಂಗಳು (ಇ) ಸಾಕೋಸಾಕಾಗು (ಈ) ಆಶ್ಚರ್ಯಕರವಾದ್ದು

೧೧. ಅಶೇಷ
(ಅ) ಗರುಡ (ಆ) ಉಳಿದದ್ದು (ಇ) ಒಂದೂ ಬಿಡದಂತೆ (ಈ) ಹರಸುವಿಕೆ

೧೨. ಅಳ್ಳೆದೆ
(ಅ) ಎದೆಯ ಪಕ್ಕ (ಆ) ಅಲುಗಾಡದ ಎದೆ (ಇ) ಬಡಕಲು ಎದೆ (ಈ) ಅಂಜುವ ಸ್ವಭಾವ



# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. ಚಮತ್ಕಾರ (ಈ) ಸೋಜಿಗ, ಆಶ್ಚರ್ಯ ಆಶ್ಚರ್ಯಕರ ಘಟನೆ; ಸೋಜಿಗವಾಗುವಷ್ಟು ಚುರುಕಾಗಿ ಕೆಲಸ ಮಾಡುವಿಕೆ. ಉದಾ:— ಬದುಕಿನಲ್ಲಿ ಲೆಕ್ಕವಿಲ್ಲದಷ್ಟು ಚಮತ್ಕಾರಗಳು. [ಸಂ.]

೨. ರೋಡಿಸು (ಅ) ತಿರಸ್ಕರಿಸು, ಕೀಳುಗಳೆ, ಅವಮಾನಿಸಿ ಮಾತಾಡು. ಉದಾ:— ಸೋಸೆ ರೋಡಿಸಿದಳು. [ದೇಶ್ಯ]

೩. ರೋಮಂಥ (ಇ) ಮೆಲುಕು ಹಾಕುವಿಕೆ ಮೆಲುಕಾಡಿಸುವ ಜೀಕೆ, ಆಕಳು ಮೊದಲಾದ ಪ್ರಾಣಿ ವರ್ಗ; (ಆದ್ದರಿಂದ) ಬಾಯಿ ಪಾಠ ಮಾಡುವುದು. [ಸಂ.]

೪. ಪೋಕ (ಅ) ಉಂಡಾಡಿ, ಅಲೆಯುವ ಸ್ವಭಾವದವ; ಕೆಲಸಕ್ಕೆ ಬಾರದವ. ಉದಾ:—ಕಾಕ ಪೋಕರಿಗೆಲ್ಲ ಆಶ್ರಯ ಕೊಡುತ್ತಾನೆ. [ದೇಶ್ಯ–ಪೋ = ಹೋಗು ಎಂಬುದರಿಂದ)

೫. ರಹಸ್ಯ (ಈ) ಗುಟ್ಟು, ಗುಪ್ತ ಸಂಗತಿ; (ಆದ್ದರಿಂದ) ಆಳವಾದ ಅರ್ಥ. ಉದಾ:— ಸೃಷ್ಟಿ ತನ್ನ ರಹಸ್ಯಗಳನ್ನು ಇನ್ನೂ ಉಳಿಸಿಕೊಡಿದೆ. [ಸಂ.]

೬. ಆಂಚಲಿಕ (ಅ) ಅಂಚಿನಲ್ಲಿರುವ, ಗಡಿ ಪ್ರದೇಶದಲ್ಲಿರುವ. ಉದಾ:— ರೋಗ ಆಂಚಲಿಕ ಸ್ಥಿತಿ ತಲಪಿದೆ. [ಸಂ. ಆಂಚಲ = ಅಂಚು—ಎಂಬುದರಿಂದ]

೭. ಆಹತ (ಅ) ಹೊಡೆಯಲ್ಪಟ್ಟ, ಪೆಟ್ಟು, ಬಡಿಯುವ ಮದ್ದಳೆ ಮೊದಲಾದ ವಾದ್ಯ. ಉದಾ:—ಮರ್ಮಾಹತನಾದನು. [ಸಂ.]

೮. ಅಪರಿಗ್ರಹ (ಇ) ದಾನ ತೆಗೆದುಕೊಳ್ಳದಿರುವ ವ್ರತ; ಏನನ್ನೂ ಪುಕ್ಕಟೆ ಪಡೆಯದಿರುವ ಸಂಕಲ್ಪ. [ಸಂ. ಅ = ಅಲ್ಲ + ಪರಿಗ್ರಹ = ತೆಗೆದುಕೊಳ್ಳುವಿಕೆ]

೯. ಚಿತ್ತು (ಅ) ಅಂಗತ್ತ ಬೀಳುವುದು, ಮುಖ ಮೇಲಾಗಿ ಬೀಳುವುದು; ಬರವಣಿಗೆಯಲ್ಲಿ ಆದ ತಪ್ಪು. ಉದಾ:— ಜಟ್ಟಿ ಚಿತ್ತಾದನು [ಹಿಂದಿ—ಚಿತ್ = ಅಂಗಾತ ಬೀಳುವಿಕೆ.]

೧೦. ತಂಗದಿರು (ಅ) ತಂಪಾದ ಬೆಳಕು, ಬೆಳುದಿಂಗಳು, (ಆದ್ದರಿಂದ) ತಂಗದಿರ = ಚಂದ್ರ) ಉದಾ:—ತಂಗದಿರು ಸೂಸುವ ಮುಖ. [ದೇಶ್ಯ—ತಣ್ = ತಂಪು + ಕದಿರ್ = ಕಿರಣ, ಬೆಳಕು]

೧೧. ಅಶೇಷ (ಇ) ಬಾಕಿ ಇಲ್ಲದ, (ಆದ್ದರಿಂದ) ಸಕಲ, ಎಲ್ಲವನ್ನೊಳಗೊಂಡು. ಉದಾ:— ಅಶೇಷ ಸಜ್ಜನರಿಗೆ ಪ್ರಿಯ. [ಸಂ. ಅ = ಅಲ್ಲ + ಶೇಷ = ಬಾಕಿ]

೧೨. ಅಳ್ಳೆದೆ (ಈ) ಅಂಜುವ ಸ್ವಭಾವ, ದುರ್ಬಲ ಮನಸ್ಸು. ಉದಾ:—ಅಳ್ಳೆದೆಯವರಿಗೆ ರಾಜಕೀಯ ಸಲ್ಲ. [ದೇಶ್ಯ ಅಳ್ = ನಡುಗುವ + ಎದೆ]

## ನಿಮ್ಮ ಶಬ್ದ ಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬–೮ | ಸರಿಯಿದ್ದರೆ | ... ಸಾಧಾರಣ |
| ೮–೧೦ | ,, | ... ಉತ್ತಮ |
| ೧೧–೧೨ | ,, | ... ಅತ್ಯುತ್ತಮ |

ಅನಿಸಿಕೆ

# ಏಕೆ ಈ ಆಷಾಢಭೂತಿತನ?

ಎಚ್. ವಿ. ಶ್ರೀಧರ

ಮತದಾರ ಎಚ್ಚೆತ್ತಿದ್ದಾನೆ; ಈಗ ಆತ ಯಾವ ಹಣದ ಆಮಿಷಕ್ಕೂ ಒಳಗಾಗದೆ, ತನಗೆ ಸರಿ ಕಂಡ ಅಭ್ಯರ್ಥಿಯನ್ನೇ ಆಯ್ಕೆ ಮಾಡುವಂತಹ ಬುದ್ಧಿಶಕ್ತಿ ಪಡೆದುಕೊಂಡಿದ್ದಾನೆ." ಎಂದು ಚುನಾವಣೆಗೆ ಮುನ್ನ ಎಲ್ಲ ರಾಜಕೀಯ ಪಕ್ಷದ ಮುಖಂಡರೂ ತಮ್ಮ ಚುನಾವಣಾ ಪ್ರಸಾರ ಭಾಷಣದಲ್ಲಿ ಹೇಳುತ್ತಾರೆ. ಪತ್ರಿಕೆಗಳೂ 'ಚುನಾವಣಾ ವಿಶ್ಲೇಷಣೆ'ಯಲ್ಲಿ ಇದೇ ಅರ್ಥ ಬರುವಂತೆ ತಮ್ಮ ಅಭಿಪ್ರಾಯಗಳನ್ನು ಪ್ರಚುರ ಪಡಿಸಿರುತ್ತವೆ. ಆದರೆ, ಈ ಹೇಳಿಕೆಗಳು ಚುನಾವಣೆ ಫಲಿತಾಂಶ ಬಂದನಂತರ ಎಷ್ಟರಮಟ್ಟಿಗೆ ತಮ್ಮತನವನ್ನು ಕಾಯ್ದುಕೊಳ್ಳುತ್ತವೆ?

ಆಡಳಿತ ಪಕ್ಷ ಒಂದು ಚುನಾವಣೆಯಲ್ಲಿ ಜಯ ಗಳಿಸಿದ್ದಲ್ಲಿ, ವಿರೋಧ ಪಕ್ಷದವರು "ಈ ಬಾರಿ ಚುನಾವಣೆಯಲ್ಲಿ ಭಾರಿ ಮೋಸ ನಡೆದಿದೆ. ಸರಕಾರಿ ಯಂತ್ರದ ದುರುಪಯೋಗ ಯಥೇಚ್ಛವಾಗಿ ನಡೆದಿದೆ ಮತ್ತು ಹಣ, ವಸ್ತ್ರ, ಶರಾಬುಗಳನ್ನು ನೀಡಿ ಮತಗಳನ್ನು ಖರೀದಿಸಲಾಯಿತು" ಎಂದು ತಮ್ಮ ಸೋಲನ್ನು ಮುಚ್ಚಿಟ್ಟುಕೊಂಡು ಅಪಾದನೆಗಳ ಮಳೆಯನ್ನೇ ಸುರಿಸುತ್ತಾರೆ. "ಎಲ್ಲ ರೀತಿಯ ಪ್ರಲೋಭನೆಗಳಿಂದ ಮತದಾರರನ್ನು ಒಲಿಸಿಕೊಳ್ಳಲಾಯಿತು" ಎಂದು ಟೀಕಿಸಿದರೆ, ಇವರನ್ನೂ ಒಳಗೊಂಡಂತೆ ಎಲ್ಲರೂ "ಎಚ್ಚೆತ್ತ ಮತದಾರ," "ತನ್ನ ಹಕ್ಕನ್ನು ಸಮರ್ಥವಾಗಿ ಬಳಸಿಕೊಳ್ಳುವ ವ್ಯಕ್ತಿ" ಮುಂತಾಗಿ ಚುನಾವಣೆಗೆ ಮುನ್ನ ಮಾಡಿದ ಆವೇಶಯುಕ್ತ ಭಾಷಣಗಳಿಗೆ ಏನು ಬೆಲೆ? ಅವರೆಲ್ಲರ ಹೇಳಿಕೆಯಂತೆ, ಸಾರ್ವಜನಿಕರು ದಿಟವಾಗಿಯೂ ಸೂಕ್ತ ವ್ಯಕ್ತಿಗೇ ಮತ ನೀಡಿ ಆತನನ್ನು ವಿಜಯಿಯಾಗಿಸಿದ್ದರೆ, ಪರಾಭವಗೊಂಡವರು ತಮ್ಮ ವೈಫಲ್ಯವನ್ನು ಒಪ್ಪಿಕೊಳ್ಳಬೇಕಲ್ಲವೆ? ಅಥವಾ, ಮತ ನೀಡುವ ಪ್ರಜೆಗಳು ದ್ರವ್ಯ ಮತ್ತಿತರ ವಸ್ತುಗಳನ್ನು ಸ್ವೀಕರಿಸಿಯೇ ಮತ ಚಲಾಯಿಸುವಂತಿದ್ದರೆ ಚುನಾವಣೆಗೆ ಮುನ್ನ ಹೊಗಳುಭಟ್ಟಂಗಿತನ ಏಕೆ? ಇದು ವಿರೋಧಿ ಪಕ್ಷದವರು ಗೆದ್ದಾಗಲೂ "ಜಾತಿಯ ಆಧಾರದ ಮೇಲೆ ಅಥವಾ ಹೇರಳ ರಾಜಧನದ ಸಹಾಯದಿಂದ ಮಾತ್ರ ಅವರು ಸಫಲರಾದರು" ಎಂದು ಹೇಳಿಯೋ ಅಥವಾ ಬೇರಿನ್ನಾವುದೋ ಒಂದು ಕಾರಣ ನೀಡಿಯೋ ಆಡಳಿತ ಪಕ್ಷದವರು ಇದುವರೆಗಿನ ತಮ್ಮ ನಿಷ್ಕ್ರಿಯತೆ, ಆಡಳಿತ ಲೋಪ ದೋಷಗಳು, ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಮುಂತಾದ ದುಷ್ಟ, ಧಾರ್ಷ್ಟ್ಯ ಶಕ್ತಿಗಳನ್ನು ಮುಚ್ಚಿಟ್ಟುಕೊಳ್ಳುತ್ತಾರೆ.

ಯಾವ ಪಕ್ಷ ಅಥವಾ ಯಾವುದೇ ವ್ಯಕ್ತಿ ಈ ಸಂದರ್ಭದಲ್ಲಿ ಗೆಲ್ಲಲಿ, ಮತದಾರ ನಿಜವಾಗಲೂ ಎಚ್ಚೆತ್ತಿದ್ದಾನೆಯೇ? ಚುನಾವಣಾ ಫಲಿತಾಂಶ ಬಂದ ನಂತರ ವಿಫಲಗೊಂಡವರಿಂದ ಉದುರುವ ಅಣಿಮುತ್ತುಗಳು ಅಪ್ಪಿತಪ್ಪಿಯಾದರೂ ಚುನಾವಣೆಗೆ ಮುನ್ನ ಉದುರುತ್ತವೆಯೆ? ✡

# ಒಂದು ಲೋಹದ ಅಂತರಿಕ್ಷ ಯಾತ್ರೆ

ಟಿ. ಕೆ. ನಾಗಭೂಷಣ

೧೯೭೭ರ ಬೇಸಿಗೆಯ ಒಂದು ದಿನ. ರಶಿಯದ ಬೋರಿಸ್ ವೊಲಿನೋವ್ ಮತ್ತು ವೈಟಾಲಿ ಜೋಲೋಬೊವ್ ಸಾಲ್ಯುತ್— ೫ (ಭೂಕಕ್ಷೆಯಲ್ಲಿದ್ದ ಸಂಶೋಧನಾ ಠಾಣೆ)ರಲ್ಲಿ ಪ್ರಯೋಗ-ಗಳನ್ನು ಮಾಡಿ ಮುಗಿಸಿರುವುದಾಗಿ ಹಾರಾಟ ನಿಯಂತ್ರಣ ಕೇಂದ್ರಕ್ಕೆ ವರದಿ ಮಾಡಿದರು.

ಗಗನಯಾನಿಗಳು ನಂಬಲು ಅಸಾಧ್ಯವಾದಷ್ಟು ವಿವಿಧ ತಾಂತ್ರಿಕ ಕ್ಷೇತ್ರಗಳಲ್ಲಿ ಪರಿಣತಿಯನ್ನು ಅತ್ಯಗತ್ಯವಾಗಿ ಪಡೆದಿರಬೇಕಾಗುತ್ತದೆ ಬಾಹ್ಯಾಕಾಶದಲ್ಲಿನ ಅವರ ಕೆಲಸಗಳನ್ನು ಎಣಿಸುವುದೂ ಕಷ್ಟ. ಅವರು ಭೂಗರ್ಭಶಾಸ್ತ್ರಜ್ಞರಾಗಿ. ಜೀವಶಾಸ್ತ್ರಜ್ಞರಾಗಿ. ವೈದ್ಯರಾಗಿ. ಭೌತಶಾಸ್ತ್ರಜ್ಞರಾಗಿ ಹಾಗೂ ರಾಸಾಯನಿಕ ಶಾಸ್ತ್ರಜ್ಞರಾಗಿ ಕೆಲಸಮಾಡಬೇಕಾಗುತ್ತದೆ. ಈ ಪ್ರಯೋಗಗಳನ್ನು ನಡೆಸಲು ಅವರು ಲೋಹಶಾಸ್ತ್ರಜ್ಞರೂ ಆಗಬೇಕಾಗಿತ್ತು. ಗುರುತ್ವಾಕರ್ಷಣಾತೀತ ಸನ್ನಿವೇಶದಲ್ಲಿ ಲೋಹವೊಂದು ದ್ರವರೂಪದಿಂದ ಘನೀಕರಣಗೊಳ್ಳುವ ವಿಧಾನವನ್ನು ಆ ವಿಜ್ಞಾನಿಗಳು ಅಭ್ಯಸಿಸುತ್ತಿದ್ದರು. ತೂಕರಹಿತವಾದ ಪರಿಸರದಲ್ಲಿ ಆದರ್ಶವಾದ ಲೋಹದ ಗೋಳಗಳನ್ನು ಪಡೆಯಲು ಅವರು ಪ್ರಯತ್ನಿಸಿದರು.

ಇದಕ್ಕೆ ಸಾಧನವೇನಾಗಿತ್ತು? ಬಾಹ್ಯಾಕಾಶ ಲೋಹಶಾಸ್ತ್ರದ ಚರಿತ್ರೆಯಲ್ಲಿ ಮೊಟ್ಟಮೊದಲ ಸ್ಥಾನವನ್ನು ಪಡೆಯಲಿದ್ದ ಆ ಲೋಹ ಯಾವುದಾಗಿತ್ತು? ದ್ರವೀಕರಿಸಬೇಕಾಗಿದ್ದ ಲೋಹದ ಸಣ್ಣ ಉಂಡೆಗಳನ್ನೊಳಗೊಂಡ ಪೆಟ್ಟಿಗೆಯನ್ನು ಹೊಂದಿದ್ದ ಸಾಧನದೊಡನೆ ಒಂದು ವಿದ್ಯುತ್ ಹೀಟರ್ ಮತ್ತು ಒಂದು ಸಣ್ಣದಾದ ಪಾರದರ್ಶಕ ಚೀಲ ಇದ್ದವು. ವಿಜ್ಞಾನಿಗಳು ಪ್ರಯೋಗಕ್ಕಾಗಿ ಆರಿಸಿದ್ದ ವುಡ್ಸ್ ಮಿಶ್ರಲೋಹ (ಬಿಸ್ಮತ್, ಸೀಸ, ತವರ ಮತ್ತು ಕ್ಯಾಡ್ಮಿಯಂ ಕ್ರಮವಾಗಿ ೪: ೨: ೧: ೧ ಹೊಂದಿರುವ) ಲೋಹಶಾಸ್ತ್ರಜ್ಞರಿಗೆ ನೂರು ವರ್ಷಗಳಿಗಿಂತ ಹಿಂದಿನಿಂದಲೂ ತಿಳಿದಿದ್ದೇ ಆಗಿತ್ತು. ಅದರ ಅತ್ಯಂತ ಕೆಳಮಟ್ಟದ ದ್ರವೀಭವನ ಬಿಂದು (ಸುಮಾರು ೭೦ ಸೆಂ) ಗಗನದಲ್ಲಿ ಮಾಡಬೇಕಾಗಿದ್ದ ಪ್ರಯೋಗಗಳಿಗೆ ಉಪಯುಕ್ತವಾಗಿತ್ತು ತೀವ್ರವಾಗಿ ಕರಗುವ ಲೋಹವನ್ನು ಕರಗಿಸಲು ಬೇಕಾಗುವ ಸಾಧನ ಸರಳವಾಗಿಯೂ ಅಚ್ಚುಕಟ್ಟಾಗಿಯೂ ಇರುತ್ತದೆ. ಬಾಹ್ಯಾಕಾಶದಲ್ಲಿ ಇದರ ಪ್ರಾಮುಖ್ಯ ಎಷ್ಟೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೆ.

ಗೊತ್ತಾದ ಸಮಯಕ್ಕೆ ಸರಿಯಾಗಿ ಗಗನಯಾನಿಗಳು ಈ ಸಾಧನವನ್ನು ಕೆಲಸಕ್ಕೆ ತಂದರು.

ಸೀಸದ ಕಡ್ಡಿಯ ತುಂಡನ್ನು ಹೋಲುತ್ತಿದ್ದ ಸಣ್ಣ ಲೋಹದ ತುಂಡೊಂದನ್ನು ಮೇಲಿನ ರೀತಿಯ ಹೀಟರಿನ ನಳಿಕೆಯೊಳಗೆ ಹಾಕಲಾಯಿತು. ಇಂತಹ ಪ್ರಯೋಗವನ್ನು ಭೂಮಿಯ ಮೇಲೆ ಮಾಡಿದ್ದರೆ ಹನಿ ಕೆಳಕ್ಕೆ ಬಿದ್ದಿರುತ್ತಿತ್ತು. ಬಾಹ್ಯಾಕಾಶದಲ್ಲಿ ತೂಕರಹಿತವಾದ ಕಾರಣ ದ್ರವಲೋಹದ ಉಂಡೆ ಬೀಳುವುದೇ ಇಲ್ಲ. ಪೆಟ್ಟಿಗೆಯ ಒಳಭಾಗವನ್ನು ತಲಪುವುದರಲ್ಲಿ ಅದು ಘನೀಕರಿಸುವಂತೆ, ಅದು ಹೀಟರಿನಿಂದ ಹೊರ ಬೀಳುವ ವೇಗ ಮತ್ತು ಅದನ್ನು ಹಿಡಿದಿಡುವ ಚೀಲದ ಗಾತ್ರವನ್ನು ನಿರ್ಧರಿಸಲಾಗಿರುತ್ತದೆ. ಆದರಿಂದ ಲೋಹದ ಸಣ್ಣ ಕಣಗಳು ಮಣಿಯಾಗಿ ಹೆಣೆದುಕೊಂಡ ಚಾಪೆಯಂತಾಗುತ್ತವೆ.

ಇಂತಹ ಪ್ರಯೋಗದ ಉದ್ದೇಶವೇನಾಗಿತ್ತು? ಅದರ ಪ್ರಾಯೋಗಿಕ ಉಪಯುಕ್ತತೆ ಏನು? ಕೇವಲ ಕೆಲವು ಮಣಿಗಳನ್ನು 'ಪಡೆಯುವುದಕ್ಕೆಂದು ಬಾಹ್ಯಾಕಾಶದಲ್ಲಿ ಇಷ್ಟೆಲ್ಲಾ ಶ್ರಮ ಪಟ್ಟಿದ್ದಾದರೂ ಏಕೆ?

ಭೂಮಿಗೆ ತಂದ ನಂತರ ವಿಜ್ಞಾನಿಗಳು ಅನೇಕ ಪ್ರಯೋಗಶಾಲೆಗಳಲ್ಲಿ ಅಂತಹ ಲೋಹದ ಮಣಿಗಳನ್ನು ಪರಿಶೀಲಿಸಿದರು. ಅವು ಘನ ರೂಪಕ್ಕೆ ಬರುವಲ್ಲಿ ಅಂಡಾಕೃತಿಯನ್ನು ಪಡೆದು ತಣ್ಣಗಾದಾಗ ಈರುಳ್ಳಿಯ ಆಕಾರವನ್ನು ಹೊಂದಿದವೆಂಬುದು ತಿಳಿದುಬಂತು. ಅದಲ್ಲದೆ ಬಾಹ್ಯಾಕಾಶದಲ್ಲಿ ವುಡ್ಸ್ ಮಿಶ್ರಲೋಹ ತನ್ನ ಏಕರೂಪತೆಯನ್ನು ಕಳೆದುಕೊಳ್ಳುತ್ತದೆ.

ಅಂತಹ ಪ್ರಯೋಗಗಳನ್ನು ಮುಂದುವರಿಸಲಾಗುತ್ತಿದೆ. ಒಂದು ಬೇರಿಂಗ್‌ಗೆ ಬೇಕಾಗುವ ಗುಂಡನ್ನು ಭೂಪರಿಸರದಲ್ಲಿ ತಯಾರಿಸಲು ೧೧ ಬಗೆಯ ಕ್ರಮಗಳನ್ನು ಅನುಸರಿಸ ಬೇಕಾಗುತ್ತದೆಯಲ್ಲದೆ ಸಾಕಷ್ಟು ಪ್ರಮಾಣದಲ್ಲಿ ಲೋಹವನ್ನು ಕಳೆದುಕೊಳ್ಳಬೇಕಾಗುತ್ತದೆ, ಜೊತೆಗೆ ಗುಂಡಿನ ಮೇಲ್ಮೈ ಪದರದ ರಚನೆ ಯಾವಾಗಲೂ ಆದರ್ಶವಾಗಿರುವುದಿಲ್ಲ. ಆದುದರಿಂದಲೇ ಮುಂದೊಂದು ಕಾಲದಲ್ಲಿ ಗೋಳಾಕೃತಿಯ ಬೇರಿಂಗುಗಳನ್ನು ತಯಾರಿಸುವ ಕಾರ್ಖಾನೆಯೊಂದನ್ನು ಬಾಹ್ಯಾಕಾಶದಲ್ಲಿ ಆರಂಭಿಸಬಹುದೆಂದು ಆಶಿಸಬಹುದಾಗಿದೆ.

ಆದಕ್ಕಾಗಿ ವುಡ್ಸ್ ಮಿಶ್ರಲೋಹದ ಗಗನ ಯಾನಕ್ಕೆ ತಗಲುವ ಖರ್ಚಿನ ಜೊತೆಗೆ ಬಡ್ಡಿಯನ್ನೂ ಹಿಂದಕ್ಕೆ ಪಡೆಯಬಹುದೆನ್ನಲಾಗುತ್ತಿದೆ. ಆದರೀಗ ಸದ್ಯಕ್ಕೆ ಧರೆಗಿಳಿದ ವುಡ್ಸ್ ಮಿಶ್ರ ಲೋಹದ ಮುಖ್ಯ ಅಂಗವಾದ ಬಿಸ್ಮತ್ ಲೋಹದ ಬಗ್ಗೆ ತಿಳಿದುಕೊಳ್ಳೋಣ.

ಬಿಸ್ಮತ್ ಬೆಳ್ಳಿಯ ಬಿಳುಪಿನೊಡನೆ ತಿಳಿಗುಲಾಬಿ ಮಿಶ್ರಿತ ಬಣ್ಣವನ್ನು ಹೊಂದಿದೆ. ೧೫ನೇ ಶತಮಾನದ ರಸಾಯನಶಾಸ್ತ್ರಜ್ಞರು ಅದನ್ನು ಸೀಸ, ತವರ ಅಥವಾ ಆ್ಯಂಟಿಮನಿಯೆಂದು ಹಲವಾರು ಬಾರಿ ತಪ್ಪಾಗಿ ತಿಳಿಯುತ್ತಿದ್ದರೂ ಅಂದಿನ ರಸಾಯನ ಶಾಸ್ತ್ರದ ಸಾಹಿತ್ಯದಲ್ಲಿ ಅದರ ಮೊದಲ ಉಲ್ಲೇಖ ಕಾಣಸಿಗುತ್ತದೆ. ರಸಸಿದ್ಧಾಂತಿಗಳ ಶಬ್ದಕೋಶದಲ್ಲಿ ಅದನ್ನು "ಅತ್ಯಂತ ಹಗುರವಾದ, ಮಂದ ಬಣ್ಣದ ಹಾಗೂ ಅತಿ ಅಗ್ಗದ ಸೀಸ ಎಂದು ವಿವರಿಸಲಾಗಿದೆ. ಅದೇ ಸಮಯದಲ್ಲಿ ಪ್ರಸಿದ್ಧ ಧಾತುಶಾಸ್ತ್ರಜ್ಞ ಹಾಗೂ ಲೋಹಶಾಸ್ತ್ರಜ್ಞ ಜಾರ್ಜಿಯಸ್ ಅಗ್ರಿ ಕೋಲಾ ಖನಿಜ ಸಿಕ್ಷೇಪಗಳ ಬಗ್ಗೆ ೧೫೪೬ರಲ್ಲಿ ಬರೆದ ಪುಸ್ತಕದಲ್ಲಿ ಹಿಂದಿನ ಕಾಲದಿಂದಲೂ ಮಾನವನಿಗೆ ತಿಳಿದಿದ್ದ ಲೋಹಗಳಾದ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ಸೀಸ, ತವರ ಮತ್ತು ಪಾದರಸಗಳೊಡನೆ ಬಿಸ್ಮತ್ ಅನ್ನೂ ಸೇರಿಸಿದ್ದನು. ಆದರೂ ೧೮ನೇ ಶತಮಾನದಲ್ಲಿ ಮಾತ್ರವೇ ಬಿಸ್ಮತ್ ಅನ್ನು ಪ್ರತ್ಯೇಕವಾದ ಮೂಲವಸ್ತುವೆಂದು ಸ್ಪಷ್ಟಪಡಿಸಲಾಯಿತು. ಬಿಸ್ಮತ್ ಪಡೆದಷ್ಟು ಹೆಸರುಗಳನ್ನು ಬೇರೆ ಯಾವುದೇ ಲೋಹ ಪಡೆದಿರಲಿಕ್ಕಿಲ್ಲ ವೆಂಬುದು ಬಹುಶಃ ನಿಜ. ಕೆಲವು ವಿಜ್ಞಾನಿಗಳ ಪ್ರಕಾರ ೧೫ನೇ ಶತಮಾನದಿಂದ ೧೮ನೇ ಶತಮಾನದವರೆಗೆ ದೊರಕುವ ಸಾಹಿತ್ಯದ ಆಧಾರದ ಮೇಲೆ ಬಿಸ್ಮತ್ ಅನ್ನು ೨೦ಕ್ಕೂ ಹೆಚ್ಚಿನ ಹೆಸರುಗಳಿಂದ ಕರೆಯಲಾಗುತ್ತಿತ್ತು. ಅವುಗಳಲ್ಲಿ ಡೆಮೋಗಾರ್ಗನ್, ಗ್ಲೌರಾ ಮತ್ತು ನಿಂಫ್ ಮುಖ್ಯವಾದುವು.

ಬಿಸ್ಮತ್ ಎಂಬ ಪದವನ್ನು ಅನೇಕ ರೀತಿಯಲ್ಲಿ ವಿವರಿಸಲಾಗುತ್ತಿದೆ. ಕೆಲವರು ಅದು ಜರ್ಮನ್ ಭಾಷೆಯಲ್ಲಿ ಬಿಳಿಯ ರಾಶಿ ಮತ್ತು ಬಿಳಿಯ ಪದಾರ್ಥವೆಂದು ಕ್ರಮವಾಗಿ ಅರ್ಥ

ಕೊಡುವ Weisse masse ಮತ್ತು Weisse materia ಎಂಬ ಪದಗಳು ಒಟ್ಟಾಗಿ Wist mat ಬಂದಿತೆಂದು ನಂಬುತ್ತಾರೆ. ಹಿಂದೆ ಈ ಲೋಹದ ಅದುರನ್ನು ಜರ್ಮನಿಯ "ಮೈಸೆನ್" ಬಳಿ ಸ್ಯಾಕ್ಸನ್‌ನ ಹುಲ್ಲುಗಾವಲು ಜಾಗದಿಂದ ಅಗೆದು ಹೊರತೆಗೆಯುತ್ತಿದ್ದರೆಂದೂ ಜರ್ಮನ್‌ನಲ್ಲಿ Weise ಎಂದರೆ ಹುಲ್ಲುಗಾವಲು ಹಾಗೂ Muten ಎಂದರೆ ಗಣಿಯಲ್ಲಿ ಕೆಲಸಮಾಡು ಎಂದರ್ಥವೆಂದೂ ವಿವರಿಸುತ್ತಾರೆ. ಜರ್ಮನಿಯ ಮೈಸೆನ್ ಎಂಬ ಜಾಗದಲ್ಲಿ ಹೆಚ್ಚಾಗಿ ದೊರಕುತ್ತಿದ್ದುದರಿಂದ ಬಿಸ್ಮತ್‌ನ ಹೆಸರು ಅದರಿಂದ ಬಂದಿತೆಂದು ಕೆಲವರ ವಾದ. ಅರೇಬಿಕ್‌ನ "ಬಿ ಇಸ್ಮಿಡ್" ಅಂದರೆ 'ಆ್ಯಂಟಿಮನಿಯಂತೆ ಕಾಣುವ' ಎಂಬ ಪದಗಳ ಅಪಭ್ರಂಶದಿಂದ "ಬಿಸ್ಮತ್" ಪದ ಉದಯಿಸಿತೆಂಬ ಅಭಿಪ್ರಾಯವೂ ಇದೆ. ಇವುಗಳಲ್ಲಿ ಯಾವ ವರದಿ ಅಧಿಕೃತವಾದುದೆಂಬುದನ್ನು ಹೇಳುವುದು ಕಷ್ಟ. 'ದಿ ಗ್ರೇಟ್ ಸೋವಿಯತ್ ಎನ್‌ಸೈಕ್ಲೊಪೀಡಿಯಾ' ಯಾವುದೇ ನಿರ್ದಿಷ್ಟವಾದ ಉತ್ತರ ಕೊಡದೆ "ಬಿಸ್ಮತ್ ಹೆಸರಿನ ಮೂಲವನ್ನು ಸ್ಥಿರಪಡಿಸಲಾಗಿಲ್ಲ." ಎಂದು ಹೇಳುತ್ತದೆ.

ಸ್ವೀಡನ್ನಿನ ಪ್ರಮುಖ ರಸಾಯನಶಾಸ್ತ್ರಜ್ಞ ಬರ್‌ಜೀಲಿಯಸ್ Bi ಎಂಬ ಸಂಕೇತವನ್ನು ಮೊಟ್ಟಮೊದಲಿಗೆ ಪ್ರಸ್ತಾಪಿಸಿದನು.

ಹಿಂದಿನ ಕಾಲದಲ್ಲಿ ಬಿಸ್ಮತ್‌ನ ಸಂಯುಕ್ತವಸ್ತುಗಳನ್ನು ವರ್ಣದ್ರವ್ಯ, ಗ್ರೀಸ್, ಪೇಂಟ್ ಮತ್ತು ಕಾಂತಿವರ್ಧಕಗಳಲ್ಲಿ ವ್ಯಾಪಕವಾಗಿ ಬಳಸಲಾಗುತ್ತಿತ್ತು. ಬಿಸ್ಮತ್ ಆಧಾರಿತ ಬಿಳಿಯ ಬಣ್ಣದ ಸೀಸ ಅದರಲ್ಲೂ ಸ್ಪೇನಿನ ಸೆರ್ಯೂಸ್‌ಗಾಗಿ ರಶಿಯದ ಹೆಂಗಸರಲ್ಲಿ ಹೆಚ್ಚು ಬೇಡಿಕೆಯಿತ್ತು. ೧೬ನೇ ಶತಮಾನದ ಮಧ್ಯಭಾಗದಲ್ಲಿ ರಶಿಯಕ್ಕೆ ಭೇಟಿಯಿತ್ತ ಇಂಗ್ಲಂಡ್ ದೇಶದವನೊಬ್ಬ ಹೀಗೆ ಹೇಳಿದ್ದ: "ಹೆಂಗಸರು ಅದೆಷ್ಟು ಅಂಗರಾಗಗಳನ್ನು ಬಳಸುತ್ತಾರೆಂದರೆ ಅವರ ಮುಖಗಳನ್ನು ದೂರದಿಂದಲೇ ಕಾಣಬಹುದು. ಹಿಟ್ಟಿನ ಚೀಲಗಳನ್ನು ಅವರ ಮುಖದೆದುರು ಕೊಡುವಿದ್ದರೇನೋ ಎನ್ನುವಂತಿತ್ತು."

ಹಿಂದಿನಿಂದಲೂ ಬಿಸ್ಮತ್ ಸಂಯುಕ್ತವಸ್ತುಗಳನ್ನು ಔಷಧಗಳ ತಯಾರಿಕೆಯಲ್ಲಿ ಬಳಸಲಾಗುತ್ತಿದೆ. ಚರ್ಮ ಹಾಗೂ ಕರುಳಿನ ರೋಗಗಳು, ಸುಟ್ಟ ಗಾಯಗಳು ಮತ್ತು ಬಿದ್ದ ಗಾಯಗಳ ಚಿಕಿತ್ಸೆಯಲ್ಲಿ ಪೂತಿನಾಶಕವಾಗಿಯೂ (Antiseptic) ಹಾಗೂ ಉಪಶಾಮಕವಾಗಿಯೂ ಔಷಧದ ಪುಡಿ ಮತ್ತು ಮುಲಾಮುಗಳಲ್ಲಿ ಬೆರಸಲಾಗುತ್ತದೆ. ಆದ್ದರಿಂದಲೇ ಬಿಸ್ಮತ್‌ನ ಮುಖ್ಯವಾದ ಬಳಕೆ ಔಷಧಿಗಳ ತಯಾರಿಕೆಯಲ್ಲಿ ಆಗುತ್ತಿದೆ.

ಕೆಳಮಟ್ಟದ ದ್ರವೀಭವನ ಬಿಂದುವನ್ನು ಹೊಂದಿರುವ ಮಿಶ್ರಲೋಹಗಳ ತಯಾರಿಕೆಯಲ್ಲಿ ಬಿಸ್ಮತ್‌ಅನ್ನು ಬಹಳ ಹಿಂದಿನಿಂದಲೂ ಉಪಯೋಗಿಸಲಾಗುತ್ತಿದೆ. ೧೦೦ ವರ್ಷಗಳ ಹಿಂದೆ ಪ್ರಕಟಿತವಾದ ಪುಸ್ತಕವೊಂದರಲ್ಲಿ ಹೀಗೆ ಹೇಳಲಾಗಿದೆ. "ಅನೇಕ ಮಿಶ್ರಲೋಹಗಳು ಸುಲಭವಾಗಿ ದ್ರವ ರೂಪಕ್ಕೆ ಬರುವಂತೆ ಮಾಡಲು ಬಿಸ್ಮತ್‌ಅನ್ನು ಬೆರೆಸಲಾಗುತ್ತದೆ. ಮುದ್ರಣಕಾರರಿಗೆ, ಕಲಾಯಿ ಹಾಕುವಲ್ಲಿ ಮತ್ತು ಆರ್ಗನ್. ವಾದ್ಯದ ಭಾಗಗಳನ್ನು ತಯಾರಿಸಲು ಬೇಕಾಗುವ ಕೆಳಮಟ್ಟದ ದ್ರವೀಭವನ ಬಿಂದುವನ್ನು ಹೊಂದಿರುವ ಲೋಹಗಳಲ್ಲಿ ಬಿಸ್ಮತ್ ಉಪಯೋಗಕ್ಕೆ ಬಂದಿದೆ. ಆದರೆ ಬಿಸ್ಮತ್‌ನ ಬೆರಕೆಯಿಂದ ಮಿಶ್ರಲೋಹಗಳು ಭಂಗುರವಾಗುತ್ತವೆ.

ಈಚೆಗೆ ಮುದ್ರಣಕಾರರು ಅಚ್ಚುಗಳಲ್ಲಿ ಬಿಸ್ಮತ್‌ಅನ್ನು ಬಳಸುತ್ತಿಲ್ಲವಾದರೂ ಬಿಸ್ಮತ್ ಮಿಶ್ರಲೋಹಗಳನ್ನು (ಉದಾ: ವುಡ್ಸ್ ಮಿಶ್ರಲೋಹ) ಬೇರೆ ಕ್ಷೇತ್ರಗಳಲ್ಲಿ ಉಪಯೋಗಿಸಲಾಗುತ್ತಿದೆ. ಬಿಸ್ಮತ್ ಆಧಾರಿತ ಮಿಶ್ರಲೋಹಗಳಿಂದ ಮಾಡಲಾದ ಫ್ಯೂಸ್‌ಗಳನ್ನು ಹೊಂದಿರುವ ಸ್ವಯಂಚಾಲಕ ಅಗ್ನಿಶಾಮಕ ಉಪಕರಣಗಳು ಅಗ್ನಿಶಾಮಕ ದಳದವರ ಕಾಳಜಿಯನ್ನು ಕಡಿಮೆ ಮಾಡಿವೆ, ಅವುಗಳನ್ನಿಟ್ಟ ಕಟ್ಟಡದ ಉಷ್ಣಾಂಶ ಒಂದು ಮಿತಿಯನ್ನು ಮೀರಿದಾಗ ಅಂತಹ ಫ್ಯೂಸ್ ಕರಗಿ ರಿಲೇ ಉತ್ತೇಜಿತವಾಗುವುದರಿಂದ ಶಬ್ದದ ಸಿಗ್ನಲ್ ಕೇಳಿಸುತ್ತದೆ. ಕೆಲವು ಸಾಧನಗಳಲ್ಲಿ ಇದರ ಜೊತೆಗೇ ಹೊರಗಿನ ಸಹಾಯವಿಲ್ಲದೆ ಬೆಂಕಿಯ ಮೇಲೆ ನೀರಿನ ಪ್ರವಾಹವನ್ನು ಹರಿಸಿ ಬೆಂಕಿ ಆರುವಂತೆ

ಮಾಡುವ ವ್ಯವಸ್ಥೆ ಇರುತ್ತದೆ. ಸಾಧನವನ್ನು ಮತ್ತೆ "ಯುದ್ಧ ಸಿದ್ಧತೆ"ಯ ಸ್ಥಿತಿಗೆ ತರುವುದಷ್ಟೆ ಇವುಗಳಲ್ಲಿ ಅಗ್ನಿಶಾಮಕ ದಳದವರು ಮಾಡಬೇಕಾದ ಕೆಲಸ.

ಸೀಸ ಮತ್ತು ಪಾದರಸದ ಜೊತೆ ಬಿಸ್ಮತ್ ಸೇರಿರುವ ಮಿಶ್ರಲೋಹವನ್ನು ಕೇವಲ ಉಜ್ಜುವುದರಿಂದಲೇ ಕರಗುತ್ತದೆ. ಅದನ್ನು ಲೋಹದ ಪೆನ್ಸಿಲ್ ಆಗಿ ಬಳಸಬಹುದು. ಗಾಜು ಮತ್ತು ಲೋಹಗಳನ್ನು ಬೆಸೆದು ಒಂದು ಮಾಡುವಲ್ಲಿ ಬಿಸ್ಮತ್‌ನ ಮಿಶ್ರಲೋಹಗಳನ್ನು ಉಪಯೋಗಿಸುತ್ತಾರೆ. ವುಡ್ಸ್ ಮಿಶ್ರಲೋಹದಿಂದ ತಯಾರಾದ ಟೀ ಚಮಚವನ್ನು ಬಿಸಿಯಾದ ಟೀಯೊಳಗೆ ಹಾಕಿದೊಡನೆ ಕರಗುತ್ತದೆ. ಆದರೆ ಅಂತಹ ಚಮಚವನ್ನು ಯಾರೂ ತಯಾರಿಸುವುದಿಲ್ಲ!

ಸುಲಭವಾಗಿ ಎರಕಹೊಯ್ಯಲು ಸಾಧ್ಯವಾಗುವುದರಿಂದ ಬಿಸ್ಮತ್‌ಅನ್ನು ಅತಿ ತೊಡಕಿನ ಭಾಗಗಳನ್ನು ಅಚ್ಚು ಮಾಡಲು ಮತ್ತು ದಂತದ ಪಡಿಯಚ್ಚನ್ನು ತಯಾರಿಸುವಲ್ಲಿ ಬಳಸುತ್ತಾರೆ.

ಕೆಲವು ಬಿಸ್ಮತ್ ಮಿಶ್ರಲೋಹಗಳು ಅಪೂರ್ವವಾದ ಅಯಸ್ಕಾಂತ ಗುಣಗಳನ್ನು ಹೊಂದಿವೆ. ಬಿಸ್ಮತ್-ಮ್ಯಾಂಗನೀಸ್ ಮಿಶ್ರಲೋಹ ಶಾಶ್ವತ ಹಾಗೂ ಪ್ರಬಲವಾದ ಅಯಸ್ಕಾಂತ ಶಕ್ತಿಯನ್ನು ಪಡೆದಿದೆ. ಅಯಸ್ಕಾಂತ ಪ್ರತಿರೋಧಕ ಶಕ್ತಿಯನ್ನು ಹೊಂದಿರುವ ಬಿಸ್ಮತ್-ಆ್ಯಂಟಿಮನಿ ಮಿಶ್ರಲೋಹವನ್ನು ವೇಗವಾಗಿ ಪ್ರತಿಕ್ರಿಯೆ ತೋರುವ ಸರ್ಕ್ಯೂಟ್ ಬ್ರೇಕರ್ ಮತ್ತು ಉತ್ತೇಜಕ (amplifier)ಗಳಲ್ಲಿ ಬಳಸಲಾಗುತ್ತಿದೆ. ಅಲ್ಯುಮಿನಿಯಂ ಮತ್ತು ಕಬ್ಬಿಣ ಆಧಾರಿತ ಮಿಶ್ರಲೋಹಗಳಲ್ಲಿ ಕೇವಲ ಶೇಕಡಾ ೦.೦೧ ಭಾಗ ಬಿಸ್ಮತ್ ಬೆರೆಸಿದಾಗ ಸುಲಭವಾಗಿ ಆಕಾರ ಕೊಡಲು ಸಾಧ್ಯವಾಗುವಂತೆ ಮೃದು ಸ್ಥಿತಿಯನ್ನು ಹೊಂದುತ್ತದೆ ಸ್ಟೇನ್‌ಲೆಸ್. ಉಕ್ಕಿಗೆ ಬಿಸ್ಮತ್‌ಅನ್ನು ಬೆರೆಸಿದಾಗಲು ಇದೇ ಪರಿಣಾಮ ಕಂಡುಬರುತ್ತದೆ. ಬಿಸ್ಮತ್‌ಅನ್ನು ತವರಕ್ಕೆ ಬೆರಸಿದಾಗ ಕಡಿಮೆ ಉಷ್ಣಾಂಶಗಳಲ್ಲಿ ಚೂರಾಗಿ ಪುಡಿಪುಡಿಯಾಗುವ "ತವರದ ಪಿಡುಗು" (Plague of tin) ಎಂಬ ನ್ಯೂನತೆಯ ನಿವಾರಣೆಯಾಗುತ್ತದೆ. ಬಿಳಿಯ ತವರ ಕಡಿಮೆ ಉಷ್ಣಾಂಶದಲ್ಲಿ ಬೂದು ಬಣ್ಣದ ತವರವಾಗಿ ಮಾರ್ಪಟ್ಟಾಗ ಅದರ ಸ್ಪಟಿಕ ಜಾಲಗಳಲ್ಲಿ ಅವುಗಳ ಅಂತರ ಹೆಚ್ಚುವುದೇ ಅದಕ್ಕೆ ಕಾರಣ. ಬಿಸ್ಮತ್‌ಅನ್ನು ಬೆರೆಸಿದಾಗ ಅದರ ಅಣುಗಳು ತವರದ ಸ್ಪಟಿಕ ಚಾಲಕವನ್ನು ಅಂಟಿಸಿತ್ತೋ ಎಂಬಂತೆ ಈ ರೀತಿಯ ಹಾನಿಕಾರಕ ದುಷ್ಪರಿಣಾಮದಿಂದ ಉಳಿಸುತ್ತದೆ.

ಉಷ್ಣ ವಿದ್ಯುತ್ ಉತ್ಪನ್ನಗಳಲ್ಲಿ ಟೆಲ್ಯೂರಿಯಂನೊಡನೆ ಬಿಸ್ಮತ್‌ನ ಮಿಶ್ರಲೋಹಗಳು ಬಳಕೆಗೆ ಬರಲಿವೆಯೆಂದು ಭಾವಿಸಲಾಗಿದೆ. ಉಷ್ಣ ಶಕ್ತಿಯನ್ನು ವಿದ್ಯುಚ್ಛಕ್ತಿಯಾಗಿ ಪರಿವರ್ತಿಸುವಲ್ಲಿ ಸರಿಯಾಗಿ ಸಂಯೋಜಿಸಿದ ಇಂತಹ ಲೋಹಗಳು ಸಮರ್ಥವಾಗಿ ಕೆಲಸ ಮಾಡುತ್ತವೆ. ಸುಮಾರು ೧೫೦ ವರ್ಷಗಳ ಹಿಂದೆ ನಿರ್ಮಿಸಲಾದ ಉಷ್ಣ ವಿದ್ಯುತ್ ಉತ್ಪನ್ನಕಗಳು ಬೆಸಿಗೆ ಹಾಕಲಾದ ಆ್ಯಂಟಿಮನಿ ಮತ್ತು ಬಿಸ್ಮತ್ ತಂತಿಗಳಿಂದ ಕೆಲಸ ಮಾಡಿದ್ದವು.

ಉಷ್ಣ ವಿದ್ಯುತ್ ಕ್ರಮದಿಂದ ತಂಪು ಮಾಡುವ ವಿಧಾನವನ್ನು ಅಂತರಿಕ್ಷ ನೌಕೆ, ವೈದ್ಯಕೀಯ ಹಾಗೂ ಮತ್ತಿತರೆ ಕ್ಷೇತ್ರಗಳಲ್ಲಿ ವ್ಯಾಪಕವಾಗಿ ಬಳಸಲಾಗುತ್ತಿದೆ. ಏಕಮುಖ ವಿದ್ಯುತ್ ಪ್ರವಾಹವನ್ನು (Direct current) ಎರಡು ಬೇರೆ ಬೇರೆ (ಉದಾ: ಕಬ್ಬಿಣ ಮತ್ತು ಬಿಸ್ಮತ್) ವಾಹಕಗಳಿಂದ ನಿರ್ಮಿಸಿದ ವಿದ್ಯುತ್ ಮಂಡಲದ ಮೂಲಕ ಹರಿಸಿದಾಗ, ಅವುಗಳು ಸೇರುವ ಜಾಗದಲ್ಲಿ ಉಷ್ಣತೆಯ ಏರಲ್ಪಡುತ್ತದೆಯೆಂದು ೧೮೩೪ರಲ್ಲಿ ಜೀನ್ ಪೆಲ್ಟಿಯರ್ ಎಂಬ ಫ್ರೆಂಚ್ ಭೌತಶಾಸ್ತ್ರಜ್ಞ ಗಮನಿಸಿದನು. ಇಂತಹ ತಂಪಾಗುವ ಪರಿಣಾಮ ಅತ್ಯಂತ ಕಡಿಮೆ ಪ್ರಮಾಣದ್ದಾದ್ದರಿಂದ "ಪೆಲ್ಟಿಯರ್ ಪರಿಣಾಮ"ದ ಪ್ರಾಯೋಗಿಕ ಉಪಯುಕ್ತತೆಯನ್ನು ಮುಂದೆ ಬಹಳ ಸಮಯದ ವರೆಗೆ ಗುರುತಿಸಲಾಗಿರಲಿಲ್ಲ. ಉಷ್ಣ ವಿದ್ಯುತ್ ಸಾಧನೆಗಳಲ್ಲಿ ಲೋಹಗಳ ಬದಲು ಬಿಸ್ಮತ್, ಟೆಲ್ಯೂರಿಯಂ, ಸೆಲೆನಿಯಂ ಮತ್ತು ಆ್ಯಂಟಿಮನಿಯ ಸಂಯುಕ್ತ ವಸ್ತುಗಳ ಅಲ್ಪವಾಹಕಗಳನ್ನು ಬಳಸಬಹುದೆಂದು ಮುಂದೆ, ನೂರು ವರ್ಷಗಳ ನತಂರ ಅಬ್ರಾಹಮ್

ಐಯೋಫೆ ಎಂಬ ರಶಿಯದ ಭೌತಶಾಸ್ತ್ರಜ್ಞ ಸೂಚಿಸಿದ. 'ಪೆಲ್ಟಿಯರ್ ಪರಿಣಾಮ'ವನ್ನು ಬಳಸಿಕೊಂಡು ಸಮರ್ಪಕವಾದ ರೀತಿಯಲ್ಲಿ ತಂಪು ಮಾಡಬಹುದೆಂದು ತಿಳಿದುಬಂದಿತು. ಮೇಲಿನ ಪರಿಣಾಮದ ಆಧಾರದ ಮೇಲೆ, ದ್ರವಗಳು ಅಥವಾ ಅನಿಲಗಳ ಬದಲು, ಋಣ ವಿದ್ಯುತ್ಕಣಗಳು ಶೀತಕವಾಗಿ ಕೆಲಸ ಮಾಡುವ ಹೊಸದೊಂದು ರೀತಿಯ ಶೈತ್ಯಕಾರಕ ಯಂತ್ರದಲ್ಲಿ ಉಷ್ಣಾಂಶವನ್ನು-೫೦° ಸೆಂ. ವರೆಗೆ ಇಳಿಸಲು ಸಾಧ್ಯವಾಗಿದೆ. ವಿದ್ಯುತ್ ಪ್ರವಾಹದ ದಿಕ್ಕನ್ನು ಬದಲಿಸಿದಾಗ ಅಂತಹ ಸಾಧನಗಳು ಹೀಟರ್‌ಗಳಾಗುವುದು ಇದರ ವೈಶಿಷ್ಟ್ಯವಾಗಿದೆ.

ನವೀನ ತಾಂತ್ರಿಕ ಯುಗದ ವಿವಿಧ ಕ್ಷೇತ್ರಗಳಲ್ಲಿ ಬಿಸ್ಮತ್ ಸಂಯುಕ್ತ ವಸ್ತುಗಳನ್ನು ಬಳಸಲಾಗಿದೆ. ಅಕ್ರಿಲಿಕ್ ಪ್ಲಾಸ್ಟಿಕ್ಕುಗಳ ತಯಾರಿಕೆಯಲ್ಲಿ ಬಿಸ್ಮತ್ ಟ್ರೈಆಕ್ಸೈಡ್ ಯೋಗವಾಹಕ (Catalyst)ವಾಗಿ ಕೆಲಸಮಾಡುತ್ತದೆ. ಗಾಜು, ಎನಾಮಲ್ ಮತ್ತು ಪಿಂಗಾಣಿ ವಸ್ತುಗಳನ್ನು ತಯಾರಿಸುವಲ್ಲಿಯೂ ಬಿಸ್ಮತ್ ಬಳಕೆಯಲ್ಲಿದೆ. ಬಿಸ್ಮತ್‌ನ ಸಂಯುಕ್ತ ವಸ್ತುಗಳನ್ನು ಕೆಲವು ನಿರವಯವ ಪದಾರ್ಥಗಳ ದ್ರವೀಭವನ ಬಿಂದುವನ್ನು ಕೆಳಗಿಳಿಸುವುದಕ್ಕೆ ಬಳಸುವ ಫ್ಲಕ್ಸ್‌ಗಳಲ್ಲಿ ಬೆರೆಸಿರುತ್ತಾರೆ. ಗಾಜಿನ "ಭಂಗ ಸೂಚಿ (Refractive index)ಯನ್ನು ಹೆಚ್ಚಿಸಲು ಬಿಸ್ಮತ್‌ನ ಸಂಯುಕ್ತ ವಸ್ತುಗಳನ್ನು ಸೇರಿಸುತ್ತಾರೆ. ಬಿಸ್ಮತ್ ಲವಣಗಳನ್ನು ರಸ್ತೆಗಳ ಸೂಚಕ ದೀಪಗಳಿಗೆ ಹಚ್ಚುವ ಪೇಯಿಂಟ್‌ಗಳಿಗೆ ಹಾಕಿರುತ್ತಾರೆ. ಬಿಸ್ಮತ್‌ನ ಕೆಲವು ಲವಣಗಳು ಲಿಪ್‌ಸ್ಟಿಕ್‌ಗೆ ಮುತ್ತಿನ ಮಿನುಗನ್ನು ಕೊಡುತ್ತವೆ.



೧೯೧೧ರಲ್ಲಿ ಡಚ್ ಭೌತಶಾಸ್ತ್ರಜ್ಞ ಕ್ಯಾಮರ್ಲಿಂಗ್ ಓನ್ನೆಸ್ ಕಂಡು ಹಿಡಿದ ಅತಿ ವಿದ್ಯುತ್ ವಾಹಕತ್ವ (Super Conductivity)ಕ್ಕೆ ಕೆಲವು ವರ್ಷಗಳಿಂದ ವಿಜ್ಞಾನಿಗಳು ವಿಶೇಷ ಗಮನ ಹರಿಸುತ್ತಿದ್ದಾರೆ. ಇತ್ತೀಚಿನ ವರೆಗೆ ಅದಕ್ಕೆ ಕೇವಲ ತಾತ್ವಿಕ ಮಹತ್ವವಿತ್ತು.-೨೭೩° ಸೆಂ. ಉಷ್ಣಾಂಶವನ್ನು ತಲಪಿದಾಗ ವಿದ್ಯುತ್ ಪ್ರತಿರೋಧ ಶಕ್ತಿ ಒಮ್ಮೆಂದೊಮ್ಮೆಗೆ ಅದೃಶ್ಯವಾಗುವಷ್ಟು ಕಡಿಮೆಯಾಗುವ ಈ ಗುಣ ಕೆಲವು ಲೋಹಗಳ ಗುಣಲಕ್ಷಣವನ್ನು ವಿವರಿಸುತ್ತದೆ. ಈ ಶತಮಾನದ ಎರಡನೆಯ ಭಾಗದಲ್ಲಿ ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಆಗುತ್ತಿರುವ ಕ್ಷಿಪ್ರ ವಿಕಾಸ, ಅತಿ ವಿದ್ಯುತ್ ಮಹತ್ವದ ಪ್ರಾಯೋಗಿಕ ಉಪಯೋಗಗಳನ್ನು ಹೊರತಂದಿವೆ. ಅವುಗಳಲ್ಲಿ ಶಕ್ತಿ ಉತ್ಪಾದನಾ ಕೈಗಾರಿಕೆ ಬಹಳ ಮುಖ್ಯವಾದದ್ದು.

ಅಮೇರಿಕದ ಮಿಶಿಗನ್ ವಿಶ್ವವಿದ್ಯಾಲಯದ ವಿಜ್ಞಾನಿಗಳು ಕುತೂಹಲಕರವಾದ ಫಲಿತಾಂಶಗಳನ್ನು ಹೊರತಂದು ಖ್ಯಾತಿಪಡೆದಿದ್ದಾರೆ. ಬಿಸ್ಮತ್ ಶುದ್ಧ ಲೋಹವು ಅತಿ ವಿದ್ಯುತ್ ಗುಣಗಳನ್ನು ಹೊಂದಿರದಿದ್ದರೂ ತವರ ಅಥವಾ ಟೆಲ್ಯುರಿಯುಮ್ಮಿನ ಕೆಲವೇ ಅಣುಗಳಿಂದ 'ಮಲಿನ'ಗೊಂಡಾಗ ೦.೦೩ ಯಿಂದ ೦.೦೬° ಕೆ ನಲ್ಲಿ ಅಂತಹ ಗುಣವನ್ನು ಪಡೆಯುತ್ತದೆ

ಯೆಂಬುದನ್ನು ಅವರು ಸ್ಥಿರಪಡಿಸಿದರು. ಬೆರಕೆಯ ಪ್ರಮಾಣವನ್ನು ಹೆಚ್ಚು ಕಡಿಮೆ ಮಾಡುವುದರಿಂದ ಮೇಲಿನ ಉಷ್ಣಾಂಶವನ್ನು ಬದಲಿಸಬಹುದು.

ಅಣುಶಕ್ತಿ ಕೇಂದ್ರಗಳಲ್ಲಿ ಉಷ್ಣತೆಯನ್ನು ವರ್ಗಾಯಿಸಲು ಬಿಸ್ಮತ್ ಅನ್ನು ಶುದ್ಧರೂಪದಲ್ಲಿ ಬಳಸಲಾಗುತ್ತದೆ. ಅದು ತನ್ನ ದ್ರವೀಭವನ ಬಿಂದು ೨೭೧° ಸೆಂ.ನಿಂದ ಕುದಿಯುವ ಬಿಂದು ೧೫೬೦° ಸೆಂ. ವರೆಗೆ ದ್ರವರೂಪದಲ್ಲಿ ಉಳಿಯುವುದರಿಂದ, ಹೆಚ್ಚಿನ ರಾಸಾಯನಿಕ ಪ್ರತಿರೋಧಕ ಶಕ್ತಿಯನ್ನು ಪಡೆದಿರುವುದರಿಂದಲೂ ಹಾಗೂ ಪ್ರತಿಕ್ರಿಯೆಗಳ ವೇಗವನ್ನು ಕಡಿಮೆ ಮಾಡದೆಯೇ ಉಷ್ಣ ಶೂನ್ಯ ಕಣಗಳನ್ನು ಹೀರಿಕೊಳ್ಳದಂತೆ ಚದುರಿಸಬಲ್ಲ ಸಾಮರ್ಥ್ಯವನ್ನು ಹೊಂದಿರುವುದೇ ಇದಕ್ಕೆ ಕಾರಣವೆಂದು ವಿವರಿಸಬಹುದು. ದ್ರವರೂಪದ ಬಿಸ್ಮತ್ತಿನಲ್ಲಿ ಕರಗಿಸಿದ ಯುರೇನಿಯಂ ಇಂಧನವನ್ನು ಬಳಸುವ ಅಣುಶಕ್ತಿ ಕೇಂದ್ರಗಳಲ್ಲಿ ಬಿಸ್ಮತ್‌ನ ಉಪಯೋಗ ಬಹಳ ಆಶಾದಾಯಕವಾಗಿದೆ.

ಬಿಸ್ಮತ್. ಇತರೆ ಲೋಹಗಳಂತಿರದೆ ಅತಿ ಭಂಗುರವಾಗಿದ್ದು ಕುಟ್ಟಿ ಪುಡಿಮಾಡಲು ಸಾಧ್ಯವಾಗುವ ವಿಶೇಷ ಗುಣವನ್ನು ಪಡೆದಿದೆ. ಬಿಸಿಯಾಗಿರುವಾಗ ಒತ್ತಡಕ್ಕೆ ಒಳಪಡಿಸಿ ಬಿಸ್ಮತ್ತಿನ ತಂತಿ ಹಾಗೂ ತಗಡುಗಳನ್ನು ಪಡೆಯಬಹುದು. ಅದರ ಸ್ಫಟಿಕ ಜಾಲಕದ ಕೆಲವು ವಿಚಿತ್ರ ಗುಣಗಳ ಕಾರಣ ಬಿಸ್ಮತ್‌ಅನ್ನು ಘನೀಕರಿಸಿದಾಗ ಇತರೆ ಲೋಹಗಳಂತೆ ಕುಗ್ಗದೆ, ಗಾತ್ರದಲ್ಲಿ ಹಿಗ್ಗುತ್ತದೆ (ನೀರು ಹೆಪ್ಪುಗಟ್ಟಿದಾಗಲೂ ಹೀಗೆಯೇ ಗಾತ್ರದಲ್ಲಿ ದೊಡ್ಡದಾಗುತ್ತದೆ) ಒತ್ತಡವನ್ನು ಹೆಚ್ಚಿಸಿದಾಗ ಸಾಧಾರಣವಾಗಿ ಅನೇಕ ವಸ್ತುಗಳ ದ್ರವೀ ಭವನ ಬಿಂದು ಏರುತ್ತದೆ. ಆದರೆ ಬಿಸ್ಮತ್‌ಅನ್ನು ಹೆಚ್ಚಿನ ಒತ್ತಡಕ್ಕೆ ಒಳಪಡಿಸಿದಂತೆ ಅದು ಬೇಗನೆ ದ್ರವ ರೂಪಕ್ಕೆ ಬದಲಾಗುತ್ತದೆ.

ಅಯಸ್ಕಾಂತ ಧ್ರುವಗಳ ನಡುವೆ ಇಟ್ಟ ಬಿಸ್ಮತ್ ಎರಡರಿಂದಲೂ ಸರಿಸಮನಾದ ಬಲದಿಂದ ಹಿಂದಕ್ಕೆ ಅಟ್ಟಲ್ಪಟ್ಟು, ಅವೆರಡರ ಮಧ್ಯ ಬಿಂದುವಿನಲ್ಲಿ ನಿಶ್ಚಲವಾಗುತ್ತದೆ. ಅಯಸ್ಕಾಂತ ಕ್ಷೇತ್ರದಲ್ಲಿ ಬಿಸ್ಮತ್‌ನ ವಿದ್ಯುತ್ ವಿರೋಧಕ ಶಕ್ತಿ ಇತರ ಲೋಹಗಳಿಗಿಂತ ಹೆಚ್ಚಾಗಿ ಇರುತ್ತದೆ. ಈ ಗುಣವನ್ನುಪಯೋಗಿಸಿಕೊಂಡು ಪ್ರಬಲ ಅಯಸ್ಕಾಂತ ಕ್ಷೇತ್ರಗಳ ಪ್ರೇರಿತ ಕಾಂತತ್ವ (Induced magnetism) ವನ್ನು ಅಳೆಯಲು ಬಿಸ್ಮತ್‌ನ ಸಿಂಬಿಯನ್ನು (Coil) ಬಳಸಲಾಗುತ್ತದೆ. ಬಿಸ್ಮತ್‌ಅನ್ನು ಕರಗಿಸಿದಾಗ ಅದರ ವಿದ್ಯುತ್ ವಿರೋಧಕ ಶಕ್ತಿ ಅರ್ಧದಷ್ಟಕ್ಕೆ ಇಳಿಯುತ್ತದೆ. ಮತ್ತು ತಣ್ಣಗೆ ಮಾಡಿದಾಗ ಗಮನಾರ್ಹವಾಗಿ ಏರುತ್ತದೆ. (೦°ಸೆಂ. ನಿಂದ —೧೮೦° ಸೆಂ. ಗೆ ಇಳಿಸಿದಾಗ ವಿದ್ಯುತ್ ವಿರೋಧಕ ಶಕ್ತಿ ೬೦ ಪಟ್ಟು ಏರುತ್ತದೆ.)

ಸುಮಾರು ೧೫೦ ವರ್ಷಗಳ ಹಿಂದೆ ಮೈಕೇಲ್ ಫಾರಡೆಯು ವಿದ್ಯುದ್ವಿಶ್ಲೇಷಣೆಯ ಮುಖ್ಯ ನಿಯಮಗಳನ್ನು ಸ್ಥಿರಪಡಿಸಿದಾಗಿನಿಂದಲೂ ವಿದ್ಯುದ್ವಿಶ್ಲೇಷಣೆಯಲ್ಲಿ ಲೋಹಗಳ ವಿದ್ಯುದ್ವಾಹಿ ಕಣ (Ion) ಗಳು ಧನ ಧ್ರುವದಿಂದ ಋಣ ಧ್ರುವಕ್ಕೆ ಸ್ಥಳಾಂತರ ಮಾಡಲ್ಪಡುತ್ತವೆಯೆಂದು ನಂಬಲಾಗಿತ್ತು. ಕೆಲವು ಲೋಹಗಳ ವಿದ್ಯುದ್ವಾಹಿ ಕಣಗಳು ಧನ ಧ್ರುವದ ಕಡೆಗೆ ವರ್ಗಾಯಿಸಲ್ಪಡುತ್ತವೆಯೆಂದು ೧೯೬೫ರಲ್ಲಿ ರಶಿಯದ ಯುಕ್ರೈನಿಯನ್ ಅಕಾಡೆಮಿ ಆಫ್ ಸೈನ್ಸ್‌ನ ವಿಜ್ಞಾನಿಗಳು ಕಂಡುಹಿಡಿದರು. ಅವರ ಪ್ರಯೋಗಗಳಲ್ಲಿ ಋಣ ಧ್ರುವವನ್ನುಬಿಸ್ಮತ್‌ನಿಂದಲೂ ಧನ ಧ್ರುವವನ್ನು ನಿಕ್ಕೆಲಿನಿಂದಲೂ ಮಾಡಲಾಗಿದ್ದು ದ್ರವರೂಪದ ಸೋಡಿಯಂ ಹೈಡ್ರಾಕ್ಸೈಡ್‌ನ್ನು ವಿದ್ಯುದ್ವಾಹಕ ಲವಣವಾಗಿ ಬಳಸಲಾಗಿತ್ತು. ವಿದ್ಯುತ್ ಪ್ರವಾಹನ್ನು ಹರಿಸಿದಾಗ ಋಣ ಧ್ರುವವಾದ ಬಿಸ್ಮತ್ ಬೇಗನೆ ಕರಗಲು ಆರಂಭವಾಗಿ ಧನಧ್ರುವದ ಮೇಲ್ಮೈಯಲ್ಲಿ ಶುದ್ಧ ಬಿಸ್ಮತ್‌ನ ಹೊಳೆಯುವ ಮಣಿಗಳು ಶೇಖರವಾದುವು.

ಆದರೆ ಮೇಲಿನ ಶೋಧ ಫ್ಯಾರಡೆಯ ನಿಯಮವನ್ನು ತಪ್ಪೆಂದು ತೋರಿಸುವ ಬದಲು ಸ್ಪಷ್ಟೀಕರಿಸಿತು. ಏಕೆಂದರೆ ಹೆಚ್ಚಾಗಿ ಲೋಹಗಳು ಋಣ ಧ್ರುವದ ಮೇಲೆ ಶೇಖರವಾಗುತ್ತವೆ. ದ್ರವರೂಪದ ಕ್ಷಾರ ಲವಣಗಳನ್ನು ವಿದ್ಯುದ್ವಾಹಕವಾಗಿ ಬಳಸಿದಾಗ ಬಿಸ್ಮತ್, ಸೀಸ, ತವರ ಹಾಗೂ ಆ್ಯಂಟಿಮನಿ ಈ ನಿಯಮಕ್ಕೆ ಹೊರತಾಗಿ

ರುತ್ತವೆ.

ಘ್ಯಾರಡೆ ನಿಯಮಕ್ಕೆ ಹೊರತಾಗಿರುವುದನ್ನು ಉಪಯೋಗಿಸಿಕೊಂಡು ಅನೇಕ ಲೋಹಗಳು ಮತ್ತು ಮಿಶ್ರಲೋಹಗಳನ್ನು ಬಿಸ್ಮತ್, ಸೀಸ ಮತ್ತಿತರೆ ಕಲ್ಮಶಗಳಿಂದ ಶುದ್ಧಗೊಳಿಸಬಹುದು. ಇದಕ್ಕೆ ಋಣ ಧ್ರುವವನ್ನು ಶುದ್ಧೀಕರಿಸಬೇಕಾದ ಲೋಹದಿಂದ ಮಾಡಲಾಗುತ್ತದೆ. ವಿದ್ಯು-ದ್ವಿಶ್ಲೇಷಣೆಯಲ್ಲಿ ಕಲ್ಮಶಗಳು ಲೋಹದಿಂದ ಬೇರೆಯಾಗಿ ಧನಧ್ರುವದ ಮೇಲೆ ಶೇಖರಗೊಳ್ಳು ತ್ತವೆ. ಅತ್ಯಂತ ಮಿತವ್ಯಯದ ಈ ವಿಧಾನವನ್ನು "ಋಣ ಧ್ರುವ ಶುದ್ಧೀಕರಣ" ಎನ್ನುತ್ತಾರೆ.

ಹೆಚ್ಚಿನ ಮಟ್ಟಿಗೆ ಘನ ಪದಾರ್ಥಗಳ ಅದರಲ್ಲೂ ಎಲ್ಲಾ ಲೋಹಗಳಲ್ಲಿ ಸಾಮಾನ್ಯ ವಾಗಿ ನಿರ್ದಿಷ್ಟವಾದ ಸ್ಫಟಿಕದ ರಚನೆಯಿದ್ದು ಅವುಗಳಲ್ಲಿ ಅಣುಗಳು ಕ್ರಮವಾಗಿ ಜೋಡಿ-ಸಲ್ಪಟ್ಟಿವೆ. ದ್ರವ ಮತ್ತು ಅನಿಲಗಳಲ್ಲಿ ಅಣುಗಳು ಅವ್ಯವಸ್ಥಿತವಾಗಿರುತ್ತವೆ. ಆದರೆ ಕೆಲವು ಪದಾರ್ಥಗಳು ದ್ರವ ಹಾಗೂ ಘನ ರೂಪಗಳೆರಡರಲ್ಲೂ ಅಸ್ಫಟಿಕಾಕೃತಿಯನ್ನು ಹೊಂದಿರುತ್ತವೆ. ದ್ರವರೂಪದ ಲೋಹಗಳು ಸ್ಫಟಿಕಾಕೃತಿಯನ್ನು ಹೊಂದದಂತೆ ಗಟ್ಟಿ ಮಾಡಲು ಸಾಧ್ಯವೇ? ಇಂತಹ ಹೊಸ ಪದಾರ್ಥ ಗಳು ಅಪೂರ್ವವಾದ ಗುಣಗಳನ್ನು ಪ್ರದರ್ಶಿಸ-ಬಹುದೆಂದು ನಿರೀಕ್ಷಿಸಬಹುದು.

ಸ್ಫಟಿಕೀಕರಣ ಕ್ರಿಯೆಯಿಂದ ಸ್ಫಟಿಕಜಾಲಕ ರೂಪುಗೊಂಡು ಅಣುಗಳು ವ್ಯವಸ್ಥಿತ ಕ್ರಮ ವನ್ನು ಪಡೆಯಲು ತಗಲುವ ಸಮಯದಲ್ಲಿ ವಸ್ತುಗಳು ಮಧ್ಯಸ್ಥವಾದ ರಚನೆಯನ್ನು ಹೊಂದುತ್ತವೆ. ಈ ಮಧ್ಯಸ್ಥ ಹಂತವನ್ನು ತಪ್ಪಿಸಿ ಶೀಘ್ರವಾಗಿ ಘನರೂಪಕ್ಕೆ ತರಲು ವಿಜ್ಞಾನಿಗಳು ಪ್ರಯತ್ನಿಸಬೇಕಾಯಿತು. ಇದೇ ಕ್ರಮವನ್ನು ಅನುಸರಿಸಿ ಪಡೆದ ಅತಿ ತೆಳುವಾದ ಬಿಸ್ಮತ್‌ನ ಪಟ್ಟಿ ನಂಬಲಾಗದಷ್ಟು ಅಯಸ್ಕಾಂತ ಮತ್ತು ಅತಿ ವಿದ್ಯುದ್ವಾಹಕ ಗುಣಗಳನ್ನು ತೋರಿಸಿತು. ಸಾಧಾರಣ ಉಷ್ಣಾಂಶಗಳಲ್ಲಿಯೂ ಅದರ ವಿದ್ಯುತ್ ವಿರೋಧಕ ಶಕ್ತಿ ಸ್ಫಟಿಕ ರೂಪದಲ್ಲಿರುವ ಬಿಸ್ಮತ್‌ಗಿಂತ ಅನೇಕ ಪಟ್ಟು ಕಡಿಮೆಯಿರುತ್ತದೆ.

ಬಿಸ್ಮತ್‌ನ ಸಹಾಯದಿಂದ ೧೧೭ನೇ ಮೂಲ ವಸ್ತುವನ್ನು ಸಂಶ್ಲೇಷಿಸಲು ಸಾಧ್ಯವಾಯಿತು. ಪ್ರತಿವರ್ಷ ಬಿಸ್ಮತ್‌ಗಾಗಿ ಬೇಡಿಕೆ ಏರುತ್ತಿರು-ವುದರಿಂದ ಕಳೆದ ೪೦ ವರ್ಷಗಳಲ್ಲಿ ಪ್ರಪಂಚದ ಮಾರುಕಟ್ಟೆಯಲ್ಲಿ ಅದರ ಬೆಲೆ ೭ರಷ್ಟು ಏರಿದೆ. ಭೂಮಿಯ ಪದರದಲ್ಲಿ ದೊರಕುವ ಅತಿ ವಿರಳ ಮೂಲವಸ್ತುಗಳ ಪ್ರಮಾಣದಲ್ಲಿ ೯೦ರಿಂದ ೧೦೦ನೇ ಸ್ಥಾನವನ್ನು ಬಿಸ್ಮತ್ ಪಡೆದಿದೆ. ಅದರ ಖನಿಜಗಳು ೭೦ಕ್ಕೂ ಹೆಚ್ಚಾಗಿವೆಯಾದರೂ ಗಮನಾರ್ಹ ಪ್ರಮಾಣದಲ್ಲಿ ಸಿಗುವುದಿಲ್ಲ. ಕೆಲವೊಮ್ಮೆ ಕೇವಲ ಶೇಕಡಾ ೦.೦೦೦೧ ಭಾಗ ಬಿಸ್ಮತ್ ಹೊಂದಿರುವ ಸೀಸ, ತಾಮ್ರ, ಬೆಳ್ಳಿ ಮತ್ತಿತರೆ ವ್ಯಾಪಕವಾಗಿ ಹರಡಿರುವ ಲೋಹ ಗಳನ್ನು ತಯಾರಿಸುವಾಗ ಉಪಪದಾರ್ಥವಾಗಿ ಪಡೆಯುತ್ತಾರೆ. ಇಂತಹ ಖನಿಜಗಳು ಬೊಲಿ-ವಿಯಾ, ಆಸ್ಟ್ರೇಲಿಯಾದ ತಾಸ್ಮಾನಿಯಾ ಮತ್ತು ಪೆರು ದೇಶಗಳಲ್ಲಿ ದೊರಕುತ್ತವೆ.

ಮೊದಲನೆಯ ಮಹಾಯುದ್ಧದ ಸಮಯದಲ್ಲಿ ಬಿಸ್ಮತ್ ಆಧಾರಿತ ಪೂತಿನಾಶಕಗಳ ಅಗತ್ಯ ಹೆಚ್ಚಾಗಿದ್ದಲ್ಲದೆ ಜರ್ಮನಿಯಿಂದ ಆಮದು ಮಾಡಿ ಕೊಳ್ಳಲು ಸಾಧ್ಯವಾಗದಾದಾಗ ರಶಿಯದಲ್ಲಿ ಬಿಸ್ಮತ್‌ನ ಖನಿಜಗಳಿಗಾಗಿ ಶೋಧಿಸಲಾಯಿತು. ಮೇಲಿನ ಶೋಧನೆಯ ಫಲವಾಗಿ ರಶಿಯದ ಮೌಂಟ್ ಶರ್ಲೋವಾಯಾ ಎಂಬಲ್ಲಿ ಬಿಸ್ಮತ್‌ನ ತಯಾರಿಕೆಗೆ ಅತಿ ಯೋಗ್ಯವಾದ ಕಚ್ಚಾ ಪದಾರ್ಥವೊಂದು ದೊರಕಿತು. ಅದಾದನಂತರ ಬಿಸ್ಮತ್‌ನ ಹಲವಾರು ಖನಿಜಗಳು ಪತ್ತೆ-ಯಾಗಿವೆ. ೧೯೧೮ರಲ್ಲಿ ಬುಕುಕಾ ನಿಕ್ಷೇಪಗಳಿಂದ ಹೊರತೆಗೆದ ಖನಿಜವೊಂದರಿಂದ ಮೊದಲ ಬಾರಿಗೆ ಕೆಲವು ಡಜನ್ ಕಿಲೋ ಗ್ರಾಂ ಬಿಸ್ಮತ್ ಲೋಹ-ವನ್ನು ಪಡೆಯಲಾಯಿತು. ✡



# ಇದೂನೆ ಜೀವ ಇದು ಜೀವನ

ಇಪ್ಪತ್ತು ವರ್ಷಗಳ ಹಿಂದೆ ಅಷ್ಟು ಸ್ಥಿತಿವಂತ-ನಾಗಿರದ ನಾನೊಂದು ಸಣ್ಣ ಸೌದೆ ಡಿಪೋ ನಡೆಸುತ್ತಿದ್ದೆ. ಆ ಸಮಯದಲ್ಲಿ ಇಬ್ಬರು ವ್ಯಕ್ತಿಗಳು ನನ್ನ ಮೇಲೆ ಅಗಾಧ ಪ್ರಭಾವ ಬೀರಿದರು.

ಒಬ್ಬ ಪೋಲೀಸ್ ಕಾನ್‌ಸ್ಟೇಬಲ್. ಕಡಿಮೆ ಸಂಬಳ, ದೊಡ್ಡ ಸಂಸಾರ ಆತನದು. ಸದಾ ಹಣದ ಮುಗ್ಗಟ್ಟು. ಆದರೆ ಅದಕ್ಕಾಗಿ ಲಂಚಕ್ಕೆ ಕೈಯೊಡ್ಡದ ಆತ ನನ್ನ ಸೌದೆ ಡಿಪೋಕ್ಕೆ ಬಂದು ಪೋಲೀಸ್ ಡ್ರೆಸ್ ಬಿಚ್ಚಿಟ್ಟು, "ಕೊಡಲಿ ಕೊಡಿ ಸ್ವಾಮಿ," ಎನ್ನುತ್ತಿದ್ದ. ಎರಡು ಮೂರು ರೂಪಾಯಿಗಳ ಸೌದೆ ಒಡೆದು ದುಡ್ಡು ಪಡೆದು ಹೋಗುತ್ತಿದ್ದ. "ಇನ್ನೊಬ್ಬರ ದುಡ್ಡು ತೊಗೊಂಡು ನನ್ನ ಮೈ ಸಾಕ್ಕೊಂಡ್ರೆ ನನ್ನ ಮೈಲಿರೋದೆಲ್ಲ ದುರ್ಮಾಂಸ ಆಗುತ್ತೆ ಸ್ವಾಮಿ; ಇನ್ನೊಬ್ಬರ ಹಣ ನನಗ್ಬೇಡ," ಎನ್ನುತ್ತಿದ್ದ ಆತ.

ಮತ್ತೊಬ್ಬ ದರ್ಜಿ. ಸಾಹುಕಾರನೊಬ್ಬನ ಬಟ್ಟೆ ಅಂಗಡಿಯ ಮುಂದಿನ ಸಣ್ಣ ಜಾಗದಲ್ಲಿ ಹೊಲಿಗೆ ಯಂತ್ರ ಇಟ್ಟುಕೊಂಡು ಉಪಜೀವನ ಮಾಡುತ್ತಿದ್ದ.

ಹತ್ತಿರದ ಹಳ್ಳಿಯ ಸ್ಕೂಲಿಗೆ ಬಡ ಮಕ್ಕಳಿ-ಗೆಂದು ನೂರಾರು ಗಜ ಬಟ್ಟೆ ದಾನವಾಗಿ ಬಂತು. ಆದರೆ ಇದನ್ನು ಹೊಲಿಸುವವರಾರು? ಆ ಜವಾ-ಬ್ದಾರಿಯನ್ನು ಮೇಷ್ಟ್ರು ನನ್ನ ಮೇಲೆ ಹೊರಿಸಿ ದರು. ಅಷ್ಟು ಬಟ್ಟೆಗಳನ್ನು ಹೊಲಿಸಲು ಬೇಕಾದ ಹಣ ನನ್ನಲ್ಲಿ ಇರಲಿಲ್ಲ. ಹೀಗಾಗಿ ನಮ್ಮೂರಿನ ಶ್ರೀಮಂತ ಸಾಮಾಜಿಕ ಸಂಸ್ಥೆ-ಯೊಂದನ್ನು ಸಂಪರ್ಕಿಸಿದೆ. ಅವರೆಲ್ಲ ಐದಾರು ಬಾರಿ ನನ್ನನ್ನು ಸುತ್ತಿಸಿ ಕೊನೆಗೆ ಆಗುವುದಿಲ್ಲ ಎಂದುಬಿಟ್ಟರು. ಈ ವಿಷಯವನ್ನು ವ್ಯಥೆಯಿಂದ ಮತ್ತೊಬ್ಬರಲ್ಲಿ ಹೇಳುತ್ತಿದ್ದಾಗ ಕೇಳಿಸಿಕೊಂಡು, ಆ ದರ್ಜಿ, "ಸ್ವಾಮಿ, ಆ ಬಟ್ಟೆ ತಂದುಕೊಡಿ. ನೀವ್ಯಾಕೆ ಯೋಚನೆ ಮಾಡ್ತೀರಿ? ಆ ಬಡ ಮಕ್ಕಳಿಗೆ ಬಟ್ಟೆ ಕೊಡಿಸೋ ಯೋಗ್ಯತೆ ನನ್ನಲ್ಲಿಲ್ಲ ದಿದ್ದರೂ ಹೊಲಿದಾದರೂ ಕೊಡ್ತೀನಿ," ಎಂದ.

ನಾಲ್ಕೇ ದಿನಗಳಲ್ಲಿ ಅವನ್ನು ಹೊಲಿದು ಕೊಟ್ಟ. ಆತನಿಗೆ "ದಾರದ ಖರ್ಚನ್ನಾದರೂ ತೊಗೊ" ಎಂದರೂ ಆತ ಒಪ್ಪಲಿಲ್ಲ.

—ಹೆಚ್. ಗೌಡ

ನಾನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂಬತ್ತ-ನೆಯ ತರಗತಿಯಲ್ಲಿ ಓದುತ್ತಿದ್ದಾಗ ಕೆ.ಎಸ್.ಎಸ್. ಎಂಬ ಉಪಾಧ್ಯಾಯರು ಸಂಸ್ಕೃತ ಕಲಿಸುತ್ತಿ-ದ್ದರು. ಕಚ್ಚೆಪಂಜೆ, ಜುಬ್ಬಾ, ಗಾಂಧಿಟೋಪಿ, ಶಲ್ಯ ಅವರ ಪೋಷಾಕು. ಕೊಡೆ ಹಿಡಿದುಕೊಂಡು ತರಗತಿಗೆ ಬರುತ್ತಿದ್ದ ಅವರು, ಅದನ್ನು ಕುರ್ಚಿಗೆ ತಗುಲಿಸಿ, ಶಲ್ಯವನ್ನು ಕುರ್ಚಿಯ ಬೆನ್ನಿಗೆ ಹಾಕಿ ಪಾಠ ಹೇಳಲಾರಂಭಿಸುತ್ತಿದ್ದರು.

ಭಾವಕ್ಕೆ ತಕ್ಕಂತೆ ಅಭಿನಯಿಸುತ್ತ ಪಾಠ ಮಾಡುವುದು ಅವರ ರೂಢಿ. ಹೀಗಾಗಿ ಅವರ ಪಾಠ ನಡೆದಾಗ ಮುಖ್ಯೋಪಾಧ್ಯಾಯರನ್ನೊಳ ಗೊಂಡು ಉಳಿದೆಲ್ಲ ಸಿಬ್ಬಂದಿಯವರೂ ಆ ಸಾಭಿ-ನಯ ಪಾಠವನ್ನು ಆಲಿಸಿ, ನೋಡಿ ಆನಂದಿಸುತ್ತಿ ದ್ದರು.

ಕೆ.ಎಸ್.ಎಸ್. ಅವರ ವೇಷ-ಭೂಷಣ, ಮಾತುಗಾರಿಕೆ ಪಾಠ ಮಾಡುವ ಶೈಲಿ ನನ್ನ ಮೇಲೆ ತುಂಬ ಪ್ರಭಾವ ಬೀರಿದ್ದವು. ನಾನು ನನ್ನ ರೂಮಿನಲ್ಲಿ ಸಮಯ ಸಿಕ್ಕಾಗಲೆಲ್ಲ ಅವರಂತೆಯೆ ಪೋಷಾಕು ತೊಟ್ಟು, ಅವರನ್ನು ಅನುಕರಣೆ ಮಾಡುತ್ತಿದ್ದೆ. ಅವರು ಕ್ಲಾಸಿನಲ್ಲಿ ಕೊಡೆ-ಶಲ್ಯ ತೆಗೆದಿಡುವಂತೆಯೇ ಇಟ್ಟು, ಅಭಿನಯಿಸುವುದನ್ನು ನನ್ನ ಅಕ್ಕಪಕ್ಕದ ರೂಮಿನ ವಿದ್ಯಾರ್ಥಿಗಳು ಬಂದು ನೋಡಿ ಆನಂದಿಸುತ್ತಿದ್ದರು.

ನಮ್ಮ ರೂಮುಗಳಿಗೊಬ್ಬ ಮೇಲ್ವಿಚಾರಕರಿ-ದ್ದರು. ಒಮ್ಮೆ ನಾನೀ ರೀತಿ ಅನುಕರಣೆ ಮಾಡು

ತ್ತಿದ್ದಾಗ ಹುಡುಗರೆಲ್ಲ ನಗುತ್ತಿರುವುದನ್ನು ಕೇಳಿ, ಮೇಲ್ವಿಚಾರಕರು ಒಬ್ಬನನ್ನು ಕಳಿಸಿ ನನ್ನನ್ನು ಕರೆಸಿಕೊಂಡರು. "ಏನದು ಗಲಾಟೆ?" ಎಂದು ಕೇಳಿದರು. ನಾನು ಇದ್ದುದನ್ನು ಇದ್ದಂತೆಯೇ ಹೇಳಿದೆ. ಏಕೆಂದರೆ ಆ ವೇಷದಲ್ಲಿಯೇ ನಾನಲ್ಲಿಗೆ ಹೋಗಿದ್ದೆ. "ಓಹೋ, ಎಲ್ಲಿ, ನನ್ನೆದುರು ಅಭಿನಯಿಸು ನೋಡೋಣ," ಎಂದರು. ನಾನು ಅಳುಕುತ್ತ ಕೆ.ಎಸ್.ಎಸ್. 'ಆಗಿ' ಪಾಠ ಮಾಡಿದೆ: ತುಂಬ ಮೆಚ್ಚಿಕೊಂಡ ಅವರು, "ನೋಡಪ್ಪಾ, ಅಭಿನಯ ಅನುಕರಣೆ ಎಲ್ಲರಿಗೂ ಸಾಧಿಸುವಂಥದಲ್ಲ. ನೀನು ರೂಢಿಸಿಕೊ. ಆದರೆ ಈಗ ಪರೀಕ್ಷೆ ಸಮೀಪಿಸುತ್ತಿದೆ. ಓದಿಕೊ," ಎಂದು ಹೇಳಿ ಬೆನ್ನು ಸವರಿದರು.

ನಾನು ಚೆನ್ನಾಗಿ ಓದಿ ಚೆನ್ನಾಗಿ ಪರೀಕ್ಷೆಯಲ್ಲಿ ತೇರ್ಗಡೆಯಾದೆ. ಅಲ್ಲದೆ ಅಭಿನಯ ಕಲೆ ರೂಢಿಸಿಕೊಂಡು ಕೆಲ ನಾಟಕಗಳಲ್ಲಿ ಪಾತ್ರವಹಿಸಿ ಗೆಳೆಯರನ್ನು ಹಿರಿಯನ್ನು ನಗಿಸಿ, ನಕ್ಕು ಸಂತೋಷಪಟ್ಟೆ.

—ಎಂ. ಬಿ. ಮಂಜುನಾಥಾಚಾರ್

ಕೆಲವು ದಿನಗಳ ಹಿಂದೆ ನಾನೂ ನನ್ನ ಸಹೋದ್ಯೋಗಿಗಳೂ ನಂದಿಬೆಟ್ಟಕ್ಕೆ ಹೋಗಿದ್ದೆವು. ಆ ದಿನ ಕನ್ನಡ ಮತ್ತು ತೆಲುಗು ಚಿತ್ರಗಳ ಶೂಟಿಂಗ್ ನಡೆಯುತ್ತಿತ್ತು. ನಾವೂ ಸ್ವಲ್ಪ ಕಾಲ ಶೂಟಿಂಗ್ ನೋಡಿದೆವು. ಸ್ವಲ್ಪ ಕಾಲ ಬ್ಯಾಡ್ಮಿಂಟನ್ ಆಡಿದೆವು. ಆಕಸ್ಮಿಕವಾಗಿ ಆ ಕಡೆ ಬಂದ ಶಂಕರಾಭರಣಂ ಖ್ಯಾತಿಯ ನಿರ್ದೇಶಕರಾದ ಶ್ರೀ ಕೆ. ವಿಶ್ವನಾಥರೂ ನಮ್ಮೊಡನೆ ಸ್ವಲ್ಪ ಕಾಲ ಆಟ ಆಡಿದರು. ತಮ್ಮ ಚಿತ್ರಕ್ಕಾಗಿ ನಮ್ಮ ಆಟವನ್ನೂ ಚಿತ್ರೀಕರಿಸಿಕೊಂಡರು. ಆ ನಂತರ ನಾವು ಐದಾರು ಮಂದಿಸ ಹೋದ್ಯೋಗಿಗಳು ಒಂದು ಮರದ ಕೆಳಗೆ ಕುಳಿತು, ಅದೂ ಇದೂ ಹರಟೆ ಹೊಡೆಯುತ್ತಾ ತಿಂಡಿ ಡಬ್ಬಗಳನ್ನು ಮುಂದಿಟ್ಟುಕೊಂಡಿದ್ದೆವು.

ಅಷ್ಟರಲ್ಲಿ ಇಬ್ಬರು ತರುಣಿಯರು ನಾವಿದ್ದ ಕಡೆಗೆ ಧಾವಿಸಿ ಬಂದರು. "ಸಾರ್, ನಮ್ಮಿಬ್ಬರನ್ನು ಯಾರೋ ಮೂವರು ಪುಂಡರು ಬೆನ್ನಟ್ಟಿ ಬರುತ್ತಿದ್ದಾರೆ. ಒಂದೇ ಸಮನೆ ಫಾಲೋ ಮಾಡುತ್ತಿದ್ದಾರೆ. ನಮಗೆ ಭಯವಾಗುತ್ತಿದೆ ಸಾರ್," ಎಂದು ಭಯಪೂರಿತರಾಗಿ ಹೇಳಿದರು. ನಾನು, "ನಿಮ್ಮ ಕಡೆ ಯಾರೂ ಬಂದಿಲ್ವೆ?" ಎಂದೆನು. "ಇಲ್ಲಾ ಸಾರ್, ಸಿನಿಮಾ ಶೂಟಿಂಗ್ ನೋಡಲು ಬಂದೆವು," ಎಂದರು. ಕ್ಷಣಮಾತ್ರದಲ್ಲಿ ನನ್ನ ಸಹೋದ್ಯೋಗಿ ಒಬ್ಬರು, "ನೋಡಿ, ನೀವು ನಮ್ಮ ಮನೆಯುವರಂತೆ ವರ್ತಿಸಿ, ತಿಂಡಿ ಸಹಾ ತಿನ್ನಿ, ಯಾರನ್ನಾದರೂ ಅಣ್ಣ ಎಂದು ಕರೆಯುತ್ತಾ ಮಾತನಾಡುತ್ತಿರಿ," ಎಂದು ಹೇಳಿದರು. ಅದರಂತೆಯೇ ಆ ತರುಣಿಯರು ನಮ್ಮೊಂದಿಗೆ ಸೇರಿಕೊಂಡರು.

ಅಷ್ಟರಲ್ಲಿ ಬೆನ್ನಟ್ಟಿ ಬರುತ್ತಿದ್ದ, ಆ ಮೂವರು ನಿರಾಶೆಯಿಂದ, ಕೋಪದಿಂದ ನಮ್ಮ ಬಳಿಗೆ ಬಂದರು. ಆದರೆ ಅವರು ನಮ್ಮನ್ನು ಕಂಡು ಸುಸ್ತಾದರು. ನನ್ನ ಮಿತ್ರರು, "ಏನು ಬೇಕಾಗಿತ್ತು ಸಾರ್?" ಎಂದರು. "ಹೇ, ಹೇ, ಏನಿಲ್ಲಾ, ಮ್ಯಾಚ್ ಬಾಕ್ಸ್ ಬೇಕಾಗಿತ್ತು,'' ಎಂದರು. "ಸಾರಿ, ನಾವು ಧೂಮಪಾನಮಾಡುವುದಿಲ್ಲ,'' ಎಂದೆವು. ಅಷ್ಟರೊಳಗೆ ಆ ತರುಣಿಯರು, "ಎರಡೆರಡು ಚಪಾತಿ ಪಲ್ಯವನ್ನು ಎಲೆಯಲ್ಲಿ ಹಾಕಿ, ಅವರಿಗೆ ನೀಡಿದರು. ಆ ಯುವಕರು, "ಥ್ಯಾಂಕ್ಸ್, ಈಗ ತಾನೇ ಊಟವಾಯಿತು; ತೊಂದರೆಗಾಗಿ ಕ್ಷಮಿಸಿ,'' ಎಂದು ಹೇಳಿ ಹೊರಟು ಹೋದರು. ಆ ನಂತರ ಆ ತರುಣಿಯರಿಗೆ ಬುದ್ಧಿವಾದ ಹೇಳಿ ಬಸ್ಸಿನಲ್ಲಿ ಕೂಡಿಸಿ ಕಳಿಸಿದೆವು.

—ಎಲ್. ಜಿ. ರಾಮರಾವ್



# ಯಕ್ಷಿಣಿ ಕತೆಗಳು

ಡಾ. ವರದರಾಜ ಹುಯಿಲಗೋಳ

ಕಡು ಬಡನಾದ ಒಬ್ಬ ಮೋಚಿ ಇದ್ದ. ಒಂದು ಜೊತೆ ಪಾದರಕ್ಷೆಗೆ ಸಾಕಾಗುವಷ್ಟೇ ತೊಗಲು ಅವನ ಹತ್ತಿರ ಉಳಿದಿದ್ದಿತು. ಅದನ್ನು ಕೆಲಸ ಮಾಡುವ ಮೇಜಿನ ಮೇಲಿಟ್ಟು ಅವನು ನಿದ್ರೆ



ಹೋದನು. ಮರುದಿನ ಬೆಳಗ್ಗೆ ಆಶ್ಚರ್ಯಕರವಾದ ಸಂಗತಿ! ಅಲ್ಲಿ ಸುಂದರವಾದ ಸಿದ್ಧವಾಗಿದ್ದ ಪಾದರಕ್ಷೆಗಳಿದ್ದವು; ಅವುಗಳಿಗೆ ಹೆಚ್ಚು ಬೆಲೆ ದೊರಕಿತು. ಅದರಿಂದ ಹೆಚ್ಚು ತೊಗಲು ಕೊಂಡನು. ಮರುದಿನ ಅದೇ ಮೇಜಿನ ಮೇಲೆ ಎರಡು ಅಂದವಾದ ಜೊತೆ ಪಾದರಕ್ಷೆಗಳಿದ್ದವು. ಮೋಚಿ ಮತ್ತು ಅವನ ಹೆಂಡತಿ 'ಪಾದರಕ್ಷೆ ಮಾಡುವವರು ಯಾರು?' ಎಂಬ ಕುತೂಹಲದಿಂದ, ರಾತ್ರಿಯಲ್ಲಿ ಅಡಗಿ ಕುಳಿತುಕೊಂಡರು. ನಡುರಾತ್ರಿಯಲ್ಲಿ ನಗ್ನರಾದ ಇಬ್ಬರು ಕಿನ್ನರ ಹುಡುಗರು ಅಲ್ಲಿಗೆ ಬಂದು, ವೇಗವಾಗಿ ಕೆಲಸ ಮಾಡುವುದನ್ನು ನೋಡಿದರು. ಪಾಪ! ಅವರ ಮೈಮೇಲೆ ಬಟ್ಟೆಗಳೂ ಇರಲಿಲ್ಲ. ಮೋಚಿಯ ಹೆಂಡತಿ ಆ ಮಕ್ಕಳಿಗೆ ಉಡುಪು, ಮುಂತಾದವುಗಳನ್ನು ಸಿದ್ಧಪಡಿಸಿ, ಆ ರಾತ್ರಿ ಮೇಜಿನ ಮೇಲೆ ಇಟ್ಟಳು. ಆಗ ಕ್ರಿಸ್‌ಮಸ್ ಹಬ್ಬ. ಹಬ್ಬದ ಕಾಣಿಕೆ ಸ್ವೀಕರಿಸಿ ಆ ಕಿನ್ನರ ಹುಡುಗರು ಅಂದು ಮಾಯವಾದವರು ತಿರುಗಿ ಬರಲಿಲ್ಲ. ಮೋಚಿಯೂ ದಿನಾಲು ದುಡಿದು, ಹಣವನ್ನು ಸಂಪಾದಿಸಿ ಸಂತೋಷಪಟ್ಟನು.

ಇದು ಗ್ರಿಮ್ ಸಹೋದರರು ಬರೆದ ಒಂದು ಕಿನ್ನರ ಅಥವಾ ಯಕ್ಷಿಣಿ ಕತೆಯ ಸಾರಾಂಶ,

ಈ ರೀತಿಯ ಅಸಂಖ್ಯಾತ ಕತೆಗಳು ಯುರೋಪ್ ಹಾಗೂ ಅಮೆರಿಕಗಳಲ್ಲಿ ಬಹಳ ಪ್ರಖ್ಯಾತ ಪಡೆದಿವೆ. ಮಕ್ಕಳ ಲೋಕದಲ್ಲಷ್ಟೇ ಅಲ್ಲ ಹಿರಿಯರು ಪ್ರಪಂಚದಲ್ಲಿಯೂ ಅವು ಜನಪ್ರಿಯತೆ ಪಡೆದಿವೆ.



ಜೇಕಬ್ ಮತ್ತು ವಿಲ್‌ಹೆಲ್ಮ್ ಇವರೇ ಜರ್ಮನಿಯಲ್ಲಿ ಜನಿಸಿದ ಗ್ರಿಮ್ ಸಹೋದರರು. ಇಬ್ಬರೂ ಕಾನೂನು ಪದವೀಧರರು, ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು. ಬರ್ಲಿನ್ನಿನಲ್ಲಿ ಅಕ್ಕಪಕ್ಕದಲ್ಲಿ ಇವರ ಸಮಾಧಿಗಳಿವೆ. ಜೇಕಬ್ (೧೭೮೫–೧೮೬೩), ವಿಲ್‌ಹೆಲ್ಮ್ (೧೭೮೬–೧೮೫೯) ಇವರು ಜರ್ಮನ್ ಭಾಷೆಯ ಬಗ್ಗೆ ಸಂಶೋಧನೆ ಕೈಗೊಂಡು, ಹಳ್ಳಿಗಳಲ್ಲಿ ತಿರುಗಾಡಿದರು. ಆಗ ಹಳ್ಳಿಗರು ಹೇಳಿದಂತೆಯೇ ಆ ಕತೆಗಳನ್ನು ಬರೆಯುತ್ತ, ೧೩ ವರುಷ ಶ್ರಮ ಪಟ್ಟರು. ಅವರ ಶ್ರಮದ ಪರಿಣಾಮವಾಗಿ ಈ ಕಿನ್ನರ ಕತೆಗಳ ಮೂರು ಸಂಪುಟಗಳು (೧೮೧೨–೧೮೨೨), ೧೯ನೇ ಶತಮಾನದ ಆದಿಯಲ್ಲಿ ಪ್ರಕಟಗೊಂಡವು.



ಈ ಕಿನ್ನರ ಕತೆಗಳಲ್ಲಿ ಅದ್ಭುತ ರಮ್ಯತೆ, ಜಾದೂ ಶಕ್ತಿಯ ಶ್ರೇಷ್ಠತೆಯ ನಿರೂಪಣೆ ಇವು ಎದ್ದು ಕಾಣುತ್ತವೆ. ಗ್ರಿಮ್ ಸಹೋದರರೇ ಬರೆದ 'ಹಿಮ–ಧವಳ (ಸ್ನೋ–ವ್ಹಾಯಿಟ್), ಕತೆಯು ಜಾದೂ ಶಕ್ತಿಯ ಕನ್ನಡಿಯಿಂದಲೇ ಬೆಳೆಯುತ್ತ ಹೋಗುತ್ತದೆ. ಪ್ರತಿ ದಿವಸ ಸುಂದರಿಯಾದ ರಾಣಿಯು ತನ್ನ ಹತ್ತಿರ ಇರುವ ಮಾಂತ್ರಿಕ ಕನ್ನಡಿಯೆದುರು ನಿಂತು—

**ಗೋಡೆಯ ಮೇಲಿನ ಮಾಂತ್ರಿಕ ಕನ್ನಡಿಯೇ,**
**ಬಹಳೇ ಸುಂದರಿ ಯಾರೆಂಬುದ ಹೇಳೆ ?**

ಎಂದು ಕೇಳುತ್ತಿದ್ದಳು. ರಾಣಿಯು ಅತ್ಯಂತ ಚೆಲುವೆ ಎಂಬುದನ್ನು ಕನ್ನಡಿಯು ಒಪ್ಪಿಕೊಂಡು ಅವಳಿಗೆ ಹೇಳಿ, ಅನಂತರ ಹಿಮ–ಧವಳೆ ಅವಳಿಗಿಂತಲೂ ಸುಂದರಿ ಎಂದು ಹೇಳುತ್ತಿತ್ತು. ಮಾತನಾಡುವ ಕನ್ನಡಿಯನ್ನು ನಂಬಿಕೊಂಡು, ಆ ರಾಣಿಯು ಹಿಮ–ಧವಳೆಯನ್ನು ಕೊಲಿಸಲು ಸರ್ವ ರೀತಿಯಿಂದಲೂ ಪ್ರಯತ್ನಿ

ಸಿದಳು. ಆದರೆ ಅರಣ್ಯದಲ್ಲಿದ್ದ ಏಳು ಜನ ಕುಬ್ಜರು ಅವಳ ಜೀವನವನ್ನು ಉಳಿಸಿದರು, ಅಲ್ಲದೇ ಕೊನೆಗೆ ಅವಳೊಬ್ಬ ರಾಜಪುತ್ರನನ್ನು ಮದುವೆಯಾಗಿ ಸುಖದಿಂದಲೂ ಇದ್ದಳು.

ಹೀಗೆ ಮಾಂತ್ರಿಕ ಶಕ್ತಿಯ ಜೊತೆಗಿರುವ ಅದ್ಭುತ ಕಲ್ಪನೆಯೂ ಯಕ್ಷಿಣಿ ಕತೆಗಳಿಗೆ ಕಳೆ ಯೇರಿಸಿದೆ. ಅರಬ್ಬಿ ದೇಶದ 'ಅಲ್ಲಾವುದ್ದೀನನ ಅದ್ಭುತ ದೀಪ' ಕತೆಯು ಈ ಮಾತಿಗೆ ಅತ್ಯುತ್ತಮ ಉದಾಹರಣೆಯಾಗಿದೆ. 'ಅಲೀ ಬಾಬಾ ಹಾಗೂ ೪೦ ಕಳ್ಳರು' ಕತೆಯೂ ಅದೇ ರೀತಿಯದಾಗಿದೆ. ಇಂಥ ಯಕ್ಷಿಣಿ ಕತೆಗಳು ಮಕ್ಕಳನ್ನೂ ಹಾಗೂ ಇನ್ನಿತರ ಓದುಗರನ್ನೂ ವಿಶಾಲವಾದ ಕಲ್ಪನಾ ಸಾಮ್ರಾಜ್ಯದಲ್ಲಿ ಸೆಳೆದೊಯ್ಯುತ್ತವೆ. ಕಲ್ಪನೆಯ ಮಾಂತ್ರಿಕ ಚಾಪೆಯ ಮೇಲೆ ಒರಗಿ, ಆಕಾಶದಲ್ಲಿ ಹಾರುತ್ತ ಅನೇಕ ಅದ್ಭುತಗಳನ್ನು ನೋಡುವ ಹಾಗೆ ಈ ಯಕ್ಷಿಣಿ ಕತೆಗಳು ನಮ್ಮ ಮನಸ್ಸನ್ನು ಪರಿವರ್ತಿಸುತ್ತವೆ. ಅಂತಹ ಶಕ್ತಿ ಅವುಗಳಿಗಿದೆ.

'ಎಲಿಸ್ ಇನ್ ವಂಡರ್‌ಲ್ಯಾಂಡ್' ಕತೆ ಯಾರಿಗೆ ಗೊತ್ತಿಲ್ಲ!! ಬೈಬಲ್‌ನಷ್ಟೇ ಜನಪ್ರಿಯತೆಯನ್ನು ಈ ಕತೆ ದೊರಕಿಸಿದೆ ಎಂದು ಹೇಳಲಾಗಿದೆ. ಈ ಕತೆ ಬರೆದವನು ಗಣಿತ ವಿಷಯದ ಪ್ರಾಧ್ಯಾಪಕನಾಗಿದ್ದ ಚಾರ್ಲಸ್ ಡಾಜ್‌ಸನ್ (೧೮೩೨-೧೮೯೮). ಅವನು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿದ್ದನು; ಲೂಯಿ ಕೆರೊಲ್ ಎಂಬುದು ಅವನಿಗೆ ಹೆಸರು. ಅವನು ಮಕ್ಕಳನ್ನು ಬಹಳ ಪ್ರೀತಿಸುತ್ತಿದ್ದ; ಆದರೆ ಆಲಿಸ್ ಲಿಡೆಲ್ ಎಂಬ ಹುಡಿಗೆಯನ್ನು ಅವನು ಬಹುವಾಗಿ ಮೆಚ್ಚಿಕೊಂಡಿದ್ದ. ಕೆರೊಲ್‌ನ ಮನೆಗೆ ಅವಳು ಮೇಲಿಂದ ಮೇಲೆ ಬರುತ್ತಿದ್ದಳು. ಹೀಗಾಗಿ ಅವಳ ಹೆಸರಿನಲ್ಲಿಯೇ 'ಎಲಿಸ್ ಇನ್ ವಂಡರ್‌ಲ್ಯಾಂಡ್' ಬರೆದು ಜಾಗತಿಕ ಪ್ರಸಿದ್ಧಿಯನ್ನು ಸಂಪಾದಿಸಿದ. "Alice in Wonderland is a story of Tomorrow and Tomorrow holding delight and laughter for all children of the age of Alice.." ಎಂದು ಈ ಯಕ್ಷಿಣಿ ಕತೆಯನ್ನು ಕುರಿತು ಹೇಳಲಾಗಿದೆ.

ಮೊಲ, ಹುಲಿ, ಕಪ್ಪೆ, ಪಕ್ಷಿ ಹಾಗೂ ಅನೇಕ ಪ್ರಾಣಿಗಳು ಎಲಿಸ್‌ಳ ಜೊತೆಗೆ ಆಟವಾಡುತ್ತವೆ. ಎಲಿಸ್‌ಳ ಜಗತ್ತು, ಏಳು ಜಾಗತಿಕ ಅದ್ಭುತಗಳಲ್ಲಿ ಒಂದು ಎನ್ನುವಂತೆ ಕತೆಯ ನಿರೂಪಣೆಯೂ ಇದೆ. ಏನೇ ಇದ್ದರೂ, ಮಕ್ಕಳ



ಬುದ್ಧಿಮತ್ತೆ, ಮಕ್ಕಳ ಮನೋವಿಜ್ಞಾನ, ಮಕ್ಕಳ ಮುಗ್ಧ ಮಾತು ಇವುಗಳ ಕಡೆಗೇನೆ ಕತೆಗಾರನ ದೃಷ್ಟಿ ಇದೆ. ಯಕ್ಷಿಣಿ ಕತೆಗಳಲ್ಲಿ ಅದು ಎದ್ದು ಕಾಣುವ ಗುಣ. ಹ್ಯಾನ್ಸ್ ಕ್ರಿಶ್ಚನ್ ಆ್ಯಂಡರಸನ್ನನ 'ಚಕ್ರವರ್ತಿಯೂ, ಅವನ ಹೊಸ ಬಟ್ಟೆಗಳೂ' ಕತೆಯ ಕೊನೆ ಇದಕ್ಕೆ ಒಳ್ಳೇ ದೃಷ್ಟಾಂತ. ಚಕ್ರವರ್ತಿಗೆ ಇಬ್ಬರು ಹೊಸ ನೇಕಾರರು, ಜಗತ್ತಿನಲ್ಲಿಯೇ ಶ್ರೇಷ್ಠವಾದ ಬಟ್ಟೆಗಳನ್ನು ಮಾರಾಟಮಾಡು ತ್ತಾರೆ. ಎಲ್ಲ ಮಂತ್ರಿಗಳೂ ಆ ಬಟ್ಟೆಗಳನ್ನು ಪ್ರಶಂಸಿಸುತ್ತಾರೆ. ಚಕ್ರವರ್ತಿ ಆ ನವೀನ ಬಟ್ಟೆ ಗಳನ್ನು ಧರಿಸಿ ಮೆರವಣಿಗೆಯಲ್ಲಿ ಸಾಗುತ್ತಾನೆ. ಆದರೆ ಸತ್ಯ ಸಂಗತಿಯನ್ನು ಹೇಳುವ ಧೈರ್ಯ ಯಾರಿಗೂ ಇರಲಿಲ್ಲ. "ಅಮ್ಮಾ, ಅಲ್ಲಿ ನೋಡು. ಅರಸನ ಮೈಮೇಲೆ ಬಟ್ಟೆಗಳೇ ಇಲ್ಲ" ಎಂದು ಒಂದು ಮಗು ಕೂಗುತ್ತದೆ!! ನೇಕಾರರ ಮೋಸತನ ಮತ್ತು ಸತ್ಯ ಸಂಗತಿ ಸ್ಪಷ್ಟವಾಗಿ ತಿಳಿದದ್ದು, ಆ ಮಗುವಿನಿಂದಲೇ!

ಯಕ್ಷಿಣಿ ಕತೆಗಳಲ್ಲಿ ಆಂಡರ್‌ಸನ್ (೧೮೦೫–೧೮೭೫)ನ ಹೆಸರು ಬಹು ದೊಡ್ಡದು. ಅವನು ಒಬ್ಬ ಮೋಚಿಯ ಮಗ, ಕಡು ಬಡವ. ಡೆನ್ಮಾರ್ಕಿನ ಈ ಹುಡುಗ ಚಿಕ್ಕವನಿರುವಾಗಲೇ ಅನೇಕ ಕಷ್ಟಗಳನ್ನು ಅನುಭವಿಸಿದ. ಶಿಕ್ಷಣವನ್ನೇ ಪಡೆಯದ ಆ್ಯಂಡರ್‌ಸನ್ ಚಿಕ್ಕವನಿರುವಾಗಲೇ, ತನ್ನ ದೈವವನ್ನು ತಾನೇ ರೂಪಿಸಿಕೊಳ್ಳಲು ಮನೆ ಬಿಟ್ಟು ಹೊರಟುಹೋದ. ಮಕ್ಕಳಲ್ಲಿ ಒಂದಾಗಿ ಕತೆ ಹೇಳುವುದನ್ನು ಕಲಿತ. ಜಾದೂಗಾರನ ಕೈಯಲ್ಲಿರುವ ಜಾದೂ ಕಟ್ಟಿಗೆಯಂತೆ ಅವನ ಯಕ್ಷಿಣಿ ಕತೆಗಳ ನಿರೂಪಣೆ. ಅವನಿಗೆ ಆ ಕಲೆ ದೈವದತ್ತ. 'Wizard of Fairy Tales' ಎಂದೂ ಅವನಿಗೆ ಹೆಸರು. ಈ ಕತೆಗಳಿಂದ ಅವನು ಶ್ರೀಮಂತನಾದನಲ್ಲದೆ ತನ್ನ ದೇಶದಲ್ಲಿ ಅಭೂತಪೂರ್ವ ಸನ್ಮಾನವನ್ನೂ ಪಡೆದ.

ಫ್ರಾನ್ಸ್ ದೇಶದ ಪೆರಾಲ್ಟನ 'ಸಿಂಡ್ರೇಲಾ' ಸಹ ಪ್ರಪಂಚದ ತುಂಬಾ ಹೆಸರುವಾಸಿಯಾಗಿದೆ. ಮತ್ಸರ ಬುದ್ಧಿಯಿಂದ ಅವಳ ಸೋದರಿಯರು, ಮಲತಾಯಿ ಅವಳನ್ನು ಕ್ರೂರ ರೀತಿಯಿಂದ ನಡೆಯಿಸಿಕೊಳ್ಳುತ್ತಿದ್ದರೂ, ಕೊನೆಗೆ ಸಿಂಡ್ರೇಲಾಳಿಗೇ ವಿಜಯ ದೊರೆಯುತ್ತದೆ. ಅವಳು ರಾಜಪುತ್ರನನ್ನು ಮದುವೆಯಾಗಿ ಸುಖವಾಗಿ ಬಾಳುತ್ತಾಳೆ! ಹೀಗೆ ಬಹಳಷ್ಟು ಯಕ್ಷಿಣಿ ಕತೆಗಳು ಸುಖಾಂತವಾಗಿಯೇ ಕೊನೆಗೊಂಡಿವೆ. ಕತೆಯ ಪ್ರಾರಂಭದಲ್ಲಿ ದುಷ್ಟ ಶಕ್ತಿಗಳ ಮೇಲ್ಗೈ ಇದ್ದರೂ, ಮುಕ್ತಾಯದಲ್ಲಿ ಆನಂದದಾಯಕ ವಾತಾವರಣವೇ ಇದೆ. ಅಂದರೆ ಒಳ್ಳೆಯದಕ್ಕೇ



ಗೆಲುವು ಎಂಬುದನ್ನು ಈ ಕತೆಗಳು ತೋರಿಸಿ ಕೊಟ್ಟಿವೆ.

ನೀತಿಕತೆ(ಫೆಬಲ್)ಗಳಂತೆ ಯಕ್ಷಿಣಿ ಕತೆಗಳು ಮೆಲ್ನೋಟದಲ್ಲಿ ತೋರಿದರೂ, ಇವು ನೀತಿಕತೆಗಳೇ ಅಲ್ಲ. ಈಸೋಪ್, ವಿಷ್ಣುಶರ್ಮ, ವಸುಭಾಗ, ಗುಣಾಢ್ಯ ಇವರ ಕತೆಗಳಿಗೂ, ಯಕ್ಷಿಣಿ ಕತೆಗಳಿಗೂ ವ್ಯತ್ಯಾಸವಿದೆ. ಯಕ್ಷಿಣಿ ಕತೆಗಳಲ್ಲಿ ನೀತಿ ಪ್ರಾಮುಖ್ಯವನ್ನು ಪಡೆಯದೇ, ಮಾಂತ್ರಿಕ ವಿದ್ಯೆ, ಅದ್ಭುತ ಕಲ್ಪನೆ, ಒಳ್ಳೆಯ-ದಕ್ಕೆ ಗೆಲುವು ಮುಂತಾದವು ಕತೆಗಳಲ್ಲಿ ಸ್ಥಾನ ಪಡೆದಿವೆ. ಗುಣಾಢ್ಯನ ಬೃಹತ್ಕಥಾ ಸಂಗ್ರಹದಲ್ಲಿ ಬೇತಾಳನ ಕತೆ ಮುಂತಾದವುಗಳಲ್ಲಿ ಅದ್ಭುತ ಕಲ್ಪನೆ ಇದ್ದರೂ, ಆ ಕತೆಗಳ ನಿರೂ-ಪಣೆಯ ಸ್ವಾರಸ್ಯವೇ ಬೇರೆ ತೆರನಾಗಿದೆ. ಭಾರತದಲ್ಲಿ ನೀತಿಕತೆಗಳು ವಿವಿಧ ಹಂತಗಳಲ್ಲಿ ಬೆಳೆದು ಬಂದುದು ಧರ್ಮ ಪ್ರಚಾರಕ್ಕಾಗಿ. ಸಮಾಜ ನೀತಿಗಾಗಿ. ಜಾತಕ, ಆರಾಧನಾ, ನಿದರ್ಶನ, ಗಾಹೆ ಈ ಮುಂತಾದ ಪ್ರಾರಂಭದ ಕತೆಗಳಲ್ಲಿ ಈ ಗುಣಗಳನ್ನು ನಾವು ಮನಗಾಣಬಹುದು. ಬಹಳ ಪ್ರಾಚೀನ ಕಾಲದಲ್ಲಿಯೇ ಇಂಥ ಕತೆಗಳು ಭಾರತದಲ್ಲಿ ಜನತೆಯ ನಾಲಿಗೆಯ ಮೇಲೆ ನೆಲೆಯೂರಿವೆ.

ಯಕ್ಷಿಣಿ ಕತೆಗಳು ಹೆಚ್ಚಾಗಿ ಇತ್ತೀಚೆಗೆ ಬೆಳಕು ಕಂಡಂಥವು. ಸಾಂಪ್ರದಾಯಿಕವಾಗಿ ಈ ಕತೆಗಳು ಯುರೋಪಿನ ಗ್ರಾಮೀಣ ಜನತೆಯಲ್ಲಿ ಹಲವಾರು ವರ್ಷಗಳಿಂದಲೂ ಇರಬೇಕು. ಅವುಗಳನ್ನು ಕಲೆ ಹಾಕಿ ಪ್ರಕಾಶಕ್ಕೆ ತಂದ ಶ್ರೇಯಸ್ಸು ಗ್ರಿಮ್ ಸಹೋದರರದು. ಆ್ಯಂಡರ್‌ಸನ್, ಪೆರಾಲ್ಟ್ ಮೊದಲಾದವರು ತಾವೇ ಯಕ್ಷಿಣಿ ಕತೆಗಳನ್ನು ರಚಿಸಿದರು. ಇವರೆಲ್ಲ ಯುರೋಪಿನಲ್ಲಿ ಬದುಕಿದುದು ೧೯ನೇ ಶತಮಾನದ ಆದಿಯಲ್ಲಿ. ಸುಮಾರು ೧೮೦೦ ಯಕ್ಷಿಣಿ ಕತೆಗಳ ಜನನದ ಕಾಲವೆಂದು ಹೇಳಬೇಕು. ಭಾರತದ ನೀತಿ ಕತೆ ಕ್ರಿಸ್ತಪೂರ್ವ ಕಾಲದಿಂದಲೂ ಇದೆ ಎಂದು ತಿಳಿದುಬಂದಿದೆ.

ಯಕ್ಷಿಣಿ ಕತೆಗಳಲ್ಲಿ ಕಲ್ಪನೆ ಅಪಾರವಾಗಿ ಇದ್ದರೂ, ವಾಸ್ತವ ಜಗತ್ತನ್ನು ಬಿಟ್ಟು ಅವು ದೂರವಿಲ್ಲ. ಪ್ರತಿಯೊಂದು ಕತೆ ಸಾಮಾನ್ಯವಾಗಿ ವಾಸ್ತವಿಕ ಸಂಗತಿಗಳಿಂದಲೇ ಆರಂಭವಾಗಿವೆ; ಕೊನೆಗೆ ಸತ್ಯಕ್ಕೆ ಹಾಗೂ ನಿಜವಾದ ಜಗತ್ತಿನ ರೀತಿಗೆ ಮಾನ್ಯತೆ ಕೊಟ್ಟಿವೆ. 'Rich in Fantacy but strangely down to earth' ಎಂಬುದು ಈ ಕತೆಗಳ ವೈಶಿಷ್ಟ್ಯ.

ಈ ವರೆಗಿನ ವಿವೇಚನೆಯಿಂದ ಯಕ್ಷಿಣಿ ಕತೆಗಳು ಒಳಗೊಂಡಿರುವ ಲಕ್ಷಣಗಳನ್ನು ನಾವು ಸಂಗ್ರಹಿಸಿ ಹೀಗೆ ಹೇಳಬಹುದು; ೧) ಕಲ್ಪನಾ ಸಂಪತ್ತು ೨) ಅದ್ಭುತ ರಮ್ಯತೆ ೩) ಮಾಟಗಾರಿಕೆ ೪) ಪಶು-ಪಕ್ಷಿಗಳು ಮನುಷ್ಯರಂತೆ ಮಾತನಾಡುವುದು ೫) ಕೇಡಿಗೆ ನಾಶ, ಒಳ್ಳೆಯ-ದಕ್ಕೆ ಯಶ ೬) ನೀತಿಯನ್ನು ಸ್ಪಷ್ಟವಾಗಿ ಹೇಳದೇ ಇರುವುದು. ೭) ಮಕ್ಕಳ ನಿರ್ಮಲ



ವಾದ ಮುಗ್ಧ ಮನಸ್ಸಿಗೆ ಪ್ರಾಧಾನ್ಯ. ೮) ಮಕ್ಕಳೇ ಕಥೆಯ ಬೆಳವಣಿಗೆಯ ಕೇಂದ್ರ ಬಿಂದು ೯) ಸಾಂಪ್ರದಾಯಿಕವಾಗಿ ಬಂದ ಕತೆಗಳಿಗೆ ಹೊಸ ತಿರುವು ೧೦) ಅನುಭವದ ಅಡಿಗಲ್ಲಿನ ಮೇಲೆ ರಚಿಸಲ್ಪಟ್ಟ ಕಥಾವಸ್ತು. (ಉದಾ: ಆ್ಯಂಡರಸನ್‌ನ 'ಕೆಂಪು ಬೂಟುಗಳು' ಮತ್ತು 'ಅವಳು ಒಳ್ಳೆಯವಳಲ್ಲ')

ಯಕ್ಷಿಣಿ ಕತೆಗಳು ಈಗಲೂ ಪ್ರಸಿದ್ಧಿಯನ್ನು ಪಡೆದಿವೆ; ಹಿರಿಯರನ್ನು, ಕಿರಿಯರನ್ನು ಆಕರ್ಷಿಸಿವೆ. ಕೆಲವು ಸತ್ಯ ಸಂಗತಿಗಳೂ ಅದ್ಭುತವಾಗಿವೆ. ಸಿಂಡ್ರೇಲಾ ಫ್ರಾನ್ಸಿನಲ್ಲಿ ಸಿದ್ಧವಾದ ಮೊದಲನೆಯ ಕಥಾಚಿತ್ರ (೧೮೯೯) ಎಂಬುದನ್ನು ಸ್ಮರಿಸಬೇಕು. ಅಮೇರಿಕದಲ್ಲಿ ಗ್ರಿಮ್ ಸಹೋದರರ 'ಹಿಮ-ಧವಳೆ'ವನ್ನು ಆಧರಿಸಿ ಸುಂದರ ವಾಲ್ಟ್ ಡಿಸ್ನೆ ಚಲಚ್ಚಿತ್ರ ತಯಾರಿಸಿರುವನು. ಡಿಸ್ನೆಯ 'ಮಿಕಿ ಮೌಸ್' ಪ್ರಪಂಚದಲ್ಲಿಯೇ ಕೀರ್ತಿಯನ್ನು ಪಡೆದ ಚಲಚ್ಚಿತ್ರವಾಗಿದೆ. ಆ್ಯಂಡರ್‌ಸನ್ನನ 'ಕೆಂಪು ಬೂಟುಗಳು', 'ಅದ್ಭುತ ಲೋಕದಲ್ಲಿ ಎಲಿಸ್' ಮುಂತಾದವು ಚಲಚಿತ್ರ ಕ್ಷೇತ್ರದಲ್ಲಿ ಹೆಸರುವಾಗಿಯಾಗಿವೆ.

ಅಮೇರಿಕದಲ್ಲಿ ೧೯೩೩ರಲ್ಲಿ ನೃತ್ಯ ಸಂಗೀತ ರೂಪಕ (ಬ್ಯಾಲೆ) ಮೈ ತಳೆಯಿತು. ಆಗ ಈ ಯಕ್ಷಿಣಿ ಕತೆಗಳು ಅತ್ಯುತ್ತಮವಾಗಿ ಕಥಾವಸ್ತುಗಳನ್ನು ಪೂರೈಸಿದವು. 'ಸಿಂಡ್ರೇಲಾ', 'ನಿದ್ರಾ ಸುಂದರಿ' ಮುಂತಾದವು ರಂಗಭೂಮಿಯ ಮೇಲೆ ಬೆಳಕು ಕಂಡವು.

ಆಧುನಿಕ ಕಾಲದಲ್ಲಿಯೂ ಈ ಯಕ್ಷಿಣಿ ಕತೆಗಳು ಅಮೇರಿಕದಲ್ಲಿ ಜೀವಂತವಾಗಿಯೇ ಇವೆ. ವಾಲ್ಟ್ ಡಿಸ್ನೆ ಈ ಕತೆಗಳಿಗೆ ವಿಶೇಷ ಮಹತ್ವ ನೀಡಿದ್ದಾನೆ. ಇದೀಗ ಡಿಸ್ನೆಯದೇ ಒಂದು ಅದ್ಭುತ ರಮ್ಯ ಲೋಕ ತಲೆಯೆತ್ತಿದೆ. ಇದಲ್ಲದೆ, ಉತ್ತರ ವರ್ಜೀನಿಯಾದಲ್ಲಿ 'ಸ್ಟೋರಿ ಬುಕ್ ಲ್ಯಾಂಡ್', ಬಾಲ್ಟಿಮೋರದ್ ಪಶ್ಚಿಮಕ್ಕೆ 'ಎನ್‌ಚಾಂಟೆಡ್ ಫಾರೆಸ್ಟ್', ನ್ಯೂ ಹ್ಯಾಂಪ್‌ಶಾಯರಿನಲ್ಲಿ 'ಸ್ಟೋರಿ ಲ್ಯಾಂಡ್',, 'ನೇಚರ್ ಲ್ಯಾಂಡ್', 'ಕ್ಲಾರ್ಕ್ಸ್ ಟ್ರೇಡಿಂಗ್ ಪೋಸ್ಟ್' ಮುಂತಾದವು ಇವೆ. 'ಎನ್‌ಚಾಂಟೆಡ್ ಫಾರ್ರೆಸ್' ದಲ್ಲಿ 'ಸಿಂಡ್ರೇಲಾಳ ಮನೆ', 'ಅಲಿಬಾಬಾ ಹಾಗೂ ೪೦ ಕಳ್ಳರು' ಈ ಮೊದಲಾದ ಯಕ್ಷಿಣಿ ಕತೆಗಳಿವೆ. ಇದೇ ರೀತಿಯಾಗಿ ಹಲವಾರು ಕತೆಗಳನ್ನು ಇನ್ನುಳಿದ ಸ್ಥಾನಗಳಲ್ಲಿ ಕಾಣಬಹುದು.

ಇವು ಪ್ರವಾಸಿ ಕೇಂದ್ರಗಳಾಗಿ ಅಮೇರಿಕದಲ್ಲಿ ಪ್ರಸಿದ್ಧಿ ಪಡೆದಿವೆ. ಹಿರಿಯರು, ಕಿರಿಯರು ಎಲ್ಲರೂ ಇವುಗಳನ್ನು ಕುತೂಹಲದಿಂದ ನೋಡಲು ಹೋಗುತ್ತಾರೆ. ಮಕ್ಕಳಂತೂ ಅಲ್ಲಿಗೆ ಹೋದಾಗ, ತಮ್ಮ ಕನಸಿನ ಲೋಕದಲ್ಲಿಯೇ ಮಗ್ನರಾಗಿ ವಿಹರಿಸುತ್ತಾರೆ. ನೀತಿಕತೆಗಳಿಗೆ ಜನ್ಮ ಕೊಟ್ಟ ಭಾರತ ಈ ರೀತಿಯಾಗಿ ತನ್ನ ಕತೆಗಳನ್ನು ಉಳಿಸಿಕೊಂಡು ಬಂದಿಲ್ಲವೆಂದು ತೋರುತ್ತದೆ.

'Fairy tale' ಎನ್ನುವುದಕ್ಕೆ ನಿಘಂಟಿನಲ್ಲಿ 'An untrue story' ಎಂದು ಅರ್ಥ ಕೊಡಲಾಗಿದೆ. ಈ ಅರ್ಥ ಅಷ್ಟು ಸರಿಯಲ್ಲವೆಂದು ತೋರುತ್ತದೆ. ಇಲ್ಲಿ untrue ಅಂದರೆ ಕಲ್ಪಿತ ಕಥೆ ಎಂದು ಭಾವಿಸಬೇಕು. 'ಕಥಾ ಕಲ್ಪಿತ ವೃತ್ತಾಂತ' ಎಂದು ನಮ್ಮ ಅಲಂಕಾರ ಶಾಸ್ತ್ರದಲ್ಲಿ ಹೇಳಲಾಗಿದೆ. ಯಕ್ಷಿಣಿ ಕತೆಗಳು ಕಲ್ಪಿತ ವೃತ್ತಾಂತಗಳೇ ಆದರೂ, ಅವು ಹೇಗೆ ಸತ್ಯ ಸಂಗತಿಗಳಿಂದ ಕೂಡಿಕೊಂಡಿವೆ ಎಂಬುದನ್ನು ವಿವರಿಸಲಾಗಿದೆ. ಈ ಕತೆಗಳು ಮಕ್ಕಳಿಗೆ ಮಾತ್ರ ಇರದೇ, ಎಲ್ಲರಿಗೂ ಸಂಬಂಧಪಟ್ಟವಾಗಿವೆ. ಯಕ್ಷಿಣಿ ಕತೆಗಳ ಪಿತಾಮಹನಾದ ಹ್ಯಾನ್ಸ್ ಆಂಡರ್‌ಸನ್ ಇದೇ ಅಭಿಪ್ರಾಯವನ್ನು ವ್ಯಕ್ತ ಮಾಡುತ್ತ, "What a dull place our world would be without such fairy tales!" ಎಂದು ಉದ್ಗಾರ ತೆಗೆದಿದ್ದಾನೆ. ✡



# ಶ್ಯಾಮಲಾಲ ಗುಪ್ತ 'ಪಾರ್ಷದ'

ಕೆ. ಎ. ಕುಬಣೂರಾಯ

> ಶ್ಯಾಮಲಾಲ ಗುಪ್ತ ಇನ್ನೂ ಶಾಲೆಯಲ್ಲಿ ಓದುತ್ತಿದ್ದಾಗ ರಾಮಾಯಣದ ಸನ್ನಿವೇಶವೊಂದನ್ನಾಧರಿಸಿದ್ದ ನಾಟಕದಲ್ಲಿ ದ್ವಾರಪಾರ್ಶ್ವಕ್ಕೆ ನಿಂತು ಕಾಯುವ 'ಪಾರ್ಶ್ವದ'ನ ಪಾತ್ರವನ್ನು ವಹಿಸಿದ್ದರಂತೆ. ಹೀಗಾಗಿ ಅವರನ್ನು ಮುಂದೆ ಗೆಳೆಯರು ಚೇಷ್ಟೆಯಿಂದಲೊ, ಪ್ರೀತಿಯಿಂದಲೋ 'ಪಾರ್ಶ್ವದ' ನೆಂದೆ ಕರೆಯತೊಡಗಿದರಂತೆ. ಅದು ಬರಬರುತ್ತ 'ಪಾರ್ಷದ'ವಾಗಿ ಶ್ಯಾಮಲಾಲರ ಕಾವ್ಯನಾಮವೂ ಆಯಿತಂತೆ.

ರಾಷ್ಟ್ರ ಪ್ರೇಮವನ್ನು ಜಾಗ್ರತಗೊಳಿಸುವ, ಭಾವೈಕ್ಯವನ್ನು ಬೆಳೆಸುವ ಗೀತೆಗಳಲ್ಲಿ 'ಜನಗಣ ಮನ' 'ವಂದೇ ಮಾತರಂ' ನಂತರದ ಸ್ಥಾನ ಧ್ವಜ ಗೀತೆಯಾದ 'ಝಂಡಾ ಊಂಚಾ ರಹೇ ಹಮಾರಾ'ದ್ದು. ಮೊದಲಿನೆರಡು ಗೀತೆಗಳ ಕರ್ತೃಗಳ ಕುರಿತು ಕೆಲವರಿಗೆ ಗೊತ್ತಿದೆಯಾದರೂ ಧ್ವಜ ಗೀತೆಯ ಕವಿ ಶ್ರೀ ಶ್ಯಾಮಲಾಲ ಗುಪ್ತ 'ಪಾರ್ಷದ'ರ ಕುರಿತು ಬಲ್ಲವರು ಲಕ್ಷಕ್ಕೊಬ್ಬರೋ ಇಬ್ಬರೋ.

'ವಿಜಯೀ ವಿಶ್ವ ತಿರಂಗಾ ಪ್ಯಾರಾ' ಎಂದು ಹಾಡಿದ ಈ ಕವಿ ಒಬ್ಬ ನಿಷ್ಠಾವಂತ ದೇಶಭಕ್ತ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಸಾಕಷ್ಟು ಕಷ್ಟಪಟ್ಟು ದುಡಿದವರು. ಹಿಂದೀ ಭಾಷೆಯಲ್ಲಿ ಅವರು ಅನೇಕ ಕವಿತೆಗಳನ್ನು ರಚಿಸಿದ್ದಾರೆ.

ಶ್ಯಾಮಲಾಲ ಗುಪ್ತರು ಎಂದೂ ರಾಜಕೀಯದ ಚದುರಂಗದಾಟವಲ್ಲಾಗಲೀ, ಸಾಹಿತ್ಯ ಕ್ಷೇತ್ರದ ಗುಂಪುಗಾರಿಕೆಯಲ್ಲಾಗಲೀ ಸೇರಿದವರಾಗಿರಲಿಲ್ಲ. ಬಂಕಿಮ ಚಂದ್ರ, ರವಿ ಬಾಬುಗಳಂಥ ಅಪ್ರತಿಮ ಮೇಧಾವಿಯೂ ಅವರಾಗಿರಲಿಲ್ಲ. ಸಾಮಾನ್ಯ ಪ್ರಜೆಯಾಗಿ ಹುಟ್ಟಿ ಬಾಳಿ ಬದುಕಿ ಸಾಮಾನ್ಯ ಪ್ರಜೆಯಾಗಿಯೇ ೮೧ ವರ್ಷ ಬಾಳಿದವರು.

ಕಾನಪುರದ ಬಳಿ ನರವಲ್ 'ಎಂಬಲ್ಲಿ ಒಬ್ಬ ಸಾಮಾನ್ಯ ವ್ಯಾಪಾರಿಯಾಗಿದ್ದ ವಿಶ್ವೇಶ್ವರ ಗುಪ್ತರ ಕಿರಿಯ ಪುತ್ರ ಶ್ಯಾಮಲಾಲ. ಬಾಲ್ಯದಿಂದಲೇ ಪದ್ಯ ಬರೆಯುವ ಚಟ ಅವರಲ್ಲಿ ಮನೆ ಮಾಡಿತ್ತು. ಐದನೆಯ ಕ್ಲಾಸಿನಲ್ಲಿರುವಾಗಲೇ ಅವರು ಕವಿತೆಗಳನ್ನು ಬರೆದರು. ಅವು ಅವರ ವಯಸ್ಸಿನ ಪ್ರತಿಭೆಯ ಮಟ್ಟಕ್ಕೆ ಮೀರಿದಂಥವುಗಳಾಗಿದ್ದವು.

ಧ್ವಜಗೀತ

# ಝಂಡಾ ಊಂಚಾ ರಹೆ ಹಮಾರಾ

ವಿಜಯೀ ವಿಶ್ವ ತಿರಂಗಾ ಪ್ಯಾರಾ ।
ಝಂಡಾ ಊಂಚಾ ರಹೆ ಹಮಾರಾ ॥

ಸದಾಶಕ್ತಿ ಬರಸಾನೇವಾಲಾ
ಪ್ರೇಮಸುಧಾ ಸರಸಾನೇವಾಲಾ ।
ವೀರೋಂಕೋ ಹರಷಾನೇವಾಲಾ
ಮಾತೃಭೂಮಿ ಕಾ ತನಮನ ಸಾರಾ ॥ ೧ ॥

ಸ್ವತಂತ್ರತಾಕೆ ಭೀಷಣ ರಣಮೇ
ಲಢಕರ ಬಢೆ ಜೋಷ ಕ್ಷಣಕ್ಷಣಮೇ ।
ಕಾಂಪೆ ಶತ್ರು ದೇಖಕರ ಮನಮೆ
ಮಿಟಜಾವೆ ಭಯಸಂಕಟ ಸಾರಾ ॥ ೨ ॥

ಇಸ್ ಝಂಡೇಕೆ ನೀಚೆ ನಿರ್ಭಯ
ಲೇಂಗೆ ಸ್ವರಾಜ್ಯ ಯಹ ಅವಿಚಲ ನಿಶ್ಚಯ ॥
ಬೋಲೋ ಭಾರತಮಾತಾ ಕೀ ಜಯ
ಸ್ವತಂತ್ರತಾ ಹೀ ಧ್ಯೇಯ ಹಮಾರಾ ॥ ೩ ॥

ಆವೋ ಪ್ಯಾರೆ, ವೀರೋ ಆವೋ
ದೇಶ ಧರ್ಮ ಪರ ಬಲಿ ಚಢ ಜಾವೋ ।
ಏಕಸಾಥ ಸಬ್ ಮಿಲಕರ ಗಾವೋ
ಪ್ಯಾರಾ ಭಾರತ ದೇಶ ಹಮಾರಾ ॥ ೪ ॥

ಇಸ್ ಕೀ ಶಾನ್ ನ ಜಾನೇ ಪಾಯೆ
ಚಾಹೇ ಜಾನ್ ಭಲೇ ಹೀ ಜಾಯೆ ।
ವಿಶ್ವವಿಜಯ ಕರಕೆ ದಿಖಲಾಯೆ
ತಬ್ ಹೋವೆ ಪ್ರಣ ಪೂರ್ಣ ಹಮಾರಾ ॥ ೫ ॥

ಆದರೆ ಮಗನ ಹೆಚ್ಚಿನ ಶಿಕ್ಷಣಕ್ಕಾಗಿ ವೆಚ್ಚ ಮಾಡುವಷ್ಟು ಆರ್ಥಿಕ ಬಲ ತಂದೆಗಿರಲಿಲ್ಲ. ಮಿಡಲ್ ಸ್ಕೂಲಿನ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಅವರು ಹಿಂದೀ ವಿಶಾರದ ಪರೀಕ್ಷೆ ಪಾಸಾದರು. ಆಗ ಅವರಿಗೆ ಹದಿನೈದರ ಹರೆಯ. ಮನದಲ್ಲಿ ರಾಮಾಯಣದ ಬಗ್ಗೆ ಅಪಾರ ಭಕ್ತಿ ನೆಲೆಸಿತ್ತು. ಆ ಭಕ್ತಿ ಭಾವನೆಯ ಪ್ರಭಾವದಿಂದ ರಾಮಾಯಣದ ಬಾಲಕಾಂಡವನ್ನು ಅವರು ಶಾಸ್ತ್ರೀಯ ಛಂದಸ್ಸುಗಳಲ್ಲಿ ಬರೆದು ಮುಗಿಸಿದರು. ಆಗಿನ ರೂಢಿಯಂತೆ ಅವರು ಹಳೆಯ ಹಿಂದಿಯಲ್ಲೇ ಅದನ್ನು ಬರೆದಿದ್ದರು.

ಈ ರಾಮಾಯಣದ ರಚನೆಯಿಂದಾಗಿ ಪ್ರಮುಖ ಘಟನೆಯೊಂದು ಅವರ ಜೀವನದಲ್ಲಿ ಘಟಿಸಿತು. ವಿಶ್ವೇಶ್ವರ ಗುಪ್ತರಿಗೆ ಕವಿತೆಗಳನ್ನು ಬರೆಯುವವರನ್ನು ಕಂಡರಾಗುತ್ತಿರಲಿಲ್ಲ. ಕವಿತೆಗಳನ್ನು ಬರೆದವನ ಅಂಗಗಳು ಊನವಾಗುವುವೆಂದೂ ಕವಿಯು ಯಾವಾಗಲೂ ದರಿದ್ರನಾಗಿಯೇ ಬಾಳುವನೆಂದೂ ಅವರ ನಂಬಿಕೆಯಾಗಿತ್ತು. ಆದ್ದರಿಂದ ಮಗನ ಕಾವ್ಯವನ್ನು ಅವರು ಬಾವಿಗೆ ಎಸೆಯಿಸಿದರು. ಮನನೊಂದ ಈ ಕಿಶೋರ ಕವಿ, ಅಯೋಧ್ಯೆಗೆ ತೆರಳಿ, ಅಲ್ಲಿ ರಾಮ ಭಜನೆಯಲ್ಲಿ ತಲ್ಲೀನರಾದರು. ಇದರಿಂದ ಮನೆಯವರು ಕಂಗೆಟ್ಟರು. ಕೆಲವು ತಿಂಗಳ ಬಳಿಕ ವಿಶ್ವೇಶ್ವರ ಗುಪ್ತರು ಅಯೋಧ್ಯೆಯಿಂದ ಮಗನನ್ನು ಮನೆಗೆ ಕರೆ ತಂದರು.

ವಿವಾಹದ ಬಳಿಕ ಜೀವನ ಯಾಪನೆಗೆ ಅವರು ಅಧ್ಯಾಪಕ ವೃತ್ತಿಯನ್ನು ಕೈಗೊಂಡರು. ಸ್ವತಂತ್ರ ಮನೋವೃತ್ತಿಯವರಾದುದರಿಂದ ಇವರಿಗೆ ನೌಕರಿ ಒಗ್ಗಲಿಲ್ಲ. ಜಿಲ್ಲಾ ಬೋರ್ಡಿನ ಶಾಲೆಯಲ್ಲಿ ಮೂರು ವರ್ಷಗಳಷ್ಟು ಕಾಲ ಅವರ ಸೇವಾವಧಿ ಮುಗಿದಿತ್ತು. ಆಗ ಇನ್ನೂ ಮೂರು ವರ್ಷಗಳಷ್ಟು ಕಾಲ ತಾನು ಅಧ್ಯಾಪಕನಾಗಿಯೇ ಇರುವೆನೆಂದು ಒಂದು ಮುಚ್ಚಳಿಕೆ ಪತ್ರ ಬರೆದು ಕೊಡಲು ಆಡಳಿತ ಮಂಡಳಿಯಿಂದ ಆದೇಶ ಬಂದಿತ್ತು. ಶ್ಯಾಮಲಾಲ ಅದಕ್ಕೆ ಸಿದ್ಧರಿರಲಿಲ್ಲ. ಹೀಗಾಗಿ ಕೆಲಸಕ್ಕೆ ರಾಜೀನಾಮೆ ಕೊಡಬೇಕಾಯಿತು.

ಮುಂದೆ ಕಾನಪುರದ ಮುನಸಿಪಾಲಿಟಿಯಲ್ಲಿ ಅವರಿಗೆ ಅದೇ ನೌಕರಿ ದೊರಕಿತು. ಅಲ್ಲಿಯೂ ಬಾಂಡ್ ಬರೆದು ಕೊಡುವ ಪ್ರಶ್ನೆ ಬಂತು. ಶ್ಯಾಮಲಾಲ ಪಾರ್ಷದ್ ಆ ನೌಕರಿಗೂ ರಾಜಿನಾಮೆ ಕೊಟ್ಟರು.

ಹಿಂದೀ ಭಾಷೆಯ ಪ್ರಸಿದ್ಧ ಕಾದಂಬರಿಕಾರ ಭಗವತೀಪ್ರಸಾದ ವಾಜಪೇಯಿ ಪಾರ್ಷದರ-ಗೆಳೆಯರಲ್ಲೊಬ್ಬರಾಗಿದ್ದರು. ಅವರ ಮೂಲಕ ಶ್ಯಾಮಲಾಲರಿಗೆ ಗಣೇಶ ಶಂಕರ ವಿದ್ಯಾರ್ಥಿಯವರ* ಪರಿಚಯವಾಯಿತು.

ಪಾರ್ಷದರು ಅವರ ಪ್ರಭಾವಕ್ಕೊಳಗಾದರು. ಅವರ ಆದೇಶವನ್ನು ಮನ್ನಿಸಿ ಫತೇಪುರವನ್ನು ತನ್ನ ರಾಷ್ಟ್ರೀಯ ಚಟುವಟಿಕೆಗಳ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. ಕಾಂಗ್ರೆಸ್ಸಿನ ನಾಗಪುರ ಸಮ್ಮೇಳನದಲ್ಲಿ ಅವರು ಆ ಪ್ರದೇಶದ ಪ್ರತಿನಿಧಿಯಾಗಿ ಭಾಗವಹಿಸಿದ್ದರು.

ಹೀಗೆ ದೇಶಸೇವೆಯೇ ಅವರ ಜೀವನದ ಧ್ಯೇಯವಾಯಿತು. ೧೯೨೧ರಿಂದ ಅವರ ಸ್ವಾತಂತ್ರ್ಯ ಸಂಗ್ರಾಮದ ಚಟುವಟಿಕೆಗಳು ಪ್ರಬಲವಾದವು. ಅಸಹಕಾರ ಚಳವಳಿಯಲ್ಲಿ ಭಾಗವಹಿಸಿ ಅವರು ಜೈಲು ಸೇರಿದರು. ಬಿಡುಗಡೆಯಾದ ಬಳಿಕ ಪುನಃ ೧೯೩೦ರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಅವರನ್ನು ಬಂಧಿಸಿ ಕಾನಪುರದ ಜೈಲಿನಲ್ಲಿರಿಸಿದ್ದರು. ಅಲ್ಲಿಂದ ಬಿಡುಗಡೆಯಾದ ಬಳಿಕ ೧೯೪೪ರಲ್ಲಿ ಅವರು

* ವಿದ್ಯಾರ್ಥಿಯವರು ಕಾನಪುರದ ಪ್ರಸಿದ್ಧ ಪತ್ರಿಕೆ 'ಪ್ರತಾಪ'ದ ಸಂಪಾದಕರಾಗಿದ್ದರು. ಉತ್ಕಟ ದೇಶಭಕ್ತರಾಗಿದ್ದ ಇವರು ಮುಂದೆ ಹಿಂದೂ ಮುಸ್ಲಿಂ ದಂಗೆಯೊಂದನ್ನು ಶಾಂತಗೊಳಿಸುವ ಕಾರ್ಯದಲ್ಲಿ ನಿರತರಾಗಿದ್ದಾಗ ಕೊಲ್ಲಲ್ಪಟ್ಟರು. ದೇಶದ ಪ್ರಸಿದ್ಧ ಹುತಾತ್ಮರಲ್ಲಿ ಅವರಿಗೆ ಸ್ಥಾನವಿದೆ.

ಮಗದೊಮ್ಮೆ ಬಂಧಿತರಾದರು. ಒಟ್ಟು ಆರೂವರೆ ವರ್ಷಗಳನ್ನು ಅವರು ಜೈಲಿನಲ್ಲಿ ಕಳೆದರು. ೧೯೨೪ರಲ್ಲಿ ಅವರು ಕಾನಪುರದ 'ಸಮಾಜದ್ರೋಹಿ' ಯೊಬ್ಬನ ಮೇಲೆ ಒಂದು ವ್ಯಂಗ್ಯ ಬರೆದುದಕ್ಕೆ ೫೦೦ ರೂಪಾಯಿ ದಂಡವನ್ನು ತೆತ್ತಿದ್ದರು. ಕಾಂಗ್ರೆಸ್ಸಿನ ವಿವಿಧ ಚಟುವಟಿಕೆಗಳಲ್ಲಿ ಅವರು ಪುರುಷೋತ್ತಮದಾಸ ಟಂಡನರ ಗೆಳೆಯರ ಬಳಗದಲ್ಲಿದ್ದರು.

ಇವರು 'ವಿಜಯೀ ವಿಶ್ವ ತಿರಂಗಾ ಪ್ಯಾರಾ' ಎಂಬ ಧ್ವಜಗೀತೆಯನ್ನು ರಚಿಸಿದ್ದು ೧೯೨೪ರಲ್ಲೇ. ಐದು ಸಾಲುಗಳಿರುವ ಆರು ನುಡಿಗಳನ್ನು ಇದು ಒಳಗೊಂಡಿದೆ. ಸುಗಮ, ಸರಳ ಶೈಲಿಯಲ್ಲಿ ಧ್ವಜವನ್ನು ವರ್ಣಿಸುವದಲ್ಲದೆ, ನಮ್ಮ ರಾಷ್ಟ್ರ ಭಕ್ತಿಯನ್ನೂ, ಶೌರ್ಯವನ್ನೂ ಪ್ರತಿಬಿಂಬಿಸುತ್ತದೆ. 'ಶಾನ್ ನ ಇಸ್ಕೀ ಜಾನೇ ಪಾಯೇ, ಚಾಹೇ ಜಾನ್ ಭಲೇ ಹೀ ಜಾಯೇ' (ನಮ್ಮ ಪ್ರಾಣ ಬೇಕಾದರೆ ಹೋಗಲಿ, ಆದರೆ ಧ್ವಜದ ವೈಭವ ಅಳಿಯದೆ ಉಳಿಯಲಿ) ಎಂಬುದು ಈ ಕವಿತೆಯ ಅತ್ಯಂತ ಪ್ರಭಾವಶಾಲಿ ಸಾಲು.

ಮಹಾತ್ಮಾ ಗಾಂಧೀಜಿ ಜನ ಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ, ಶೈಲಿಯಲ್ಲಿ ಧ್ವಜ ಗೀತೆ ಇರಬೇಕೆಂದು ಬಯಸಿದ್ದರು. ಅವರು ಬಯಸಿದಂತೆಯೇ ಇತ್ತು ಈ ಗೀತೆ. ಅಂತೆಯೇ ಅದು ರಾಷ್ಟ್ರದ ಧ್ವಜಗೀತೆಯಾಗಿ ಸ್ವೀಕರಿಸಲ್ಪಟ್ಟಿತು. ನಮ್ಮ ದೇಶದ ಸ್ವಾತಂತ್ರ್ಯ ಸಂಗ್ರಾಮದ ವೇಳೆ ಅದು ಹಾಡಲ್ಪಟ್ಟ ಸಭೆಗಳಿಗೂ, ಮೆರವಣಿಗೆಗಳಿಗೂ ಲೆಕ್ಕವಿಲ್ಲ. ಅದರಿಂದ ಅಗಣಿತ ರಾಷ್ಟ್ರವೀರರು ಸ್ಫೂರ್ತಿ ಪಡೆದರು. ತ್ರಿಪುರಾ ಕಾಂಗ್ರೆಸ್ ಅಧಿವೇಶನದಲ್ಲಿ ಸುಭಾಸಚಂದ್ರ ಬೋಸ್ ಒಂದು ಲಕ್ಷ ಜನರೊಂದಿಗೆ ಈ ಗೀತೆಯನ್ನು ಹಾಡಿದ್ದರು.

ತನ್ನ ಸಮಾಜದ (ವೈಶ್ಯ ಸಮಾಜ) ಏಳಿಗೆಗಾಗಿಯೂ ಪಾರ್ಷದ ದುಡಿದಿದ್ದರು. ಆ ಸಮಾಜದಲ್ಲಿ ನೆಲೆ ನಿಂತಿದ್ದ ವರದಕ್ಷಿಣೆಯ ಪದ್ಧತಿ, ಸಮಾರಂಭಗಳಲ್ಲಿ ಹಣವನ್ನು ದುಂದು ಮಾಡುವ ಪ್ರವೃತ್ತಿ, ವಿಧವಾವಿವಾಹ ನಿಷೇಧ—ಇತ್ಯಾದಿಗಳ ವಿರುದ್ಧ ಇವರು ಹೋರಾಡಿದರು. ವೈಶ್ಯಸಮಾಜದ ಒಂದು ಪತ್ರಿಕೆಯ ಸಂಪಾದಕರಾಗಿಯೂ ಹಲವು ವರ್ಷ ಕಾರ್ಯನಿರ್ವಹಿಸಿದರು. ತನ್ನ ಸಮಾಜದ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಗಂಗಾದೀನ ಗೌರೀಶಂಕರ ವಿದ್ಯಾಲಯವೆಂಬ ಶಾಲೆಯನ್ನು ಸ್ಥಾಪಿಸಿದರು. 'ರಾಮಲೀಲಾ'ಗಳಲ್ಲಿ ಅವರಿಗೆ ಆಸಕ್ತಿ ಇತ್ತು. ಕಾನಪುರದ ಆಸುಪಾಸಿನಲ್ಲಿ ಅವರು 'ರಾಮಲೀಲಾ'ಗಳ ಸಂಯೋಜಕರಾಗಿದ್ದರು.

೧೯೭೪ರಲ್ಲಿ ಶ್ರೀ ಸಿದ್ಧೇಶ್ವರ ಅವಸ್ಥಿಯವರ ಪ್ರಸಿದ್ಧ ನಾಟಕ 'ಝಾನ್ಸೀ ಕೀ ರಾನೀ ಸೇ ಇಂದಿರಾಗಾಂಧೀ ತಕ್' ಕಾನಪುರದ ಬಯಲು ರಂಗ ಮಂಟಪದಲ್ಲಿ ಇಪ್ಪತ್ತು ಸಾವಿರ ಪ್ರೇಕ್ಷಕರೆದುರು ಪ್ರದರ್ಶಿತವಾಯಿತು. ಆ ನಾಟಕದ ಒಂದು ಐತಿಹಾಸಿಕ ಸನ್ನಿವೇಶದಲ್ಲಿ ವಯೋವೃದ್ಧ ಪಾರ್ಷದ ಧ್ವಜ ಹಿಡಿದು ಹಾಡುತ್ತಾ ಎಳೆಯ ಹುಡುಗರೊಡನೆ ಅಭಿನಯಿಸಿದರು.

ಗಣೇಶ ಶಂಕರ ವಿದ್ಯಾರ್ಥಿಯವರಿಂದ ಸ್ಥಾಪಿತವಾದ ನರವಲ್ ಆಶ್ರಮ, ಶ್ಯಾಮಲಾಲರ ಪ್ರಿಯಸ್ಥಾನವಾಗಿತ್ತು. ಅಲ್ಲಿ ಸಾಮಾನ್ಯವಾಗಿ ಯಾವಾಗಲೂ ಸಂಜೆ ಅವರು ಹೋಗುವುದಿತ್ತು. ೧೯೭೭ರ ಜುಲೈ ಕೊನೆಯವಾರದಲ್ಲಿ, ಅಲ್ಲಿಗೆ ಎಂದಿನಂತೆ ಹೋಗುತ್ತಿದ್ದಾಗ ದಾರಿಯ ಮೇಲಿದ್ದ ಗಾಜಿನ ಚೂರೊಂದು ಅವರ ಕಾಲಿಗೆ ಚುಚ್ಚಿತು. ಗಾಯಗೊಂಡ ಕಾಲು ಊದಿಕೊಂಡಿತು. ಕಾನಪುರದ ಉರ್ಸಲಾ ಆಸ್ಪತ್ರೆಯಲ್ಲಿ ಶಸ್ತ್ರಕ್ರಿಯೆಗೊಳಗಾದ ಅವರು ಅಲ್ಲಿಯೇ ೧೯೭೭ರ ಆಗಸ್ಟ್ ೧೦ರಂದು ಅಮರರಾದರು. ✡



ಚೀನಿ ಕಥೆ

# ಲೀ ಸಾಂಗನ ಅಪರಾಧ

ಮೂಲ : ಯಾಂಗ್ ಝುನ್ ಶೆಂಗ್
ಅನುವಾದ : ಎಂ. ಗಣೇಶ

ಅಂದು ಹಬ್ಬ. ದಾರಿಯಲ್ಲಿ ಒಂದು ನರಪಿಳ್ಳೆಯೂ ಇಲ್ಲ. ರಸ್ತೆ ತುಂಬ ಬಿದ್ದಿರುವ ಮಂಜಿನಲ್ಲಿ ದಾರಿಯ ಇಕ್ಕೆಲಗಳಲ್ಲಿ ಗಾಳಿಗೆ ಅಲ್ಲಾಡುತ್ತಿರುವ ಮರಗಳ ಪ್ರತಿಬಿಂಬ.

ಲೀ ಸಾಂಗ್ ತಲೆತಗ್ಗಿಸಿ ನಗರದಿಂದ ತನ್ನ ಮನೆಯತ್ತ ಹೊರಟಿದ್ದ. ಹದಿನೈದು ದಿನಗಳು ಕಳೆದರೂ ಅವನಿಗೊಂದು ಕೆಲಸ ಸಿಕ್ಕಿರಲಿಲ್ಲ. ದಾರಿಯಲ್ಲಿ ಮೌನವಾಗಿ ನಡೆಯುತ್ತಿರುವ ಅವನಿಗೆ ಮನೆಯಲ್ಲಿ ಕಾಯುತ್ತಿರುವ ವಿಧವೆ ಅತ್ತಿಗೆ ಮತ್ತು ಅವಳ ಮಕ್ಕಳದೇ ಚಿಂತೆ. ಅವರೆಲ್ಲರಿಗೂ ಇವನೊಬ್ಬನೇ ಆಧಾರ. ಕೆಲಸ ಸಿಗದೆ ತಾನು ಉಪವಾಸವಿರುವ ಬಗ್ಗೆ ಲೀ ಸಾಂಗನಿಗೆ ಚಿಂತೆಯಿಲ್ಲ; ಆದರೆ ತಂದೆಯಿಲ್ಲದ ಮಕ್ಕಳು ಉಪವಾಸವಿರುವುದನ್ನೂ ತನ್ನ ಅತ್ತಿಗೆ ಕಣ್ಣೀರು ಒರೆಸಿಕೊಳ್ಳುವುದನ್ನೂ ನೋಡಲು ಅವನಿಂದಾಗದು. ಎಲ್ಲರೂ ಹೊಸ ವರ್ಷದ ಸ್ವಾಗತದ ಸಂಭ್ರಮದಲ್ಲಿದ್ದರೆ ತಾನು ಮಾತ್ರ ಸತ್ತ ಅಣ್ಣನ ಮಕ್ಕಳಿಗೆ ಏನನ್ನೂ ಕೊಡಲಾಗದ ಸ್ಥಿತಿಯಲ್ಲಿ!

ಇದ್ದಕ್ಕಿದ್ದಂತೆ ಲೀ ಸಾಂಗನ ಕಣ್ಣಿಗೆ ಕತ್ತಲು ಕವಿಯಿತು. ಆಹಾರವಿಲ್ಲದೆ ಎಷ್ಟೋ ದಿನಗಳನ್ನು ಕಳೆದ ಅವನ ದೇಹ ತೀರಾ ಜರ್ಜರಿತವಾಗಿತ್ತು. ದಾರಿಯ ಮರವನ್ನು ಆಧರಿಸಿ ಹಿಡಿಯದಿದ್ದರೆ ಅವನು ರಸ್ತೆಯ ದಟ್ಟ ಮಂಜಿನ ಮೇಲೆ ಬಿದ್ದು ಬಿಡುತ್ತಿದ್ದ. ಮತ್ತೆ ಲೀ ಸಾಂಗ್ ನಿಧಾನವಾಗಿ ತಲೆ ಬಗ್ಗಿಸಿ ಮನೆಯತ್ತ ನಡೆದ.

ಅವನು ಮನೆ ತಲಪಿದ. ಅತ್ತಿಗೆ ಮತ್ತು ಮಕ್ಕಳು ಉದ್ವಿಗ್ನರಾಗಿ ಅವನ ಬರುವಿಕೆಯನ್ನೇ ಕಾಯುತ್ತಿದ್ದರು. ಮನೆಯೊಳಗೆ ಹೋದ ತಕ್ಷಣ ಮಕ್ಕಳೆಲ್ಲ ಅವನಿಗೆ ಮುತ್ತಿಗೆ ಹಾಕಿದರು. ಲೀ ಸಾಂಗನ ಬಟ್ಟೆಯ ಮೇಲೆ ಕೂತಿದ್ದ ಮಂಜಿನ ಚೂರುಗಳನ್ನು ಉದುರಿಸಲು ಅವರಲ್ಲಿ ಸ್ಪರ್ಧೆಯೇ ನಡೆಯಿತು. ಅವನ ಅತ್ತಿಗೆ "ಏನಾದರೂ ಕೆಲಸ

ಸಿಕ್ಕಿತೇ?" ಎಂದು ಕೇಳಬೇಕೆಂದಿದ್ದವಳು ಮೈದುನನ ತಗ್ಗಿದ ತಲೆ ನಿರಾಶೆಯ ಮುಖ ನೋಡಿ ಸುಮ್ಮನಾದಳು. "ಊಟವಾಯಿತೇ?" ಎಂದು ಅವಳು ಲೀ ಸಾಂಗನನ್ನು ಕೇಳಿದಾಗ ಮಕ್ಕಳೆಲ್ಲ ಆತನತ್ತ ನೋಡಿದವು. ಲೀ ಸಾಂಗ್ "ಆಗಿದೆ," ಎಂದ ತಕ್ಷಣ ಎಲ್ಲ ಮಕ್ಕಳು ಸ್ಟೌ ಹತ್ತಿರ ಇಟ್ಟಿದ್ದ ಪಾತ್ರೆಯತ್ತ ಓಡಿದವು.



ಅವರಲ್ಲಿದ್ದ ಗಂಜಿಯನ್ನು ಒಬ್ಬರಾದ ಮೇಲೆ ಒಬ್ಬರು ಬೆಕ್ಕಿನ ಮರಿಗಳಂತೆ ಕುಡಿದು ಮುಗಿಸಿ-ದರು. ಲೀ ಸಾಂಗ್ ನಿಟ್ಟುಸಿರು ಬಿಟ್ಟು ತನ್ನ ಹಾಸಿಗೆಯತ್ತ ನಡೆದ.

ಮಾರನೇ ದಿನ ಬೆಳಿಗ್ಗೆ ಲೀ ಸಾಂಗ್ ಎದ್ದಾಗ ಆಕಾಶ ಶುಭ್ರವಾಗಿತ್ತು. ದೂರದ ಗುಡ್ಡದಾಚೆ-ಯಿಂದ ಸೂರ್ಯಕಿರಣಗಳು ಚಿಮ್ಮುತ್ತಿದ್ದವು. ಗುಡ್ಡದ ಬುಡದಲ್ಲಿ ಕತ್ತೆಗಳ ಸಾಲು ಸೌದೆ ಹೊರೆಗಳನ್ನು ಹೊತ್ತುಕೊಂಡು ಹೋಗುತ್ತಿರುವುದನ್ನು ನೋಡಿದ ಲೀ ಸಾಂಗ್ ಒಲೆಯ ಬಳಿ ಒಟ್ಟಿರುವ ನಾಲ್ಕೈದು ಚೂರು ಸೌದೆಯನ್ನು ಮತ್ತು ಪಾತ್ರೆಯಲ್ಲಿರುವ ಅರ್ಧಪಾವು ಅಕ್ಕಿ ಹಿಟ್ಟನ್ನೂ ನೋಡಿ ಮತ್ತಷ್ಟು ಚಿಂತೆ ಹೊತ್ತು ಹೊರಗೆ ಹೊರಟ.

ನಡು ಮಧ್ಯಾಹ್ನ ದಾಟಿದ ನಂತರ ಮನೆಗೆ ಬಂದ ಲೀ ಸಾಂಗ್ ಹುಚ್ಚನಂತಾಗಿದ್ದ. ಕೋಣೆಯಲ್ಲಿ ಗೊತ್ತು ಗುರಿಯಿಲ್ಲದೆ ಆ ಬದಿಯಿಂದ ಈ ಬದಿಗೆ, ಈ ಬದಿಯಿಂದ ಆ ಬದಿಗೆ ಹೆಜ್ಜೆ ಹಾಕುತ್ತ ಕಾಲ ಕಳೆದ. ಅವನೊಂದಿಗೆ ಮಾತನಾಡುವ ಧೈರ್ಯವನ್ನು ಯಾರೂ ಮಾಡಲಿಲ್ಲ. ಹಾಗೇ ಹಾಸಿಗೆಗೆ ಉರುಳಿದ ಆತ ಎದುರಿನ ಗೋಡೆಯನ್ನೇ ದಿಟ್ಟಿಸಿದ. ಸಂಜೆ ದೀಪ ಹೊತ್ತಿಸುವ ಸಮಯದಲ್ಲಿ ಇದ

ಕ್ಕಿದ್ದಂತೆ ಎದ್ದ. ಹೊರಗೆ ಮೂಲೆಯಲ್ಲಿದ್ದ ದಪ್ಪ ದೊಣ್ಣೆಯನ್ನು ಎತ್ತಿಕೊಂಡು ಹೊರಗೆ ಹೊರಟ.

ಆತ ಸ್ವಲ್ಪ ದೂರ ನಡೆದು ನಿಂತ. ತಲೆ ತಗ್ಗಿಸಿ ಯೋಚಿಸಿದ. ಮನೆಯತ್ತ ವಾಪಸ್ಸು ಕಾಲು ಹಾಕಿದ. ಮನೆಯ ಮುಂದೆ ಬಂದವನು ಕಿಟಕಿಯಿಂದ ಇಣಿಕಿ ಒಳಕ್ಕೆ ನೋಡಿದ. ಅತ್ತಿಗೆ ಒಂದು ಕೈಯಿಂದ ಮಕ್ಕಳ ತಲೆ ನೇವರಿಸುತ್ತ ಮತ್ತೊಂದು ಕೈಯಿಂದ ತನ್ನ ಕಣ್ಣೀರನ್ನು ಒರೆಸಿಕೊಳ್ಳುತ್ತಿದ್ದಳು. ಲೀ ಸಾಂನಿಗೆಗೆ ಅವರನ್ನು ಎದುರಿಸುವುದು ಕಷ್ಟವಾಯಿತು, ಮತ್ತೆ ದಾರಿಗಿಳಿದ. ಕೈಲಿದ್ದ ದೊಣ್ಣೆಯನ್ನು ಗಟ್ಟಿಯಾಗಿ ಹಿಡಿದು ಹೆದ್ದಾರಿಯ ಸೇತುವೆ ಬಳಿ ಅವಿತುಕೊಂಡ.

ಮರುದಿನ ರಾತ್ರಿ ಲೀ ಸಾಂಗ್ ಕಣ್ತೆರೆದಾಗ ತಾನು ಸೆರೆಮನೆಯಲ್ಲಿರುವುದು ತಿಳಿಯಿತು. ಹೊರಗಿನಿಂದ ಬೀರುತ್ತಿದ್ದ ಬೆಳಕಿನಲ್ಲಿ ಕಬ್ಬಿಣದ ಸರಳುಗಳ ನೆರಳು ಗೋಡೆಯ ಮೇಲೆ ದೊಡ್ಡದಾಗಿ ಮೂಡಿತ್ತು, ಬಂದೀಖಾನೆಯಲ್ಲಿ ಇತರ ಕೈದಿಗಳು ಎಲ್ಲೆಂದರಲ್ಲಿ ಮಲಗಿದ್ದರು. ಲೀ ಸಾಂಗನಿಗೆ ನಿನ್ನೆ– ಇಂದಿನ ಘಟನೆಗಳು ಕನಸಿನಂತೆ ಕಂಡವು.

ಸೇತುವೆಯ ಬಳಿ ಮೊದಲು ಕಾಣಿಸಿಕೊಂಡಿದ್ದಾಂ ಒಬ್ಬ ಮುದುಕ. ಲೀ ಸಾಂಗ್ ಅವನ ತಂಟೆಗೆ ಹೋಗಲಿಲ್ಲ. ನಂತರ ಬಂದವನು ಒಬ್ಬ ತರುಣ. ಲೀ ಸಾಂಗ್ ಅವನೆದುರು ಹಾರಿ ನಿಂತು ಅವನ ಹಣದ ಪರ್ಸಿಗೆ ಕೈ ಹಾಕಿದ. ಆದರೆ ಎಷ್ಟೋ ದಿನಗಳ ಉಪವಾಸದಿಂದಾಗಿ ನಿತ್ರಾಣನಾಗಿದ್ದ ಲೀ ಸಾಂಗ್ ಆ ಯುವಕನ ಒಂದೆರಡು ಏಟುಗಳಿಗೆ ತತ್ತರಿಸಿ ಬಿದ್ದ. ಎಚ್ಚರವಾದಾಗ ಅವನು ನ್ಯಾಯಾಲಯದಲ್ಲಿದ್ದ. ನ್ಯಾಯಾಧೀಶರು ಅವನಿಗೆ ಐದು ವರ್ಷಗಳ ಸಜೆ ನೀಡಿದರು.

ಐದು ವರ್ಷಗಳು; ಅಷ್ಟರಲ್ಲಿ ತನ್ನ ಅತ್ತಿಗೆ, ಅವಳ ಮಕ್ಕಳು ಏನಾಗಬಹುದು? ಲೀಸಾಂಗನಿಗೆ ಮೂರು ವರ್ಷಗಳ ಹಿಂದೆ ತನ್ನ ಅಣ್ಣ ಸಾಯುವಾಗಿನ ದೃಶ್ಯ ಕಣ್ಣೆದುರು ಬಂತು. ಅಣ್ಣ ಕಂಬನಿದುಂಬಿದ ಕಣ್ಣಲ್ಲಿ ತನ್ನ ಹೆಂಡತಿ ಮಕ್ಕಳನ್ನು ನೋಡಿ, ಲೀ ಸಾಂಗನ ಕೈಯನ್ನು ಗಟ್ಟಿಯಾಗಿ ಹಿಡಿದು ಏನೋ ಹೇಳಲು ಯತ್ನಿಸಿದ್ದ, ಆಗಿರಲಿಲ್ಲ. ಲೀ ಸಾಂಗನಿಗೆ ಅದೆಲ್ಲ



ಹೇಳದೆಯೇ ಅರ್ಥವಾಗಿತ್ತು.

ಇದೆಲ್ಲ ನೆನಪಾಗಿ ಲೀ ಸಾಂಗ್ ಅಳಲು ಆರಂಭಿಸಿದ. ಕಣ್ಣೀರು ಧಾರೆಧಾರೆಯಾಗಿ ತಣ್ಣನೆ ಕೊರೆಯುವ ನೆಲದ ಮೇಲೆ ಬಿತ್ತು. ನಿಧಾನವಾಗಿ ಅವನು ಶಾಂತನಾದ.

ಬಂದೀಖಾನೆಯ ಒಂದು ಮೂಲೆಯಲ್ಲಿ ಕಿಂಡಿಯೊಂದನ್ನು ಕಂಡ ಲೀ ಸಾಂಗ್ ತಡಮಾಡದೆ ಅದರಿಂದ ನುಸುಳಿದ. ಸೆರೆಮನೆಯಿಂದ ತಪ್ಪಿಸಿಕೊಂಡು ಮನೆಯತ್ತ ಓಡಿದ. ಬಾಗಿಲ ಹೊರಗೆ ನಿಂತು ಆಲಿಸಿದ. ಏನೂ ಕೇಳಿಸಲಿಲ್ಲ.

ಒಳಗೆ ಹೋದಾಗ ಅವನ ಅತ್ತಿಗೆ ನೆಲದ ಮೇಲೆ ಮಲಗಿದ್ದಳು. ಸತ್ತಂತೆ ತೋರುತ್ತಿದ್ದಳು. ಮಕ್ಕಳು ಅತ್ತು ಅತ್ತು ಅವಳ ದೇಹದ ಮೇಲೆ ಪ್ರಜ್ಞೆ ತಪ್ಪಿ ಬಿದ್ದಿದ್ದವು.

ಲೀ ಸಾಂಗ್ ಮಂಡಿಯೂರಿ ಕೂತು ಮಕ್ಕಳನ್ನು ಎಬ್ಬಿಸಿದ. ಪ್ರಜ್ಞೆ ಬಂದ ಮಕ್ಕಳು ಅವನ ಗುರುತು ಹಿಡಿದು ಅವನ ಕುತ್ತಿಗೆಗೆ ಜೋತು ಬಿದ್ದು ಅಳಲು ಆರಂಭಿಸಿದವು. ಲೀ ಸಾಂಗ್ ತಾನೂ ಅಳುತ್ತ ಅವರನ್ನು ತನ್ನೆದೆಗೆ ಒತ್ತಿಕೊಂಡು ಅವರ ತಲೆ ಕೂದಲಲ್ಲಿ ಕೈಯಾಡಿಸಿದ.

ಇದ್ದಕ್ಕಿದ್ದಂತೆ ಲೀ ಸಾಂಗನ ತಲೆಗೆ ಯಾರೋ ಬಾರಿಸಿದರು.

"ಮಲಗಿ ನಿದ್ದೆ ಮಾಡುವಾಗಲೂ ಇವನು ಜನರನ್ನು ಎಳೆದುಕೊಳ್ಳುತ್ತಾನೆ" ಎಂದರು ಯಾರೋ ಸಿಟ್ಟಿನಿಂದ. ಲೀ ಸಾಂಗ್ ಕಣ್ತೆರೆದಾಗ ಅವನೆದುರು ಒಂದಡಿ ಉದ್ದ ಕೂದಲು ಬಿಟ್ಟ ವ್ಯಕ್ತಿಯೊಬ್ಬನ ಮುಖ ಕಂಡಿತು. ಆತ ಲೀ ಸಾಂಗನನ್ನು ಸಿಟ್ಟಿನಿಂದ ನೋಡುತ್ತಿದ್ದ.

ಸರಳುಗಳ ನೆರಳುಗಳು ಗೋಡೆಯ ಮೇಲೆ ಅಕರಾಳವಾಗಿ ನಿಂತು ಕೇಕೆ ಹಾಕಿ ನಗುತ್ತಿದ್ದವು...






"ಪ್ರತಿಬಾರಿ ೧೮ ಮೋಂಬತ್ತಿ ನೇನಾ?" ಅಂತ ಕೇಳ್ತಿದ್ರಲ್ಲ. ಈ ಸಲದಿಂದ ಪ್ರತಿವರ್ಷ ಒಂದೊಂದನ್ನ ಕಡಿಮೆ ಮಾಡಿದ್ದೀನಿ.

# ನಿಮ್ಮ ಮಗು ಸರಿಯಾಗಿದೆಯೆ ?

ಮೂಲ : ಡಾ. ಜೆ. ಎಲ್. ಕುಲಕರ್ಣಿ
ಸಂಗ್ರಹ : ಡಾ. ಟಿ. ಎನ್. ಶ್ರೀಕಂಠಮೂರ್ತಿ

ಮಗು ಅಸಾಮಾನ್ಯವಾಗಿದೆಯೆಂದು ಹೇಳಲು ವಿವಿಧ ವಿಧಾನಗಳಿವೆ. ಅದರಲ್ಲಿ ಏನೋ ದೋಷವಿದೆ ಎನ್ನುವುದನ್ನು ಮಗುವಿನ ಅಸ್ವಾಭಾವಿಕವಾದ ಅಳು, ಪೊದೆಯಂಥ ಕಣ್ಣಿನ ಹುಬ್ಬುಗಳು ಮತ್ತು ಹೊರಚಾಚಿದಂತಿರುವ ಕಣ್ಣುಗುಡ್ಡೆಗಳು ಸೂಚಿಸಬಹುದು.

ಪಾಶ್ಚಾತ್ಯ ದೇಶಗಳಲ್ಲಿ ಶೇಕಡಾ ಮೂವರಿಗೆ ಬುದ್ಧಿಮಾಂದ್ಯವಿದೆ ಎನ್ನುವುದೊಂದು ಅಂದಾಜು. ಬಡತನ ನಂಜು ಮತ್ತು ಅತ್ಯವಶ್ಯಕ ಪೋಷಕಾಂಶಗಳ ಕೊರತೆಯಿಂದ ಬಡ ರಾಷ್ಟ್ರಗಳಲ್ಲಿ ಈ ಸಂಖ್ಯೆ ಇನ್ನೂ ಅಧಿಕ.

ಒಂದು ಅಂದಾಜಿನಂತೆ ಭಾರತದಲ್ಲಿ ಒಂದೂವರೆಯಿಂದ ೧.೮ ಕೋಟಿಯಷ್ಟು ಬುದ್ಧಿಮಾಂದ್ಯವುಳ್ಳ ಜನರಿದ್ದಾರೆ. ಈ ಅಂಕಿ ಅಂಶಗಳನ್ನು ಹೆಚ್ಚಾಗಿ ಆಸ್ಪತ್ರೆಗಳಿಂದ ತೆಗೆದುಕೊಂಡಿರುವುದರಿಂದ, ನಿಜವಾದ ಸಂಖ್ಯೆ ಇನ್ನೂ ಹೆಚ್ಚಿರಬಹುದು.

ಹೆಚ್ಚಿನ ಬುದ್ಧಿವಂತಿಕೆಯ ಅಗತ್ಯವಿಲ್ಲದಿರು-ವಂತಹ ಕೆಲಸಗಳಲ್ಲಿ (ಉದಾಹರಣೆಗೆ: ದನ ಕಾಯುವುದು, ಹೊಲದಲ್ಲಿ ಸಹಾಯ ಮಾಡುವುದು) ಸ್ವಲ್ಪಮಟ್ಟಿನ ಬುದ್ಧಿಮಾಂದ್ಯವಿರುವವರು ಸೇರಿ ಹೋಗುವುದರಿಂದ ಅವರ ಮಾಂದ್ಯದ ಸುಳಿವು ಸಿಗದೇ ಹೋಗಬಹುದು. ಅಂಥವರು ಶಾಲೆಗೇ ಹೋಗದಿದ್ದರೆ ಅವರ ಊನದ ಸುಳಿವು ಸಿಗುವುದು ಇನ್ನೂ ಕಷ್ಟ. ಭಾರತದಲ್ಲಿ ಸಾಕ್ಷರತೆ ಹೆಚ್ಚಿದಲ್ಲಿ, ಈಗಿರುವುದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಬುದ್ಧಿಮಾಂದ್ಯ ಪತ್ತೆಯಾಗುವ ಸಾಧ್ಯತೆ ಹೆಚ್ಚು.

ಇದೆಲ್ಲದರ ಅರ್ಥ, ಭಾರತದ ಮಕ್ಕಳು ಮುಂದುವರಿದ ದೇಶಗಳ ಮಕ್ಕಳಿಗಿಂತ ಹಿಂದಿದ್ದಾರೆಂದಲ್ಲ. ನಿಜವಾಗಿಯೂ, ಸಣ್ಣವರಿದ್ದಾಗ ಭಾರತದ ಮಕ್ಕಳೇ ಅದೆಷ್ಟೋ ಮುಂದಿರುತ್ತಾರೆ. ನಂತರದ ಬೆಳವಣಿಗೆಯ

---

ಮುಂಬಯಿಯ ಸಿವರಿಯಲ್ಲಿರುವ ಶ್ರೀಮತಿ ವೋತಿಬಾಯಿ ಥ್ಯಾಕರಸೆ ಸಂಸ್ಥೆಯಲ್ಲಿ ಬುದ್ಧಿಮಾಂದ್ಯ ಕುರಿತು ಸಂಶೋಧನೆ ನಡೆಸುತ್ತಿರುವ ವಿಭಾಗದ ಮುಖ್ಯ ಅಧಿಕಾರಿ ಡಾ. ಜೆ. ಎಲ್. ಕುಲಕರ್ಣಿ ಮಕ್ಕಳ ರೋಗ ತಜ್ಞರೂ ಅಂಗವಿಕಲರ ಪುನರ್ನೆಲೆಯ ವೃತ್ತಿ ಕೇಂದ್ರದ ಬಗೆಗಿನ ಸಲಹಾ ಮಂಡಳಿಯ ಸದಸ್ಯರೂ ಆದ ಇವರು ಕನ್ನಡಿಗರು, ಮೂಲತಃ ಧಾರವಾಡದವರು.

---

('ಸೈನ್ಸ್ ಏಜ್'ನಿಂದ)



ಸಮಯದಲ್ಲಿ ಪಾಶ್ಚಾತ್ಯ ಮಕ್ಕಳ ಬೆಳವಣಿಗೆ ಹೆಚ್ಚಿನ ವಿಕಾಸಶೀಲ ವಾತಾವರಣದಲ್ಲಾಗುವುದರಿಂದ ಭಾರತದ ಮಕ್ಕಳು ಹಿಂದೆ ಬೀಳುವ ಸಂಭವ ಹೆಚ್ಚು.

ಬುದ್ಧಿಮಾಂದ್ಯ ಒಂದು ಮನೋರೋಗವಲ್ಲ, ಅದು ತೊಂದರೆಯ ಲಕ್ಷಣ ಮಾತ್ರ. ಬೆಳವಣಿಗೆಯ ಹಂತದಲ್ಲಿರುವ ಮಿದುಳಿನ ಮೇಲೆ ಕೆಲವು ದುಷ್ಪರಿಣಾಮಗಳಿಂದಾಗಿ ಉಂಟಾಗುವ ಬುದ್ಧಿಶಕ್ತಿಯ ಕುಂಠಿತ ಬೆಳವಣಿಗೆಯೇ ಬುದ್ಧಿಮಾಂದ್ಯ. ವೈದ್ಯರ ಪ್ರಕಾರ ಬುದ್ಧಿಮಾಂದ್ಯವಿದೆಯೆಂದು ಹೇಳಲು ಇರಬೇಕಾದ ಲಕ್ಷಣಗಳೆಂದರೆ ಸಾಧಾರಣಕ್ಕಿಂತ ಕಡಿಮೆ ಬುದ್ಧಿಶಕ್ತಿ, ಸುತ್ತಮುತ್ತಲಿನೊಂದಿಗೆ ಹೊಂದಾಣಿಕೆಯ ನಡವಳಿಯ ಕೊರತೆ. ಇವೆರಡು ತೊಂದರೆಗಳೂ ೧೮ ವರ್ಷಕ್ಕಿಂತ ಮೊದಲು ಕಾಣಿಸಿಕೊಳ್ಳುವವು.

ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ, ವ್ಯಕ್ತಿಯ ಬುದ್ಧಿಶಕ್ತಿಯ ಮಟ್ಟ ೭೦ ಕ್ಕಿಂತ ಕಡಿಮೆಯಿದ್ದರೆ ಅದನ್ನು ಬುದ್ಧಿಮಾಂದ್ಯವೆಂದು ಪರಿಗಣಿಸಲಾಗುವುದು. ಈ ಸಂಖ್ಯೆ ಎಪ್ಪತ್ತನ್ನು ಸಾಧಾರಣ ಮಟ್ಟವೆಂದು ಪರಿಗಣಿಸಲು ಮಿತಿಯೆಂದು ತೆಗೆದುಕೊಂಡಿದ್ದರೂ, ವ್ಯಕ್ತಿಯ ವ್ಯಾವಹಾರಿಕ ಹೊಂದಾಣಿಕೆಯ ನಡವಳಿಕೆ ಅವನು ಬುದ್ಧಿಮಾಂದ್ಯನೋ ಅಲ್ಲವೋ ಎಂದು ತೀರ್ಮಾನಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ವ್ಯಾವಹಾರಿಕವಾಗಿ. ವ್ಯಕ್ತಿಗತ ಸಾಮಾಜಿಕ ನಡವಳಿಕೆಯೇ ಅತಿ ಮುಖ್ಯ.

ಇಂದಿನ ಮುಂದುವರಿದ ವೈದ್ಯ ವಿಜ್ಞಾನದಿಂದಲೂ ಎಲ್ಲ ತರಹದ ಬುದ್ಧಿಮಾಂದ್ಯ ರೋಗಿಗಳಲ್ಲಿ ಕಾರಣಗಳನ್ನು ಕಂಡುಹಿಡಿಯಲಾಗಿಲ್ಲ. ವಿವಿಧ ದೇಶಗಳಲ್ಲಿಯ ಅಧ್ಯಯನಗಳ

ಸಮೀಕ್ಷೆಯಿಂದ ಶೇಕಡಾ ೩೫ ರಿಂದ ೬೫ ಜನರಲ್ಲಿ ಮಾತ್ರ ಈ ತೊಂದರೆಗೆ ಕಾರಣ ತಿಳಿದಿರುತ್ತದೆ. ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ, ಪರಿಸರಕ್ಕೆ ಸಂಬಂಧಪಟ್ಟ ಕಾರಣಗಳಾದ ನಂಜು, ಹುಟ್ಟುವ ಕಾಲಕ್ಕೆ ಆಗುವ ಗಾಯಗಳು, ಅಯೋಡಿನ್ ಮತ್ತು ಇತರ ಖನಿಜಾಂಶಗಳ ಕೊರತೆ, ಪೋಷಕಾಂಶಗಳ ಕೊರತೆಗಳು ಬುದ್ಧಿಮಾಂದ್ಯಕ್ಕೆ ಕಾರಣವಾಗುವಂತಹ ಪ್ರಮುಖ ಅಂಶಗಳು.

ಗರ್ಭವತಿಯಿದ್ದಾಗ ತಾಯಿಗಾಗುವ ವಿವಿಧ ನಂಜುಗಳಿಂದಾಗಿ (ಜರ್ಮನ್ ದಡಾರ; ಸರ್ಪಸುತ್ತು, ಸೈಟೊಮೆಗಲೋ ವೈರಸ್ ನಂಜು) ಮಗುವು ಬುದ್ಧಿಮಾಂದ್ಯಕ್ಕೆ ಒಳಗಾಗಬಹುದು. ಅದೇ ಸಮಯದಲ್ಲಿ ತಾಯಿಯ ಕುಡಿತದ ಚಟ, ಕೆಲವು ಔಷಧಗಳು ಮತ್ತು ಕ್ಷ-ಕಿರಣಗಳಿಂದಾಗಿ ಕೂಡ ಬುದ್ಧಿಮಾಂದ್ಯವುಂಟಾಗಬಹುದು. ತಾಯಿಯು ಮಧುಮೇಹದಿಂದ ಬಳಲುತ್ತಿದ್ದರೆ ಮಗುವಿಗೆ ಬುದ್ಧಿಮಾಂದ್ಯವಾಗುವ ಸಂಭವ ಹೆಚ್ಚು.

ತಂದೆ ತಾಯಿಯರ ರಕ್ತ ಗುಂಪುಗಳು ಅನುರೂಪವಾಗಿರದಿದ್ದರೆ (Incompatible) ಮಗುವು ಕಾಮಾಲೆಯೊಂದಿಗೆ ಹುಟ್ಟಬಹುದು. ಇದು ಬುದ್ಧಿಮಾಂದ್ಯಕ್ಕೆ ಕಾರಣವಾಗಬಹುದು.

ಹುಟ್ಟುವ ಸಮಯದಲ್ಲಿ ಹೆರಿಗೆಯಲ್ಲಿಯ ತೊಂದರೆಗಳಿಂದಾಗಿ ಮಗುವಿನ ತಲೆಗಾಗುವ ಪೆಟ್ಟು ರಕ್ತಸ್ರಾವಕ್ಕೆಡೆಮಾಡಿ ಮಿದುಳಿನ ಕೆಡುಕಿಗೆ ಕಾರಣವಾಗಬಹುದು. ಇನ್ನಿತರ ಕಾರಣಗಳಾದ ದೀರ್ಘ ಹೆರಿಗೆಯ ಕಾಲ, ಮಗುವನ್ನು ಹೊರತೆಗೆಯುವಲ್ಲಿ ಉಪಯೋಗಿಸುವ ಸಲಕರಣೆಗಳನ್ನು ಸರಿಯಾಗಿ ಪ್ರಯೋಗಿಸದಿರುವುದು, ತಾಯಿಗೆ ಅತಿಯಾಗಿ ನಿದ್ದೆ ಬರುವಂತಹ ಔಷಧಗಳನ್ನು ಕೊಟ್ಟಿರುವುದು (ಇದು ಹೆರಿಗೆಯ ಸಮಯದಲ್ಲಿ ಮಗುವಿನ ಮಿದುಳಿಗೆ ಬೇಕಾಗುವ ಆಮ್ಲಜನಕದ ಕೊರತೆಯನ್ನು ಉಂಟುಮಾಡುತ್ತದೆ.) ಇವೆಲ್ಲವೂ ಮಗುವಿಗೆ ಬುದ್ಧಿಮಾಂದ್ಯ ಉಂಟುಮಾಡಬಹುದು.

ಎಲ್ಲ ಬುದ್ಧಿಮಾಂದ್ಯ ಮಕ್ಕಳು ಬೆಳವಣಿಗೆಯ ಮೈಲುಗಲ್ಲುಗಳನ್ನು (ತಲೆ ಎತ್ತಿ ಹಿಡಿಯುವುದು, ನಗುವುದು, ತೆವಳಿಹೋಗುವುದು, ನಿಲ್ಲುವುದು,) ಮುಟ್ಟುವಲ್ಲಿ ತಡಮಾಡುತ್ತವೆ. ಅದರಲ್ಲೂ ಭಾಷಾ ಮೈಲುಗಲ್ಲುಗಳನ್ನು (ಮಾತನಾಡಲು ಕಲಿಯುವುದು) ಮುಟ್ಟುವ ಸಮಯ ಬುದ್ಧಿಮಾಂದ್ಯವನ್ನು ಸೂಚಿಸುವಲ್ಲಿ ಮುಖ್ಯವಾದದ್ದು. ಸಾಧಾರಣವಾಗಿ, ಮಗುವು ಮೂರನೇ ತಿಂಗಳಲ್ಲಿ ತಲೆ ಎತ್ತಿ ಹಿಡಿಯಲು, ಆರನೇ ತಿಂಗಳಲ್ಲಿ ಕುಳಿತುಕೊಳ್ಳಲು ಮತ್ತು ೧೨-೧೮ನೇ ತಿಂಗಳಲ್ಲಿ ನಡೆಯಲು ಪ್ರಾರಂಭಿಸುವುದು. ಇಲ್ಲಿಯ ತಡೆ ಮಾನಸಿಕ ಬೆಳವಣಿಗೆಗಿಂತ ದೈಹಿಕ ಬೆಳವಣಿಗೆಯ ಕೊರತೆಯನ್ನು ತೋರಿಸುತ್ತದೆ.

ದೈಹಿಕ ಬೆಳವಣಿಗೆಯಲ್ಲಿ ಕೊರತೆಯಿರುವ ಮಗುವಿನಲ್ಲಿ ಬುದ್ಧಿಮಾಂದ್ಯ ಇರಬೇಕೆಂದೇನೂ ಇಲ್ಲ. ಸಾಧಾರಣವಾಗಿ ಪೋಷಕರು ದೈಹಿಕ ಬೆಳವಣಿಗೆಯ ಮೈಲುಗಲ್ಲುಗಳನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡಿರುತ್ತಾರೆಯೇ ವಿನಾ ಮಾನಸಿಕ ಮೈಲಿಗಲ್ಲುಗಳ ಬಗ್ಗೆ ಅಷ್ಟು ನೆನಪಿಟ್ಟುಕೊಳ್ಳುವುದಿಲ್ಲ ಮತ್ತು ವೈದ್ಯರಲ್ಲಿ ಅದರ ಬಗ್ಗೆ ಹೆಚ್ಚಿನದನ್ನು ಹೇಳುವುದೂ ಇಲ್ಲ. ಎದ್ದು ಕಾಣುವಂತಹ ತೊಂದರೆಗಳಿಲ್ಲದಿದ್ದಲ್ಲಿ, ಆರು ಅಥವಾ ಎಂಟನೇ ವಾರದಲ್ಲಿ ನಗುಮುಖ ಮಾಡದಿದ್ದರೆ ಅದು ಬುದ್ಧಿಮಾಂದ್ಯದ ಮೊದಲನೆಯ ಚಿನ್ಹೆಯಾಗಿರಬಹುದು. ಬುದ್ಧಿಮಾಂದ್ಯವಿರುವ ಮಕ್ಕಳು ಶಾಲೆಗೆ ಹೋಗುವವರೆಗೂ ಬುದ್ಧಮಾಂದ್ಯದ ಸುಳಿವು ತಿಳಿಯದಿರಬಹುದು.

ಹುಟ್ಟುವಾಗ ಅತಿ ದೊಡ್ಡ ದೇಹವಿದ್ದ ಮಗು, ಮಧುಮೇಹ ರೋಗಪೀಡಿತಳಾದ ತಾಯಿಗೆ ಜನಿಸಿದ ಮಗು, ಅತಿ ಚಿಕ್ಕ ಶರೀರವುಳ್ಳ ಮಗು, ಅತಿ ಚಿಕ್ಕದಾದ ಅಥವಾ ಅತಿ ದೊಡ್ಡ ತಲೆಯಿರುವ ಮಗು, ಅಸಹಜ ಆಕೃತಿಯಿಂದ ಕೂಡಿದ ಮಗು ಇವೆಲ್ಲವೂ

ಮಗುವಿನಲ್ಲಿ ಬುದ್ಧಿಮಾಂದ್ಯವಿರಬಹುದೆಂಬ ಶಂಕೆ ಮೂಡಿಸುವ ಅಂಶಗಳು.

ಮಗುವು ಸಾಮಾನ್ಯ ರೀತಿ ಅಳದಿದ್ದರೆ, ಅತಿಯಾಗಿ ನಿದ್ರೆ ಮಾಡಿದರೆ ಮತ್ತು ಸಣ್ಣ ವಯಸ್ಸಿನಲ್ಲಿ ಅತಿಯಾಗಿ ಅತ್ತರೆ ಬುದ್ಧಿ ಮಾಂದ್ಯ ಇರುವ ಬಗ್ಗೆ ಆಲೋಚಿಸಬೇಕಾಗುತ್ತದೆ. ಹೈಪೊಥೈರಾಯ್‌ಡಿಸಂ ತೊಂದರೆಯಲ್ಲಿ ಕರ್ಕಶ ಧ್ವನಿಯಲ್ಲೂ, ಕ್ಯಾಟ್ ಕ್ರೈ ಸಿಂಡ್ರೋಂ ಕಾಯಿಲೆಯಲ್ಲಿ ಬೆಕ್ಕು ಅರುಚುವ ರೀತಿಯಲ್ಲೂ ಮಗು ಅಳುತ್ತದೆ.

ನಾಲ್ವತ್ತು ವರ್ಷಗಳನ್ನು ದಾಟಿದನಂತರ ಮಕ್ಕಳನ್ನು ಹೆತ್ತರೆ ಅಗಲ ಮುಖದ, ಕೆಳದುಟಿ ಜೋತುಬಿದ್ದ, ಚಿಕ್ಕ ಕಣ್ಣುಗಳುಳ್ಳ ಹಾಗೂ ಬುದ್ಧಿಮಾಂದ್ಯವುಳ್ಳ ಮಕ್ಕಳು ಹುಟ್ಟುವ ಸಾಧ್ಯತೆ ಹೆಚ್ಚು. ಈ ಲಕ್ಷಣಗಳಿಗೆ ವೈದ್ಯಕೀಯವಾಗಿ ಡೌನ್ ಸಿಂಡ್ರೋಮ್ ಎಂದು ಹೆಸರು. ಈ ತೊಂದರೆಯಿರುವ ಮಗುವಿನಲ್ಲಿ ೪೬ ವಂಶವಾಹಿಗಳಿರುವುದರ ಬದಲು ೪೭ ವಂಶವಾಹಿಗಳಿರುತ್ತವೆ. ಹೀಗಾಗಲು ಕಾರಣವೇನೆಂಬುದು ಇನ್ನೂ ಗೊತ್ತಿಲ್ಲ.

ಕುರುಡು, ಕಿವುಡುತನ ಮತ್ತು ಅಪಸ್ಮಾರಗಳಂಥ ತೊಂದರೆಗಳು ಬುದ್ಧಿಮಾಂದ್ಯದ ಜೊತೆಗೂಡಿರಬಹುದು. ಅಪಸ್ಮಾರ ಮಿದುಳಿನ ತೊಂದರೆಯ ಲಕ್ಷಣವಾಗಿರಬಹುದಾದರೂ ಅದು ಯಾವಾಗಲೂ ಬುದ್ಧಿಮಾಂದ್ಯದೊಂದಿಗಿರಬೇಕೆಂದೇನಿಲ್ಲ.

ಬುದ್ಧಿಮಾಂದ್ಯವನ್ನು ಪೂರ್ಣವಾಗಿ ಗುಣಪಡಿಸಲು ಸಾಧ್ಯವಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಅದನ್ನು ತಡೆಗಟ್ಟಬಹುದು. ವಂಶಪಾರಂಪರ್ಯವಾಗಿ ಬರಬಹುದಾದ ಕಾಯಿಲೆಗಳ ಬಗ್ಗೆ ಪರೀಕ್ಷಿಸಿ ಮುಂಚಿತವಾಗಿಯೇ ಅರಿತುಕೊಳ್ಳಬಹುದು, ಮತ್ತು ಅದು ಹುಟ್ಟಬಹುದಾದ ಮಗುವಿನಲ್ಲಿ ಬರಬಹುದಾದಂತಹ ಸಂದರ್ಭಗಳಲ್ಲಿ ಅಂತಹ ಮಗು ಆಗದಂತೆ ಎಚ್ಚರವಹಿಸಿ ತಂದೆ ತಾಯಿಗಳಿಗೆ ತಿಳುವಳಿಕೆ ಕೊಡಬಹುದು. ರೋಗನಿರೋಧಕ ಚುಚ್ಚುಮದ್ದು ಕೊಟ್ಟು ನಂಜಾಗದಂತೆ ತಡೆಯಬಹುದು. ಮತ್ತು ನಂಜಾದಾಗ ಅದಕ್ಕೆ ಸರಿಯಾದ ಔಷಧ ಕೊಟ್ಟು ಅದು ಮಿದುಳಿಗೆ ಹಾನಿ ಮಾಡುವುದನ್ನು ತಡೆಗಟ್ಟಬಹುದು.

ತಲೆಯಲ್ಲಿ ಅತಿಯಾಗಿ ನೀರು ಸೇರಿಕೊಳ್ಳುವಿಕೆ (ಹೈಡ್ರೊಸಿಫಾಲಸ್)ಯಿಂದಾಗುವ ಬುದ್ಧಿಮಾಂದ್ಯವನ್ನು ಶಸ್ತ್ರಕ್ರಿಯೆಯ ಮೂಲಕ ತಡೆಗಟ್ಟಬಹುದು.

ತಲೆ ಬುರುಡೆಯ ಮೂಳೆಗಳು ಬೇಗನೆ ಕೂಡಿಕೊಳ್ಳುವುದರಿಂದಾಗುವ ಚಿಕ್ಕ ತಲೆ (ಮೈಕ್ರೊಸಿಫಾಲಿ)ಯಿಂದಾಗಿ ಬುದ್ಧಿಮಾಂದ್ಯ ಬರಬಹುದು. ಇದನ್ನೂ ಶಸ್ತ್ರಕ್ರಿಯೆಯ ಮೂಲಕ ತಡೆಗಟ್ಟಬಹುದು.

ಮಗುವು ಹುಟ್ಟುವುದಕ್ಕಿಂತ ಮುಂಚಿತವಾಗಿಯೇ ಆಮ್ನಿಯೋ ಸೆಂಟಿಸಿಸ್ ಪರೀಕ್ಷೆಯಿಂದ (ಗರ್ಭದಲ್ಲಿ ಮಗುವಿನ ಸುತ್ತ ಇರುವ ನೀರನ್ನು ತೆಗೆದು ಪರೀಕ್ಷಿಸುವುದು) ವಂಶವಾಹಕಗಳಲ್ಲಿಯ ನ್ಯೂನತೆಗಳನ್ನು ಮತ್ತು ಅಲ್ಟ್ರಾಸೋನಾಗ್ರಫಿ ಪರೀಕ್ಷೆಯಿಂದ (ಶ್ರವಣಾತೀತ ತರಂಗಗಳ ಮೂಲಕ ಪರೀಕ್ಷಿಸುವುದು) ಮಗುವಿನ ದೈಹಿಕ ಬೆಳವಣಿಗೆಯಲ್ಲಿಯ ನ್ಯೂನತೆಗಳನ್ನು ಪತ್ತೆಹಚ್ಚಬಹುದು. ಬುದ್ಧಿಮಾಂದ್ಯ ಬರಬಹುದಾದ ಕೆಲವು ಅನುವಂಶಿಕ ಕಾಯಿಲೆಗಳ ಲಕ್ಷಣಗಳಿದ್ದಲ್ಲಿ ತಂದೆ ತಾಯಿಗಳಿಗೆ ಆ ಬಗ್ಗೆ ಮತ್ತು ಅದರ ಪರಿಣಾಮಗಳ ಬಗ್ಗೆ ತಿಳುವಳಿಕೆ ನೀಡಿ ಅಂತಹ ಮಕ್ಕಳಾಗದಂತೆ ತಡೆಗಟ್ಟಬಹುದು.

ಅನುವಂಶಿಕ ಕಾರಣಗಳಲ್ಲಿ ಫಿನೈಲ್ ಕಿಟೊನ್ಯೂರಿಯದಂಥ ದೇಹದಲ್ಲಿಯ ರಾಸಾಯನಿಕ ಕ್ರಿಯೆಯ ತೊಂದರೆಯೂ ಒಂದು. ಹತ್ತಿರದ ಸಂಬಂಧದವರಲ್ಲಿ ಮದುವೆಯಾಗುವುದರಿಂದ ಬರಬಹುದಾದ ತೊಂದರೆ ಇದು. ಇದರಲ್ಲಿ ತಂದೆ ಮತ್ತು ತಾಯಿ ಇಬ್ಬರಿಂದಲೂ ಸರಿಯಿಲ್ಲದ ಅನುವಂಶಿವಾಹಿಗಳ ಕೊಡುಗೆ ಇರುತ್ತದೆ. ಆದರೆ ಆ ತಂದೆ ತಾಯಿಯರು ಕಾಯಿಲೆಯಿಂದ

# ಮಗುವಿನ ಉತ್ತಮ ಪಾಲನೆಗಾಗಿ

- ✡ ನಿಮ್ಮ ಮಗು ಅಪೇಕ್ಷಿಸಿದಷ್ಟು ಕಾಲ ಎದೆ ಹಾಲು ಕುಡಿಸಿ.
- ✡ ನಿಮ್ಮ ಮಗುವಿಗೆ ನಾಲ್ಕು ತಿಂಗಳಾದ ನಂತರ ಮೆದು ಆಹಾರ ಪ್ರಾರಂಭಿಸಿ.
- ✡ ನಿಮ್ಮ ಮಗುವಿಗೆ ದಿನಕ್ಕೆ ೫-೬ ಬಾರಿ ಆಹಾರ ಕೊಡಿ.
- ✡ ನಿಮ್ಮ ಮಗುವಿಗೆ ಖಾಯಿಲೆ ಇದ್ದಾಗಲೂ ಆಹಾರ ನಿಲ್ಲಿಸಬಾರದು.
- ✡ ನಿಮ್ಮ ಮಗು ಅನಾರೋಗ್ಯದಿಂದ ನರಳುತ್ತಿರುವಾಗ ಅದರಲ್ಲೂ ಅತಿಸಾರ ಭೇದಿಯಿದ್ದಾಗ ಹೆಚ್ಚು ನೀರು ಕುಡಿಸಿರಿ.
- ✡ ನಿಮ್ಮ ಮಗು ರೋಗದಿಂದ ಬಳಲುತ್ತಿದ್ದರೆ ಕೂಡಲೇ ಹತ್ತಿರ ಇರುವ ಆರೋಗ್ಯ ಕೇಂದ್ರದ ಸಹಾಯ ಪಡೆಯಿರಿ.
- ✡ ನಿಮ್ಮ ಮಗುವಿಗೆ ಸಕಾಲದಲ್ಲಿ ಅಗತ್ಯವಾದ ರೋಗನಿರೋಧಕ ಚುಚ್ಚು ಮದ್ದುಗಳನ್ನು ಹಾಕಿಸಿ.
- ✡ ನಿಮ್ಮ ಮಗುವಿನ ಆಹಾರವನ್ನು ನೊಣಗಳಿಂದ ರಕ್ಷಿಸಿ.
- ✡ ನಿಮ್ಮ ಮಗುವಿಗೆ ಉಣಿಸುವ ಮೊದಲು ನಿಮ್ಮ ಹಾಗೂ ಮಗುವಿನ ಕೈಗಳನ್ನು ಸ್ವಚ್ಛವಾಗಿರಿಸಿರಿ.

ಹೆಚ್ಚಿನ ವಿವರಗಳಿಗೆ :
ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ,
ಕರ್ನಾಟಕ ಸರಕಾರ, ಬೆಂಗಳೂರು
ಇವರನ್ನು ಸಂಪರ್ಕಿಸಿರಿ.

" ಕರ್ನಾಟಕ ವಾರ್ತೆ "

DIP 6/86

ನರಳುತ್ತಿರುವುದಿಲ್ಲ. ಈ ತೊಂದರೆಯಿರುವ ಮಕ್ಕಳಲ್ಲಿ, ಫಿನೈಲ್ ಅಲನಿನ್ ಎಂಬ ರಾಸಾಯನಿಕವು ಆರೋಗ್ಯವಂತರ ದೇಹದಲ್ಲಾಗುವಂತೆ ಟೈರೋಸಿನ್ ಎಂಬ ರಸಾಯನಿಕವಾಗಿ ಪರಿವರ್ತನಗೊಳ್ಳುವುದಿಲ್ಲ. ಬದಲಿಗೆ ಅದು ಬೇರೆ ರೀತಿಯ ರಾಸಾಯನಿಕ ಕ್ರಿಯೆಗೊಳಪಡುವುದರ ಪರಿಣಾಮವಾಗಿ ದೇಹದಲ್ಲಿ ವಿಷ ಪದಾರ್ಥಗಳು ಉತ್ಪತ್ತಿಯಾಗುತ್ತವೆ. ಈ ವಿಷ ಪದಾರ್ಥಗಳು ನರಮಂಡಲದ ಮೇಲೆ ಬೀರುವ ದುಷ್ಪರಿಣಾಮಗಳಿಂದಾಗಿ ಬುದ್ಧಿಮಾಂದ್ಯವುಂಟಾಗುತ್ತದೆ. ಈ ಕಾಯಿಲೆ ಇರುವ ಮಕ್ಕಳಿಗೆ ಚಿಕ್ಕಂದಿನಿಂದಲೇ, ಅಂದರೆ ೨ ತಿಂಗಳು ವಯಸ್ಸಾಗುವ ಮೊದಲಿನಿಂದಲೇ ಫಿನೈಲ್ ಅಲಿನಿನ್ ರಸಾಯನ ಕಡಿಮೆ ಇರುವಂತಹ ಆಹಾರ ಪದಾರ್ಥಗಳನ್ನು ಕೊಟ್ಟರೆ ಬುದ್ಧಿಮಾಂದ್ಯದ ಮಟ್ಟ ಕಡಿಮೆಯಾಗುವ ಸಾಧ್ಯತೆಯಿರುತ್ತದೆ. ಈ ಕಾಯಿಲೆ ಮಕ್ಕಳಲ್ಲಿ ಇರುವುದನ್ನು ಚಿಕ್ಕಂದಿನಿಂದಲೇ ರಾಸಾಯನಿಕ ಪರೀಕ್ಷೆಗಳಿಂದ ಕಂಡುಕೊಳ್ಳಬಹುದು.

ಮಕ್ಕಳಲ್ಲಿ ಥೈರಾಯ್ಡ್ ಗ್ರಂಥಿ ಸರಿಯಾಗಿ ಕೆಲಸ ಮಾಡದಿದ್ದರೆ ಕ್ರೆಟಿನಿಸಮ್ ಎಂಬ ಕಾಯಿಲೆ ಬರುತ್ತದೆ. ಬುದ್ಧಿಮಾಂದ್ಯ, ಗಡುಸಾದ ಧ್ವನಿ, ಊದಿಕೊಂಡ ಮುಖ, ಮಲಬದ್ಧತೆ, ಕಾಮಾಲೆ ಮತ್ತು ಚಟುವಟಿಕೆಯಿಂದಿಲ್ಲದಿರುವಿಕೆ ಹಾಗೂ ಕುಂಠಿತ ಬೆಳವಣಿಗೆ ಇದರ ಮುಖ್ಯ ಲಕ್ಷಣಗಳು. ಥೈರಾಯ್ಡ್ ಗ್ರಂಥಿಯಿಂದ ಉತ್ಪಾದಿಸಲ್ಪಡುವ ರಾಸಾಯನಿಕಗಳು ಮತ್ತು ಅಯೊಡಿನ್‌ಯುಕ್ತ ಆಹಾರವನ್ನು ಕೊಡುವುದರಿಂದ ಈ ತೊಂದರೆಯನ್ನು ಬಹುಮಟ್ಟಿಗೆ ತಡೆಯಬಹುದು. ಆದರೆ ಈ ಚಿಕಿತ್ಸೆಯನ್ನು ಮಗುವಿಗೆ ಎರಡು ತಿಂಗಳಾಗುವಷ್ಟರಲ್ಲಿಯೆ ಪ್ರಾರಂಭಿಸಿರಬೇಕು.

ಮಧುಮೇಹ ಪೀಡಿತ ತಾಯಂದಿರ ಮಕ್ಕಳ (newborns) ರಕ್ತದಲ್ಲಿ ಸಕ್ಕರೆಯ ಅಂಶ ಕಡಿಮೆಯಾಗಿ ಅಪಸ್ಮಾರಕ್ಕೆ ಮತ್ತು ಬುದ್ಧಿಮಾಂದ್ಯಕ್ಕೆ ಈಡಾಗುವ ಸಂದರ್ಭ ಹೆಚ್ಚಾಗಿರುತ್ತದೆ. ಇದನ್ನು ತಡೆಗಟ್ಟಲು, ಅಂತಹ ಮಕ್ಕಳ ರಕ್ತದ ಸಕ್ಕರೆಯ ಅಂಶವನ್ನು ಪರೀಕ್ಷಿಸಿ ಅದು ಸರಿಯಾದ ಮಟ್ಟದಲ್ಲಿರುವಂತೆ ನೋಡಿಕೊಳ್ಳಬೇಕು.

ಬುದ್ಧಿಮಾಂದ್ಯವುಳ್ಳ ಮಗುವು ಸಾಮಾನ್ಯ ಸ್ಥಿತಿಗೆ ಮರಳಲು ಅದಕ್ಕೆ ಅಗತ್ಯವಾದ ಅಭ್ಯಾಸವನ್ನು ಶೀಘ್ರ ಪ್ರಾರಂಭಿಸಿದಷ್ಟೂ ಉತ್ತಮ. ಇದರ ಮುಖ್ಯ ಗುರಿ ಎಂದರೆ, ಮಗುವು ತನ್ನ ದೈನಂದಿನ ಚಟುವಟಿಕೆ ಮತ್ತು ಅಗತ್ಯ ಕೆಲಸ ಪೂರೈಸಿಕೊಳ್ಳುವುದನ್ನು ಆದಷ್ಟು ತನ್ನಿಂತಾನಾಗಿಯೇ ಮಾಡಿಕೊಳ್ಳುವುದನ್ನು ಮತ್ತು ಇದಕ್ಕಾಗಿ ಪರಾವಲಂಬಿಯಾಗುವುದನ್ನು ಕಡಿಮೆಯಾಗುವಂತೆ ಮಾಡುವುದು. ಸ್ವಲ್ಪ ಮತ್ತು ಮಧ್ಯಮ ತೆರನಾದ ಬುದ್ಧಿಮಾಂದ್ಯವುಳ್ಳ ಮಕ್ಕಳಿಗೆ ೧೨ನೇ ವಯಸ್ಸಿನ ವರೆಗೆ ವಿದ್ಯಾಭ್ಯಾಸ ಮಾಡಿಸಬಹುದು. ಅವರಿಗೆ ಆ ನಂತರ ವೃತ್ತಿಪರ ತರಬೇತಿಗಳಾದ ನೂಲುವುದು, ನೇಯ್ಗೆ, ಮರಗೆಲಸ, ಬುಟ್ಟಿ ಹೆಣೆಯುವುದು ಹಾಗೂ ಇತರೆ ಕೆಲಸಗಳನ್ನು ಕಲಿಸಬಹುದು. ಬುದ್ಧಿಮಾಂದ್ಯವಿರುವ ವ್ಯಕ್ತಿ ಜೀವನ ಪರ್ಯಂತ ಇತರರ ಮೇಲ್ವಿಚಾರಣೆಯಲ್ಲಿರಬೇಕಾಗುತ್ತದೆ.

ಪುನರ್ವಸತಿಯ ಅಭ್ಯಾಸದ ಗುರಿ ಬುದ್ಧಿಮಾಂದ್ಯವಿರುವವರನ್ನು ಆದಷ್ಟು ಸಹಜರನ್ನಾಗಿ ಮಾಡುವುದು. ಇದರರ್ಥ ಅವರನ್ನು ಪೂರ್ಣ ಸಹಜರನ್ನಾಗಿ ಮಾಡಬಹುದೆಂದಲ್ಲ. ದುರದೃಷ್ಟವಶಾತ್ ಅದು ಸಾಧ್ಯವೂ ಇಲ್ಲ. ಆದರೆ ಅವರನ್ನು ಸಮಾಜ ಒಪ್ಪಿಕೊಳ್ಳುವಷ್ಟರ ಮಟ್ಟಿಗೆ ಮತ್ತು ತಮ್ಮ ಕಾಲ ಮೇಲೆ ತಾವು ನಿಲ್ಲುವಷ್ಟು ನಿರಾವಲಂಬಿಗಳಾಗುವಂತೆ ಮಾಡಲು ಸಾಧ್ಯವಿದೆ.

ಅತಿಯಾದ ಮತ್ತು ತೀವ್ರತರನಾದ ಬುದ್ಧಿಮಾಂದ್ಯವುಳ್ಳವರಿಗೆ ಇತರ ರೋಗಗಳೂ ಜೊತೆಯಲ್ಲಿರುವುದರಿಂದ ಮತ್ತು ಸುಲಭದಲ್ಲಿ ನಂಜಿಗೆ ತುತ್ತಾಗುವುದರಿಂದ ಅವರ ಆಯುಷ್ಯ ಕಡಿಮೆ. ಈ ರೀತಿಯ ತೊಂದರೆಗಳಿಲ್ಲದ ಸ್ವಲ್ಪ

ಬುದ್ಧಿಮಾಂದ್ಯದವರು ಸಾಧಾರಣವಾಗಿ ಇತರರಷ್ಟೇ ಕಾಲ ಬದುಕುಳಿಯುವರು.

## ತಡೆಗಟ್ಟುವುದು ಹೇಗೆ?

ಬುದ್ಧಿಮಾಂದ್ಯವನ್ನು ಪೂರ್ಣವಾಗಿ ತೊಡೆದು ಹಾಕಲಾಗುವುದಿಲ್ಲ. ಆದ್ದರಿಂದ ಅದನ್ನು ತಡೆಗಟ್ಟುವ ಯಾವುದೇ ಕ್ರಮಗಳಲ್ಲಿ ಪುನಃಸ್ಥಾಪನೆಯ ಪಾತ್ರ ಅತಿ ಮುಖ್ಯವಾದುದು.

ಅದನ್ನು ತಡೆಗಟ್ಟುವಲ್ಲಿ ಮೊದಲ ಹೆಜ್ಜೆಯೆಂದರೆ ಜನಸಾಮಾನ್ಯರಲ್ಲಿ ಅದರ ಬಗ್ಗೆ ತಿಳುವಳಿಕೆ ನೀಡುವುದು. ಅವೆಂದರೆ:

- ನಂಜಿನ ಕಾಯಿಲೆಗಳನ್ನು ತಡೆಗಟ್ಟುವುದು ಮತ್ತು ನಂಜಾದಾಗ ಸರಿಯಾದ ಚಿಕಿತ್ಸೆ ಮಾಡುವುದು.
- ಔಷಧಗಳು, ವಿಷ ಪದಾರ್ಥಗಳು, ಕ್ಷ-ಕಿರಣ ಮತ್ತು ತಂದೆ ತಾಯಿಯರಲ್ಲಿ ಹೊಂದಾಣಿಕೆಯಾಗದಂತಹ ರಕ್ತದಿಂದಾಗುವ ದುಷ್ಪರಿಣಾಮಗಳು.
- ಲಸಿಕೆ ಹಾಕಿಸಿಕೊಳ್ಳುವುದರ ಮತ್ತು ಪೌಷ್ಟಿಕಾಂಶಯುಕ್ತ ಆಹಾರದ ಮಹತ್ವವನ್ನು ಜನರಲ್ಲಿ ಬಿಂಬಿಸುವುದು.
- ಬುದ್ಧಿಮಾಂದ್ಯದ ಬಗ್ಗೆ ಇರುವ ತಪ್ಪು ತಿಳುವಳಿಕೆಗಳನ್ನು ಹೋಗಲಾಡಿಸುವುದು

ವೈದ್ಯಕೀಯ ಮಟ್ಟದಲ್ಲಿ, ಮದುವೆಯ ಸಮಯದಲ್ಲಿ ಹೆಣ್ಣು ಗಂಡಿನ ಹೊಂದಾಣಿಕೆಯಲ್ಲಿಂದಲೇ ಬುದ್ಧಿಮಾಂದ್ಯವನ್ನು ತಡೆಗಟ್ಟುವ ಕ್ರಮ ಆರಂಭವಾಗುತ್ತದೆ. ವಂಶವಾಹಿಗಳ ಬಗೆಗಿನ ತಿಳುವಳಿಕೆ ಹತ್ತಿರದ ಸಂಬಂಧಿಗಳಲ್ಲಿ ಮದುವೆಯಾಗುವುದನ್ನು ತಪ್ಪಿಸುತ್ತದೆ. ಈ ರೀತಿಯ ಮದುವೆಗಳು ದಕ್ಷಿಣ ಭಾರತದಲ್ಲಿ ಸರ್ವೇಸಾಮಾನ್ಯ. ಒಂದು ಅಂದಾಜಿನಂತೆ ಶೇಕಡಾ ೪೦ ರಷ್ಟು ಬುದ್ಧಿಮಾಂದ್ಯವುಳ್ಳ ಮಕ್ಕಳ ತಂದೆ ತಾಯಿಗಳು ಹತ್ತಿರದ ಸಂಬಂಧಿಕರು. ಉತ್ತರ ಭಾರತದಲ್ಲಿ ಇದು ಶೇಕಡಾ ರಷ್ಟು ಇದೆಯೆಂದು ಒಂದು ಅಂದಾಜು. ಮದುವೆಯ ಮುನ್ನ ದಂಪತಿಗಳ ರಕ್ತ ಪರೀಕ್ಷೆ ಮಾಡಿಸಬೇಕು. ತಂದೆ ತಾಯಿಗಳಲ್ಲಿ ಅಥವಾ ಅವರ ಕುಟುಂಬದಲ್ಲಿ ವಂಶವಾಹಿಗಳ ತೊಂದರೆಯಿದ್ದಲ್ಲಿ ಮತ್ತು ತಾಯಿಗೆ ಮಧುಮೇಹ ರೋಗ ಇದ್ದಲ್ಲಿ ಅದರಿಂದ ಅವರಿಗೆ ಹುಟ್ಟುವ ಮಕ್ಕಳ ಮೇಲಾಗಬಹುದಾದ ಪರಿಣಾಮಗಳ ಬಗ್ಗೆ ತಿಳುವಳಿಕೆ ನೀಡಬೇಕು. ✡



"ಅಲ್ಪ ಕಾಲದಲ್ಲಿ ಪಿಯಾನೊವಾದನದ ಕಾರ್ಯಕ್ರಮ ನೀಡಲು ನೀವು ಸಿದ್ಧರಿದ್ದೀರಾ?" ಸಹ-ಪಿಯಾನೋ ವಾದಕನೊಬ್ಬ ಜಾನ್ ಪಡೆರೆಸ್ಕಿ ಅವರನ್ನು ಕೇಳಿದಾಗ ಅವರು, "ನಾನು ಯಾವಾಗಲೂ ಸಿದ್ಧ. ೪೦ ವರ್ಷಗಳ ಕಾಲ ಪ್ರತಿ ದಿನ ೮ ಗಂಟೆಗಳ ಅಭ್ಯಾಸ ನಡೆಸಿದ್ದೇನೆ," ಎಂದು ಹೇಳಿದರು.

"ನಾನೂ ಅಂಥಾ ನಿರ್ಧಾರದಿಂದ ಹುಟ್ಟಿದ್ದರೆ ಚೆನ್ನಾಗಿತ್ತು." ಎಂದು ಆ ಸಹ-ಪಿಯಾನೊ ವಾದಕ ಹೇಳಿದ.

"ಎಲ್ಲರೂ ಆ ನಿರ್ಧಾರದಿಂದಲೇ ಹುಟ್ಟಿರುತ್ತಾರೆ. ಆದರೆ ನನ್ನ ನಿರ್ಧಾರವನ್ನು ನಾನು ಬಳಸಿಕೊಂಡಿದ್ದೇನೆ, ಅಷ್ಟೇ," ಎಂದು ಪಡೆರೆಸ್ಕಿ ಹೇಳಿದರು.

–ಜಿ. ವಿ. ಶಶಿಧರ

# ಶಿಖರವೇರಿದ ಶ್ವಾನ

ಎಸ್. ಆರ್. ಶ್ರೀನಿವಾಸ

ಶ್ವಾನವೊಂದು ಪಂಚಪಾಂಡವರ ಸ್ವರ್ಗಾ-ರೋಹಣ ಸಮಯದಲ್ಲಿ ಧರ್ಮರಾಯನೊಂದಿಗೆ ಸ್ವರ್ಗಕ್ಕೆ ಹೋಯಿತೆಂದು ಮಹಾಭಾರತದಲ್ಲಿ ಓದುತ್ತೇವೆ. ಸ್ವರ್ಗಪಥ ಹಿಡಿದಿದ್ದ ಪಂಚಪಾಂಡವರಲ್ಲಿ ಧರ್ಮರಾಯನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ದ್ರೌಪದಿ ಸಹಿತ ಹಿಮಾಲಯ ಪರ್ವತಾರೋಹಣ ಸಮಯದಲ್ಲಿಯೇ ಮರಣಹೊಂದಿದರಾದರೂ ಈ ಶ್ವಾನವು ಮಾತ್ರ ಧರ್ಮನನ್ನೇ ಕೊನೆಯವರೆಗೂ ಹಿಂಬಾಲಿಸಿ ಅವನೊಂದಿಗೆ ವಿಮಾನದಲ್ಲಿ ಸ್ವರ್ಗಕ್ಕೆ ಹೋಯಿತೆಂದು ಕೇಳಿದ್ದೇವೆ.

ಇದು ಪಂಚಪಾಂಡವರ ಕಾಲದ, ಮಹಾಭಾರತದ ಕತೆಯಾಯಿತು. ಆಧುನಿಕ ಜಗತ್ತಿನಲ್ಲಿ ಸಹ ಪರ್ವತಾರೋಹಣ ಮಾಡಿದ ಶುನಕಗಳಿವೆ!

**ಶುನಕಗಳ ಕೇದಾರ ಯಾತ್ರೆ**

ಮೂರು ನಾಲ್ಕು ವರ್ಷಗಳ ಹಿಂದೆ ಪತ್ರಿಕೆಗಳು ಶ್ವಾನಗಳ ಪರ್ವತಾರೋಹಣ ಸಾಹಸವೊಂದನ್ನು ವರದಿಮಾಡಿದ್ದವು. ಆ ವರದಿಯ ಪ್ರಕಾರ ಭಾರತ-ಟಿಬೆಟ್ ಗಡಿ ಪೋಲಿಸ್ ಪಡೆಗೆ ಸೇರಿದ ಪರ್ವತಾರೋಹಿಗಳ ತಂಡವೊಂದು ಉತ್ತರ ಹಿಮಾಲಯಗಳಲ್ಲಿನ ಮೂರು ಶಿಖರಗಳನ್ನೇರಿ ಬಂದಿತು. ಈ ಯಶಸ್ವಿ ತಂಡದಲ್ಲಿ ಶ್ವಾನಗಳೂ ಪಾಲುಗೊಂಡಿದ್ದವು! ಹಿಮಗಾಡಿಗಳನ್ನೆಳೆಯುವ ಮೂರು ಶುನಕಗಳು ಸಹ ಒಂದು ಶಿಖರವನ್ನು ಯಶಸ್ವಿಯಾಗಿ ಏರಿಬಂದವು. ಶುನಕಗಳು ೬೭೨೩ ಮೀಟರ್‌ಗಳ ಎತ್ತರದ ಕೇದಾರನಾಥಡೋಂ ಶಿಖರವನ್ನೇರಿದ್ದವು. ಈ ತಂಡವು ಅಸಿಸ್ಟೆಂಟ್ ಕಮಾಂಡಂಟ್ ಎಸ್. ಪಿ. ಚಮೋಲಿಯವರ ನಾಯಕತ್ವದಲ್ಲಿ ಶಿಖರದಿಂದ ಕೆಳಗೆ ೧೨ ಕಿಲೋ-ಮೀಟರ್‌ಗಳಷ್ಟು ದೂರದಲ್ಲಿದ್ದ ಮೊದಲನೆಯ ಶಿಬಿರವನ್ನು ಕೇವಲ ೬೦ ನಿಮಿಷಗಳಲ್ಲಿ ಜಾರಿ ಬಂದು ತಲಪಿತು.

**ಶತ ಶಿಖರಾರೋಹಿ ಷಿಂಗಲ್**

ಷಿಂಗಲ್ ಒಂದು ಮುದ್ದಾದ ಹೆಣ್ಣುನಾಯಿ. ಕಂದು ಬಣ್ಣದ ಮೈ, ರೇಷ್ಮೆಯಂತೆ ಮೃದುವಾದ ಚರ್ಮ, ದೊಡ್ಡ ದೊಡ್ಡ ಕಂದು ಬಣ್ಣದ ಕಣ್ಣುಗಳು. ಬಹುಶಃ ಪರ್ವತಾರೋಹಣ ಮಾಡಿರುವ ಶ್ವಾನಗಳಲ್ಲೆಲ್ಲಾ ಅತಿ ಹೆಚ್ಚಿನ ದಾಖಲೆಗಳನ್ನು ಮಾಡಿರುವ ಏಕೈಕ ಶುನಕವಿದು. ೧೮೬೫ ರಲ್ಲಿ ಹುಟ್ಟಿದ ಈ ನಾಯಿಯು ಕೇವಲ ಆರು ತಿಂಗಳ ಮರಿಯಾಗಿದ್ದಾಗಲೇ ಖ್ಯಾತ ಪರ್ವತಾರೋಹಿ ಕ್ರಿಶ್ಚಿಯನ್ ಆಮರ್ ಮತ್ತು ಹರ್ ಫರ್ಡ್‌ರೊಂದಿಗೆ ಷಿಂಗಲ್ ಎಂಬ ಶಿಖರವನ್ನೇರಿ ಬಂತು. ಈ ಶಿಖರಾರೋಹಣದ ನಂತರವೇ ಈ ಶುನಕಕ್ಕೆ ಈ ಶಿಖರದ ಹೆಸರನ್ನೇ ನಾಮಕರಣ ಮಾಡಲಾಯಿತು. ೧೮೬೮ರಲ್ಲಿ ಕೂಲಿಜ್ ಮತ್ತು ಅವನ ದೊಡ್ಡಮ್ಮ ಮೇಟಾ ಬ್ರೆವೂರ್ಟ್ ಪ್ರತಿಕೂಲದ ಹವಾಮಾನದಿಂದಾಗಿ ಪರ್ವತಾರೋಹಣ ಕಾರ್ಯದಿಂದ ಹಿಮ್ಮೆಟ್ಟುವ ಪ್ರಸಂಗ ಬಂದಿತು. ೧೮ ವರ್ಷಗಳ ತರುಣ, ಕೂಲಿಜ್‌ಗೆ ಆದ ನಿರಾಶೆಯನ್ನು ನೀಗಿಸು-ವುದಕ್ಕಾಗಿ ಆಲ್ಮರ್ ತನ್ನ ಮುದ್ದು ನಾಯಿ ಮರಿಯನ್ನು ಕೂಲಿಜ್‌ಗೆ ಕೊಟ್ಟ ನಂತರ ಈ ಮುದ್ದು ನಾಯಿಮರಿಯು ತನ್ನ ಹೊಸ ಪೋಷಕರೊಂದಿಗೆ ಮತ್ತೆ ಪರ್ವತಾರೋಹಣ ಸಾಹಸ ಕೈಗೊಂಡಿತು. ಮೌಂಟ್ ಬ್ಲಾಂಕ್, ಜಂಗ್‌ಫ್ರಾಗಳಂತಹ ದೊಡ್ಡ ದೊಡ್ಡ ಪರ್ವತಗಳನ್ನೇರಿ ಬಂತು. ಒಟ್ಟು ೬೬ ದೊಡ್ಡ ಶಿಖರಗಳು ಹಾಗ ಸುಮಾರು ೧೦೦ ಚಿಕ್ಕ ಪುಟ್ಟ ಶಿಖರಗಳನ್ನು ಯಶಸ್ವಿಯಾಗಿ ಹತ್ತಿದ ಇದು ೧೮೭೯ರಲ್ಲಿ ತನ್ನ ೧೪ನೆಯ ವರ್ಷದಲ್ಲಿ ಸಾವನ್ನಪ್ಪಿತು. ✡

ಪ್ರಸಾರ ವಿಭಾಗ

# ಬೆನ್‌ಹರ್



ಮೂಲ: ಲೂ ವಾಲೇಸ್
ಸಂಗ್ರಹಾನುವಾದ: ಕೆ. ಪುಟ್ಟಸ್ವಾಮಿ

# ಬೆನ್ - ಹರ್

"ಇದು ಕ್ರಿಶ್ಚಿಯನ್ ಧರ್ಮದ ಪ್ರವರ್ತಕ ಯೇಸು ಕ್ರಿಸ್ತನ ಹುಟ್ಟು ಮತ್ತು ಸಾವಿನ ನಡುವಿನ ಅವಧಿಯ ಕತೆ. ಪತನಗೊಳ್ಳಲಿದ್ದ ರೋಮ್‌ನ ಸಾಮಾಜಿಕ ಆರ್ಥಿಕ ಸ್ಥಿತಿಗತಿಯ ನಡುವೆ ಶತ್ರುಗಳಾಗಿ ಪರಿವರ್ತಿತರಾದ ಇಬ್ಬರು ಗೆಳೆಯರ, ರೋಮನ್ – ಯಹೂದಿಗಳ ನಡುವಿನ ಸಂಘರ್ಷದ ಕತೆ."

ಆಗ ಕ್ರಿಸ್ತಶಕ ಹದಿನೇಳನೇ ವರ್ಷ.

ರೋಮನ್ ಚಕ್ರಾಧಿಪತ್ಯ ಎಲ್ಲೆಡೆ ವಿಸ್ತೃತವಾಗಿತ್ತು; ಇದರ ಆಧಿಪತ್ಯಕ್ಕೆ ಪವಿತ್ರ ನಗರವೆನಿಸಿದ ಜೆರುಸಲೇಂ ಪಟ್ಟಣವನ್ನೊಳಗೊಂಡ ಜೂಡಿಯಾ ಪ್ರಾಂತ್ಯವೂ ಒಳಪಟ್ಟಿತ್ತು. ಜೂಡಿಯಾವನ್ನಾಳುತ್ತಿದ್ದ ಕ್ರೂರಿ ರಾಜ ಆಗ ಗತಿಸಿದ್ದ. ರೋಮನ್ ಚಕ್ರಾಧಿಪತಿ ಜೂಡಿಯಾ ಪ್ರಾಂತ್ಯವನ್ನು ಆಳಲು ಅಷ್ಟೇನೂ ಪ್ರಸಿದ್ಧನಲ್ಲದ ದಂಡಾಧಿಕಾರಿಯೊಬ್ಬನನ್ನು ನಿಯಮಿಸಿದ್ದ. ಆತನ ಹೆಸರು ವೆಲೇರಿಯಸ್ ಗ್ರಾಟಸ್.

ಇದೇ ವೇಳೆಯಲ್ಲಿ ಮುಂದಿನ ಇತಿಹಾಸದಲ್ಲಿ ಸೇರಿ ಹೋಗಲಿರುವ ಮೂವರು ಯುವಕರು ಜೂಡಿಯಾದಲ್ಲಿ ಬೆಳೆಯುತ್ತಿದ್ದರು. ಜೂಡಾ ಎಂಬ ಯಹೂದ್ಯ ಮತ್ತು ಮೆಸ್ಸೆಲಾ ಎಂಬ ರೋಮನ್ ಜೇರುಸಲೇಂನಲ್ಲಿ ವಾಸಿಸುತ್ತಿದ್ದರು. ಯಹೂದಿ ಜನಾಂಗಕ್ಕೆ ಸೇರಿದ್ದ ಜೀಸಸ್ ಎಂಬ ಇತಿಹಾಸ ಪುರುಷ ಜರುಸಲೇಂಗೆ ಹತ್ತಿರವಿದ್ದ ನಜರತ್ ಎಂಬ ಹಳ್ಳಿಯಲ್ಲಿ ವಾಸವಾಗಿದ್ದ.

ಜೂಡಾ ಬೆನ್–ಹರ್‌ನ (ಜೂಡಾನ ಪೂರ್ತಿ ಹೆಸರು) ಮನೆ ಜರುಸಲೇಂನ ಮಾರುಕಟ್ಟೆಗೆ ಹತ್ತಿರವಿತ್ತು. ಆತನ ಜತೆ ಹದಿಮೂರು ವರ್ಷದ ತಂಗಿ ತಿರ್ಜಾ ಮತ್ತು ವಯಸ್ಸಾದ ತಾಯಿ ವಾಸವಾಗಿದ್ದರು. ಶ್ರೀಮಂತ ಮನೆತನದ ಹಿನ್ನೆಲೆಯಿದ್ದ ಜೂಡಾನ ಅರಮನೆಯಲ್ಲಿ ಅನೇಕ ಆಳುಕಾಳುಗಳಿದ್ದರು. ಹರ್ ಅರಮನೆಯ ರಾಜನಾಗಿದ್ದ. ಆತನ ತಂದೆ ಇತಾಮರ್— ಶ್ರೀಮಂತ ವಣಿಕ. ವ್ಯಾಪಾರಕ್ಕಾಗಿ ಹಡಗಿನಲ್ಲಿ ಹೋಗಿದ್ದಾಗ ಒಮ್ಮೆ ಸಮುದ್ರದಲ್ಲೇ ನಿಧನ ಹೊಂದಿದ್ದ. ಬೇರೆ ಬೇರೆ ರಾಷ್ಟ್ರಗಳ ಜತೆ ವ್ಯಾಪಾರ ನಡೆಸುತ್ತಿದ್ದರೂ ಇತಾಮರ್ ರೋಮನ್ ಚಕ್ರಾಧಿಪತ್ಯದಲ್ಲಿ ಅನೇಕ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದ. ಚಕ್ರಾಧಿಪತಿಯ ಜತೆ ಸೌಹಾರ್ದದಿಂದ ಇದ್ದರೂ ತನ್ನ ಯಹೂದಿ ಧರ್ಮಕ್ಕೆ ನಿಷ್ಠನಾಗಿದ್ದ. ಯುವಕನಾಗಿದ್ದ ಜೂಡಾನಿಗೆ ಈ ವ್ಯಾವಹಾರಿಕ ಪ್ರಜ್ಞೆ ತಂದೆಯಿಂದ ಬಳುವಳಿಯಾಗಿ ಬಂದಿತ್ತು.

ಮೆಸ್ಸೆಲಾ ಕುಟುಂಬ ಸಹ ರೋಮನ್ ಚಕ್ರಾಧಿಪತಿಯ ಜೊತೆ ಉತ್ತಮ ಬಾಂಧವ್ಯ ಹೊಂದಿತ್ತು. ಆತನ ತಂದೆ ಜೂಡಿಯಾ ಪ್ರಾಂತ್ಯದ ತೆರಿಗೆ ಸಂಗ್ರಹಾಧಿಕಾರಿಯಾಗಿ ನಿಯಮಿತವಾಗಿದ್ದರು.

ಈಗ ಜೂಡಾನಿಗೆ ಹದಿನೇಳು ಮತ್ತು ಮೆಸ್ಸೆ–

ಲಾಗೆ ಹತ್ತೊಂಭತ್ತು ವರ್ಷ ವಯಸ್ಸು. ಇಬ್ಬರೂ ಬಾಲ್ಯ ಸ್ನೇಹಿತರು. ಇಬ್ಬರೂ ರೂಪವಂತರು. ಮೊದಲ ನೋಟಕ್ಕೆ ಸೋದರ ರಂತೆ ಕಾಣುತ್ತಿದ್ದರು. ಇಬ್ಬರಿಗೂ ಹೊಳೆಯುವ ಕಪ್ಪು ಕಣ್ಣುಗಳು, ಮಿಂಚುವ ಕರಿ ಕೂದಲು. ಸ್ನಾಯುಗಳಿಂದ ಕೂಡಿದ ಮೈಕಟ್ಟು.

ಮೆಸ್ಸೆಲಾ ಹದಿನಾಲ್ಕು ವರ್ಷದವನಿದ್ದಾಗ ವ್ಯಾಸಂಗಕ್ಕೆಂದು ರೋಮ್‌ಗೆ ತೆರಳಿದ್ದ.

ಐದು ವರ್ಷದ ನಂತರ ಅಗಲಿದ ಗೆಳೆಯರ ಸಮಾಗಮವಾಗುವುದಿತ್ತು.

ಅದೊಂದು ಜೂಡಿಯಾದ ಸಾರ್ವಜನಿಕ ಉದ್ಯಾನವನ. ಜುಲೈ ತಿಂಗಳಿನ ಮಧ್ಯಾಹ್ನದ ಉರಿಬಿಸಿಲು. ನಾಳೆ ಜೂಡಿಯಾದ ದಂಡಾಧಿಕಾರಿ ವೆಲೇರಿಯಸ್ ಗ್ರ್ಯಾಟಸ್ ಜರುಸಲೇಂಗೆ ಬರಲಿದ್ದ. ಉದ್ಯಾನವನದಲ್ಲಿ ತನ್ನ ಗೆಳೆಯ ಮೆಸ್ಸೆಲಾನನ್ನು ಕಾಣಲು ಜೂಡಾ ಕುತೂಹಲದ ಕಣ್ಣುಗಳನ್ನು ಹೊತ್ತು ಬಂದಿದ್ದ. ಆದರೆ ಮೆಸ್ಸೆಲಾ ಬಂದು ಮಾತನಾಡಿದ ನಂತರ ಜೂಡಾಗೆ ತೀರಾ ನಿರಾಶೆ ಯಾಯಿತು. ಆತ ಹಿಂದೆ ತನ್ನೊಡನೆ ಕಾಲ ಕಳೆದಿದ್ದ ಪ್ರೀತಿಯ ಗೆಳೆಯನಾಗಿರಲಿಲ್ಲ. ಯಹೂದ್ಯರನ್ನು ಅಣಕಿಸಿ ಚುಚ್ಚುವ ನಿಜವಾದ ರೋಮನ್ ಆಗಿ ಬದಲಾವಣೆ ಹೊಂದಿದ್ದ. ಆತನ ಮಾತುಗಳಲ್ಲಿ ಪ್ರೀತಿಯನ್ನು ಅರಸಿ ಜೂಡಾ ಸೋತುಹೋದ.

"ನಾನು ರೋಮ್‌ನಲ್ಲಿ ವಿನೋದದಿಂದ ಜೀವನವನ್ನು ಕಳೆಯುತ್ತಿದ್ದರೆ ನೀನು ಮನೆ ಯಿಂದ ದೇವಸ್ಥಾನಕ್ಕೆ ಸುತ್ತುತ್ತಾ ಇದ್ದೆ ಯೆಂದು ಕಾಣುತ್ತದೆ," ಎಂದು ಮೆಸ್ಸೆಲಾ ಗೇಲಿ ಮಾಡಿದ.

"ನೀನು ಬದಲಾಯಿಸಿದ್ದೀ ಮೆಸ್ಸೆಲಾ"— ಜೂಡಾ ಹೇಳಿದ. "ರೋಮ್ ಜನಾಂಗ ಇತರರಿಗಿಂತ ಮೇಲು, ಅವರ ದೇವರು ಯಹೂದಿ ಯರ ದೇವರಿಗಿಂತ ಶ್ರೇಷ್ಠ ಅನ್ನೋ ಭಾವನೆ ನಿನ್ನ ತಲೆ ಹೊಕ್ಕಿದೆ. ಆದರೆ ಅದರಿಂದ ನಿನ್ನನ್ನು ಅತಿಯಾಗಿ ಪ್ರೀತಿಸುತ್ತಿದ್ದ ಬಾಲ್ಯದ ಗೆಳೆಯ ನೊಬ್ಬನ ಮನಸ್ಸಿಗೆ ನೋವಾಗಬಲ್ಲದು ಎಂಬ ಸೂಕ್ಷ್ಮ ಕೂಡ ನಿನಗೆ ತಿಳಿಯುತ್ತಿಲ್ಲ," ಎಂದು ವಿಷಾದದಿಂದ ಹೇಳಿದ.

"ನಿನ್ನ ಮನಸ್ಸಿಗೆ ಹೇಗೆ ನೋವನ್ನುಂಟು ಮಾಡಿದೆ?"— ಮೆಸ್ಸೆಲಾ ಕೇಳಿದ.

"ಈ ಐದು ವರ್ಷಕಾಲ ನಾನು ಜೀವನವನ್ನು ವ್ಯರ್ಥ ಮಾಡಿದೆ ಎಂದು ನಿನ್ನ ಭಾವನೆ. ಆದರೆ ಕೇಳು, ನಾನು ಬೇಕಾದಷ್ಟು ಕಲಿತಿದ್ದೇನೆ. ನಿನ್ನ ರೋಮ್ ಗುರುಗಳಿಗೆ ಗೊತ್ತಿರುವಷ್ಟು ನನ್ನ ಯಹೂದಿ ಗುರುಗಳಿಗೆ ಗೊತ್ತಿಲ್ಲದೇ ಇರಬ-ಹುದು. ಆದರೆ ಅವರು ನನಗೆ ದೇವರು, ಮನು-ಷ್ಯನ ನಡವಳಿಕೆ, ಪ್ರೀತಿ, ಇಸ್ರೇಲ್ ಮುಂತಾದುವು ಗಳ ಬಗ್ಗೆ ಬಹಳಷ್ಟು ಹೇಳಿದ್ದಾರೆ. ಒಂದು ಕಾಲದಲ್ಲಿ ಜೂಡಿಯಾ ರೋಮನ್ ಚಕ್ರಾಧಿಪತ್ಯ-ದಲ್ಲಿ ಮುಖ್ಯವಾದ ಪ್ರಾಂತ್ಯಗಳಲ್ಲೊಂದಾಗಿತ್ತು. ಈಗ ಅದು ರೋಮ್ ಪ್ರಾಂತ್ಯದಷ್ಟು ದೊಡ್ಡ ದಾಗಿಲ್ಲ ಎಂದು ಮಾತ್ರಕ್ಕೆ ನೀನು ನನ್ನನ್ನು ಹೀಗಳೆಯುವ ಅಗತ್ಯವಿರಲಿಲ್ಲ. ಇದರಿಂದ ನನಗೆ ನೋವು ಆಗಿದೆ. ಸಿಟ್ಟು ಬಂದಿದೆ."

ಜೂಡಾನ ಕಳಕಳಿಯ ಮಾತುಗಳನ್ನು ಕೇಳಿ ಮೆಸ್ಸೆಲಾ ನಕ್ಕುಬಿಟ್ಟ. "ಈ ಯಹೂದ್ಯರು ಹೀಗೆ. ಅವರೆಂದೂ ಬದಲಾಗುವುದೇ ಇಲ್ಲ. ಅವರ ಪ್ರಪಂಚ ತುಂಬಾ ಚಿಕ್ಕದು. ದೇವರು ದೇವಸ್ಥಾನ ಬಿಟ್ಟರೆ ಅವರಿಗೆ ಬೇರೆ ಪ್ರಪಂಚವೇ ಇಲ್ಲ. ರೋಮ್‌ನಲ್ಲಿರುವ ಶ್ರೇಷ್ಠ ಕಲೆ ಆಟೋಟ ಗಳ ಬಗ್ಗೆ ಅವರು ಅಜ್ಞಾನಿಗಳು." ಎಂದು ಮತ್ತಷ್ಟು ಗೇಲಿ ಮಾಡಿದ.

ಮೆಸ್ಸೆಲಾ ಭುಜದ ಮೇಲೆ ಕೈಹಾಕಿದ ಜೂಡಾ ನೋವಿನಿಂದ, "ನಾನು ಹಿಂದೆ ಪ್ರೀತಿಸುತ್ತಿದ್ದ ಗೆಳೆಯನಾಗಿ ನೀನು ಉಳಿದಿಲ್ಲ. ತುಂಬಾ ಬದಲಾಗಿಬಿಟ್ಟಿದ್ದೀಯಾ," ಎಂದ.

"ಬದಲಾಗಿರುವುದು ನಾನಲ್ಲ; ಕಾಲ 'ಪ್ರೀತಿ'– ಅದಕ್ಕೆಲ್ಲಾ ಈಗ ಬೆಲೆಯಿಲ್ಲ. ಈಗ ಬೆಲೆಯಿರು-ವುದು ಯುದ್ಧಕ್ಕೆ ಮಾತ್ರ. ನಿನ್ನನ್ನು ಕಂಡಾಗ ಕರುಣೆ ಉಕ್ಕುತ್ತದೆ ಜೂಡಾ. ಮನೆ ಬಿಟ್ಟರೆ ಆರಾಧನ ಮಂದಿರ– ಇಷ್ಟಕ್ಕೇ ನಿನ್ನ ಜೀವನ ಸೀಮಿತವಾಗಿಬಿಟ್ಟಿದೆ. ಆದರೆ ನನ್ನನ್ನು ನೋಡು. ನಾನು ಸೈನಿಕನಾಗಿ ದೇಶವನ್ನೆಲ್ಲಾ ಸುತ್ತಬಲ್ಲೆ. ಹೊಸ ಹೊಸ ಪ್ರಾಂತ್ಯಗಳನ್ನು ಜಯಿಸಿ ರೋಮನ್ ಆಧಿಪತ್ಯವನ್ನು ವಿಸ್ತರಿಸಬಲ್ಲೆ. ನಾನು ದೊಡ್ಡ ಶ್ರೀಮಂತನಾಗಿ ಪ್ರಸಿದ್ಧನಾಗ

ಒಲ್ಲೆ. ಆಗ ನನ್ನ ಶ್ರೀಮಂತಿಕೆಯನ್ನು ನಿನ್ನೊಡನೆ ಹಂಚಿಕೊಳ್ಳುತ್ತೇನೆ," ಎಂದು ಮತ್ತೆ ಪರಿಹಾಸ್ಯ ಮಾಡಿದ.

"ನಾವು ಅಗಲುವುದು ಒಳ್ಳೆಯದು ಮೆಸ್ಸೆಲಾ. ಇಲ್ಲಿಗೆ ಬರಬಾರದಿತ್ತೇನೋ ಅನಿಸುತ್ತಿದೆ. ನಾನು ನಾನು ಹಳೆಯ ಗೆಳೆಯನನ್ನು ಕಾಣಲು ಬಂದರೆ ನನಗೆ ಸಿಕ್ಕಿದ್ದು..."

"ಒಬ್ಬ ರೋಮನ್! ಅಲ್ಲಾ?" ಮೆಸ್ಸೆಲಾ ಪೂರ್ತಿಗೊಳಿಸಿದ. "ಆದರೆ ರೋಮನ್ ಅಂದು-ಕೊಳ್ಳೋದು ತಪ್ಪೇ. ನಾನು ಜೂಡಿಯಾದ ಯಹೂದ್ಯರ ಸಂಪತ್ತನ್ನು ವಶಪಡಿಸಿಕೊಳ್ಳಲು ಹಂಚಿಕೆ ಹಾಕಿದ್ದೇನೆ ಎಂದು ತಿಳಿದಿಯೋ ಹೇಗೆ?"

"ಇಲ್ಲಿ ಕೇಳು ಮೆಸ್ಸೆಲಾ; ರೋಮನ್ ಅಧಿಪತ್ಯ ಸ್ಥಾಪನೆ ಆಗುವುದಕ್ಕಿಂತ ಹಿಂದಿನಿಂದಲೂ ಜೂಡಿಯಾ ಇದೆ. ಅದನ್ನು ರೋಮನ್ನರಷ್ಟೇ ಅಲ್ಲ, ಬೇರೆಯವರೂ ಆಳಿ ಹೋಗಿದ್ದಾರೆ. ಆದರೆ ಅದನ್ನು ಆಳಿದವರೆಲ್ಲಾ ಈಗೆಲ್ಲಿದ್ದಾರೆ? ಸೋತುಹೋದರೇನು? ಜೂಡಿಯಾವನ್ನು ಕೊನೆ ತನಕ ರೋಮನ್ನರೇ ಆಳುವುದಿಲ್ಲ. ಅದು ಮತ್ತೆ ಸ್ವತಂತ್ರವಾಗುತ್ತದೆ. ನಾನೆಂದೂ ರೋಮನ್ ಆಗಲಾರೆ," ಎಂದು ಜೂಡಾ ದೃಢವಾಗಿ ಹೇಳಿದ.

"ಬೇಡ. ಆದರೆ ನೀನೇಕೆ ಸೈನಿಕನಾಗಬಾರದು? ನಾನು ನಿನಗೆ ಸಹಾಯ ಮಾಡುತ್ತೇನೆ. ಈ ಯಹೂದಿ ಸಂಪ್ರದಾಯಗಳನ್ನು ಬಿಡು. ರೋಮ್ ಅನ್ನೋದೇ ಪ್ರಪಂಚ. ಆಳುವ ಹಕ್ಕು ಇರೋದು ಅದಕ್ಕೆ. ಜೂಡಿಯಾ ಎಂದಿದ್ದರೂ ರೋಮ್‌ಗೆ ಶರಣಾಗಲೇಬೇಕು."

ಜೂಡಾ ಮಾತನಾಡಲಿಲ್ಲ. ಉದ್ಯಾನವನದ ಬಾಗಿಲಿನ ಕಡೆ ಇಬ್ಬರೂ ನಡೆಯತೊಡಗಿದರು. ಮೆಸ್ಸೆಲಾನ ಭುಜದ ಮೇಲಿದ್ದ ತನ್ನ ಕೈಯನ್ನು ಹಿಂತೆಗೆದ ಜೂಡಾ, "ನೀನು ರೋಮನ್. ನಾನು ಇಸ್ರೇಲಿ. ನಾವಿಬ್ಬರೂ ಈಗ ಅಗಲಲೇಬೇಕು. ಶಾಂತಿ ನಿನ್ನೊಡನಿರಲಿ," ಎಂದು ಖಂಡಿತವಾದ ಧ್ವನಿಯಲ್ಲಿ ಹೇಳಿದವನೇ ಮನೆಯ ಕಡೆ ಹೆಜ್ಜೆ ಹಾಕಿದ.

೨

ಜೂಡಾ ಮನೆಗೆ ಬಂದಾಗ ಮಧ್ಯಾಹ್ನದ ಊಟದ ಸಮಯವಾಗಿತ್ತು. ಯಹೂದ್ಯರ ಬಗ್ಗೆ ಪ್ರಿಯ ಸ್ನೇಹಿತ ಆಡಿದ ಅವಹೇಳನಕಾರಿ ಮಾತುಗಳಿಂದ ಅವನ ಮನಸ್ಸು ನೊಂದಿತ್ತು. ಊಟ ಮಾಡುವ ಬಯಕೆಯೇ ಹಿಂಗಿ ಹೋಗಿತ್ತು. ಊಟದ ಕೋಣೆಗೆ ಹೋಗದೆ ಸೀದಾ ತನ್ನ ಕೋಣೆಯೆಡೆಗೆ ನಡೆದ. ಹಾಸಿಗೆಯ ಮೇಲೆ ಬೋರಲಾಗಿ ಬಿದ್ದುಕೊಂಡ. ಮುಖವನ್ನು ತನ್ನ ಕೈಗಳಲ್ಲಿ ಹುದುಗಿಸಿ ಚಿಂತೆಯಲ್ಲಿ ಬೇಯ-ತೊಡಗಿದ.

ಹೀಗೆ ಸ್ವಲ್ಪ ಸಮಯ ಕಳೆದಿರಬೇಕು. ತನ್ನ ಭುಜದ ಮೇಲೆ ಆಡುತ್ತಿದ್ದ ಕೈಯ ಮೃದು ಸ್ಪರ್ಶದಿಂದ ಎಚ್ಚೆತ್ತ. ತನ್ನನ್ನು ಚಿಕ್ಕಂದಿನಿಂದ ಸಾಕಿ ಸಲುಹಿದ್ದ ಈಜಿಪ್ಟ್ ದೇಶದ ವಾತ್ಸಲ್ಯ ಮಯಿ ಸೇವಕಿ ಅಮ್ರಾ ಅವನ ಚಿಂತಾಕ್ರಾಂತ ಮುಖವನ್ನು ದಿಟ್ಟಿಸುತ್ತಿದ್ದಳು.

"ಏನಾಯಿತು ದೊರೆ? ಊಟ ಮಾಡಲೇ ಇಲ್ಲ. ಮೈ ಸರಿಯಿಲ್ಲವೇ?" ಆತಂಕದಿಂದ ಕೇಳಿದಳು.

"ಇಲ್ಲಾ ಅಮ್ರಾ, ಊಟ ಮಾಡಲು ಹಸಿವಿಲ್ಲ," ಎಂದ.

ಕಣ್ಣೀರಿನಿಂದ ತೊಯ್ದಿದ್ದ ಜೂಡಾನ ಕೆನ್ನೆ ಗಳನ್ನು ಸವರಿ, "ನಿನ್ನನ್ನು ಕಾಡುತ್ತಿರುವ ಚಿಂತೆ ಯಾವುದು ದೊರೆ?" ಎಂದು ಕೇಳಿದಳು.

ಜೂಡಾ ಅಮ್ರಾಳ ಕರುಣೆದುಂಬಿದ ಕಣ್ಣು ಗಳಲ್ಲಿ ದೃಷ್ಟಿ ಕಿಲಿಸಿ ಹೇಳಿದ, "ಅಮ್ರಾ...... ಮೆಸ್ಸೆಲಾ ತುಂಬಾ ಬದಲಾಗಿದ್ದಾನೆ. ಅವನ ಜೊತೆ ಇನ್ನು ಮುಂದೆ ಸಖ್ಯ ಸಾಧ್ಯವಿಲ್ಲ."

"ಅಂದ ಮೇಲೆ ಅವನನ್ನು ಮರೆತು ಬಿಡು-ವುದು ಒಳ್ಳೆಯದು. ಅದು ಹಾಗಿರಲಿ. ಈಗ ನಿನ್ನ ತಾಯಿ ನಿನ್ನನ್ನು ನೋಡಲು ಬಯಸಿ-ದ್ದಾರೆ. ಅವರು ಮೇಲಂತಸ್ತಿನಲ್ಲಿದ್ದಾರೆ," ಎಂದಳು.

ಜೂಡಾ ಅಮ್ರಾಳನ್ನು ಹಿಂಬಾಲಿಸಿದ. ಮನೆಯ ಮೇಲ್ಚಾವಣಿಯ ಮೇಲೊಂದು ಭಾಗ ಬೇಸಿಗೆಯ ಮನೆಯಾಗಿತ್ತು. ಆ ಮನೆಯ ಅತ್ಯಂತ ತಂಪಾದ ಭಾಗ ಅದು. ಬೇಸಿಗೆಯ ಧಗೆಯಲ್ಲಿ ಜೂಡಾ ಕುಟುಂಬ ಅಲ್ಲಿ ವಿಶ್ರಾಂತಿ ಪಡೆಯುತ್ತಿತ್ತು.

ಅಮ್ರಾಳನ್ನು ಹಿಂಬಾಲಿಸಿದ್ದ ಜೂಡಾನ ಮನವನ್ನು ಇನ್ನೂ ಉದ್ಯಾನವನದಲ್ಲಿ ಮೆಸ್ಸೆಲಾನಜೂತೆ ನಡೆದ ಘಟನೆಗಳೇ ಆವರಿಸಿಕೊಂಡಿದ್ದವು. ಮೆಸ್ಸೆಲಾನ ಬಗ್ಗೆ ಸಿಟ್ಟಿದರೂ ಮೆಸ್ಸೆಲಾ ವರ್ಣಿಸಿದ ರೋಮ್ ನಗರದ ಆಟ ಪಾಟಗಳು ತನಗೆ ಲಭ್ಯವಿಲ್ಲದ ಬಗ್ಗೆ ಖೇದಗೊಂಡಿದ್ದ. ರೋಮ್ ನೀಡುವ ಅನುಭವವನ್ನು ಪಡೆಯಲು ಅವನು ತನ್ನ ಕುಟುಂಬವನ್ನು ತೊರೆಯುವುದು ಸಾಧ್ಯವೇ ಇರಲಿಲ್ಲ. ಆತನ ತಾಯಿ ಮತ್ತು ತಂಗಿ ಆತನನ್ನು ತುಂಬಾ ಪ್ರೀತಿಸುತ್ತಿದ್ದರು. ತಂದೆ ಸತ್ತ ಮೇಲೆ ಅವನೇ ಕುಟುಂಬದ ಆಧಾರವಾಗಿದ್ದ.

"ಜೂಡಾ, ತುಂಬಾ ಬೇಸರಗೊಂಡಿದ್ದೀಯಲ್ಲಾ?" ತನ್ನನ್ನು ಚುಂಬಿಸಲು ಬಗ್ಗಿದ ಮಗನನ್ನು ನೋಡುತ್ತಾ ತಾಯಿ ಕೇಳಿದಳು.

"ಅಮ್ಮಾ, ನನ್ನನ್ನು ಕೆಲವು ಪ್ರಶ್ನೆಗಳು ಕಾಡುತ್ತಿವೆ. ನಮ್ಮನ್ನು ಕೀಳಾಗಿ ಕಾಣುವ ಹಕ್ಕು ರೋಮನ್ನರಿಗಿದೆಯಾ? ಯಹೂದ್ಯರಿಗಿಂತಲೂ ಅವರು ಶ್ರೇಷ್ಠರೇ? ಒಬ್ಬ ರೋಮನ್ ತನ್ನ ಮನಸ್ಸಿಗನಿಸಿದುದನ್ನೆಲ್ಲಾ ಮಾಡಬಹುದೇ? ರೋಮನ್ ಮಾಡುವ ಕೆಲಸಗಳನ್ನೇ ಯಹೂದಿಯೂ ಏಕೆ ಮಾಡಬಾರದು? ನಾನು ಸೈನಿಕನಾಗಿ ನನ್ನ ದೇವರ ಸೇವೆ ಮಾಡಲಾಗದೇ? ರೋಮನ್ನರಂತೆ ನಾನೂ ಸಮರ ತಂತ್ರ ಕಲೆಯನ್ನು ಕಲಿಯಬೇಕೆನಿಸಿದೆ. ಇದರಿಂದ ಒಂದು ದಿನ ನಾನೂ ಈ ರೋಮ್ ಚಕ್ರಾಧಿಪತ್ಯವನ್ನು ಅಳಿಸಿಹಾಕಬಹುದು."

ಮಗನ ಮಾತನ್ನು ಕೇಳಿದ ತಾಯಿ ಕೆಲವು ಕಾಲ ಮಾತನಾಡಲಿಲ್ಲ. ಅನಂತರ ಹೇಳಿದಳು: "ನೀನು ಸೈನಿಕನಾಗಲು ನನ್ನ ಅಭ್ಯಂತರವಿಲ್ಲ. ಆದರೆ ನೀನು ಸೈನಿಕನಾಗಿ ರೋಮನ್ ಚಕ್ರಾಧಿಪತಿಯ ಸೇವಕನಾಗಬಾರದು. ಇಸ್ರೇಲ್ ದೇವರಿಗೆ ನಿನ್ನ ಸೇವೆ ಮೀಸಲಿರಿಸಬೇಕು."

ಆ ರಾತ್ರಿ ಜೂಡಾನಿಗೆ ನಿದ್ರೆ ಹತ್ತಲಿಲ್ಲ. ತಾನು ಯಾವ ಮಾರ್ಗ ಹಿಡಿಯಬೇಕೆಂಬ ವಿಚಾರ ಸ್ಪಷ್ಟವಾಗಿರಲಿಲ್ಲ. ಮಾರನೆ ಬೆಳಿಗ್ಗೆ ಅವನು ಎದ್ದಾಗ ತಂಗಿ ತಿರ್ಜಾ ಅವನ ಹಾಸಿಗೆಯ ತುದಿಯಲ್ಲಿ ಕುಳಿತಿದ್ದಳು.

ತಿರ್ಜಾಳನ್ನು ನೋಡಿದ ಜೂಡಾ ತಕ್ಷಣವೇ, "ತಿರ್ಜಾ, ತಂದೆ ಬದುಕಿದ್ದರೆ ನನ್ನ ಕೌಶಲ್ಯ ಮತ್ತು ಜ್ಞಾನಕ್ಕೆ ಪೂರಕವಾದ ಉದ್ಯೋಗದಲ್ಲಿ ನಾನು ಪರಿಣಿತನಾಗಲು ಆಶಿಸುತ್ತಿದ್ದರು ಅಲ್ಲವೇ?" ಎಂದ.

"ಈಗ ನೀನೇನು ಮಾಡಬೇಕೆಂದಿದ್ದೀ? ತಂದೆಯಂತೆಯೇ ವ್ಯಾಪಾರಿಯಾಗುತ್ತೀಯಾ ?" ಎಂದು ಕೇಳಿದಳು.

"ಇಲ್ಲ......ನಾನು ಸೈನಿಕನಾಗುತ್ತೇನೆ"—ದೃಢಭಾವದಿಂದ ಉತ್ತರಿಸಿದ.

ತಿರ್ಜಾಳ ಕಣ್ಣಲ್ಲಿ ನೀರು ತುಂಬಿದವು. "ಅಣ್ಣಾ, ಸೈನಿಕನಾದರೆ ನಿನ್ನನ್ನು ಕೊಂದು ಬಿಡುತ್ತಾರೆ." ಎಂದಳು.

"ದೇವರ ಇಚ್ಛೆ ಹಾಗಿದ್ದರೆ ಆಗಲಿ ಬಿಡು," ಎಂದ.

"ಆದರೆ ನಾವಿಲ್ಲಿ ಸುಖದಿಂದ ಇದ್ದೀವಲ್ಲಾ. ಮನೆಯಲ್ಲೇ ಇರು. ರೋಮ್‌ಗೆ ಹೋಗಬೇಡ." ಎಂದಳು.

"ಯುದ್ಧ ಒಂದು ಉದ್ಯೋಗ. ಅದನ್ನು ಕರಗತ ಮಾಡಿಕೊಳ್ಳಬೇಕಾದರೆ ಶಾಲೆಗೇ ಹೋಗಿ ಕಲಿಯಬೇಕು. ರೋಮ್‌ನಲ್ಲಿರುವ ಶಾಲೆಗಳಿಗಿಂತ ಬೇರೆ ಉತ್ತಮ ಶಾಲೆ ಇಲ್ಲ," ಎಂದ.

"ಯುದ್ಧ ಅನಿವಾರ್ಯವಾದರೆ ರೋಮ್ ಪರ ನೀನು ಹೋರಾಡುತ್ತೀಯಾ?" ತಿರ್ಜಾ ಕೇಳಿದಳು.

"ಮುಂದೆ ರೋಮ್ ವಿರುದ್ಧ ನಡೆವ ಯುದ್ಧದಲ್ಲಿ ಅವರನ್ನು ಸೋಲಿಸಲು ಅಗತ್ಯವಾದ ತಂತ್ರಕೌಶಲಗಳನ್ನು ಕಲಿಯಲು ರೋಮ್‌ಗೆ ಹೋಗುತ್ತೇನೆ," ಎಂದ.

ಅಷ್ಟರಲ್ಲಿ ಉಪಾಹಾರ ಹಿಡಿದು ಬಂದ ಅಮ್ರಾ, "ಮನೆಯ ಮುಂದಿನ ರಸ್ತೆಯಲ್ಲಿ ಸೈನಿಕರ ಮೆರವಣಿಗೆಯೊಂದು ಬರುತ್ತಿದೆ," ಎಂದು ಹೇಳಿದಳು.

ಸುದ್ದಿ ಕೇಳಿದ ತಕ್ಷಣ ಜೂಡಾನ ಕಣ್ಣುಗಳು ಕುತೂಹಲದಿಂದ ಹೊಳೆದವು. ಸೈನಿಕರನ್ನು ನೋಡಲು ಅವನು ಮತ್ತು ತಿರ್ಜಾ ಛಾವಣಿಯ ಕಡೆ ನಡೆದರು.

ಸೈನಿಕರ ಮೆರವಣಿಗೆ ನಿಧಾನವಾಗಿ ಬರುತ್ತಿತ್ತು. ಮುಂದಿನ ಸಾಲಿನಲ್ಲಿ ಜೂಡಿಯಾದ

ನೂತನ ದಂಡಾಧಿಕಾರಿ ವೆಲೇರಿಯಸ್ ಗ್ರ್ಯಾಟಸ್ ವಿಶೇಷ ಉಡುಪಿನೊಡನೆ ಕುದುರೆಯ ಮೇಲೆ ಕುಳಿತು ಬರುತ್ತಿದ್ದ.

"ರೋಮನ್ನರ ನಾಯಿ" ಎಂದು ಕೂಗುತ್ತಾ ಅಕ್ಕಪಕ್ಕ ನಿಂತಿದ್ದ ಗುಂಪು ಗ್ರ್ಯಾಟಸ್‌ನನ್ನು ಅಣಕಿಸಿತು.

ಸೈನಿಕರ ಮೆರವಣಿಗೆಯನ್ನು ಸರಿಯಾಗಿ ನೋಡಲು ಛಾವಣಿಯಿಂದ ಜೂಡಾ ಬಗ್ಗಿದ. ಆತ ಕೈಗಳನ್ನು ಹೆಂಚುಗಳ ಮೇಲೆ ಭದ್ರವಾಗಿ ಊರಿ ಗ್ರ್ಯಾಟಸ್‌ನ ಕೋಪೋದ್ರಿಕ್ತ ಮುಖವನ್ನು ದಿಟ್ಟಿಸಿದ.

ಆ ದಿನ ಬಿಸಿಲು ತೀವ್ರವಾಗಿತ್ತು. ಧಗೆಗೆ ಹೆಂಚುಗಳು ತುಂಬಾ ಕಾದುಹೋಗಿದ್ದವು. ಕೆಲವು ಬಿಸಿಲಿನ ಝಳಕ್ಕೆ ಒಡೆದಿದ್ದವು. ಜೂಡಾ ಊರಿದ್ದ ಕೈಕೆಳಗೆ ಒಡೆದು ಹೋಗಿದ್ದ ಹೆಂಚೊಂದು ಜಾರಿತು. ಬೀಳುತ್ತಿದ್ದ ಹೆಂಚನ್ನು ಹಿಡಿಯಲು ಜೂಡಾ ಯತ್ನಿಸಿದ. ಆದರೆ ಹೆಂಚು ಜೂಡಾನ ಕೈಗೆ ಸಿಗದೆ ಸೀದಾ ಮುಂದೆ ಹೋಗುತ್ತಿದ್ದ ಗ್ರ್ಯಾಟಸ್‌ನ ತಲೆಯ ಮೇಲೆ ಬಿತ್ತು. ಗ್ರ್ಯಾಟಸ್ ಕುದುರೆಯಿಂದ ಬಿದ್ದು ಮೂರ್ಛೆ ಹೋದ.

ಸೈನಿಕರು ಈ ಅನಿರೀಕ್ಷಿತ ಘಟನೆಯಿಂದ ನಿಂತರು. ಹೆಂಚು ಹಾರಿಬಂದ ಕಡೆ ನೋಡಿದರು.

ಜೂಡಾನ ಮುಖ ಬಿಳುಚಿಕೊಂಡಿತು. ಗ್ರ್ಯಾಟಸ್ ಸತ್ತ ಎಂದು ನಂಬಿದ. "ಓ ತಿರ್ಜಾ, ನಾನು ಬೇಕೆಂದು ಹೆಂಚನ್ನು ಜಾರಿಸಲಿಲ್ಲ. ಆದರೆ ಈಗೇನು ಮಾಡಲಿ? ಯಾರು ನನ್ನನ್ನು ನಂಬುತ್ತಾರೆ?" ಎಂದು ಕುಸಿದ.

"ನಮ್ಮನ್ನೇನು ಮಾಡುತ್ತಾರೆ ಜೂಡಾ?" ಎಂದು ತಿರ್ಜಾ ಆತಂಕದಿಂದ ಅಣ್ಣನನ್ನು ಅಪ್ಪಿಕೊಂಡಳು.

ಅಳುತ್ತಿದ್ದ ತಂಗಿಯನ್ನು ಕೈ ಹಿಡಿದು ಬೇಸಗೆ ಮನೆಯೊಳಗೆ ಕರೆತಂದು ಕುಳ್ಳಿರಿಸಿದ. ಮನೆಯ ಮುಂದಿನ ಬಾಗಿಲನ್ನು ಬಡೆದ ಶಬ್ದ ಕೇಳಿಸಿತು. ಕೆಳ ಅಂತಸ್ತಿನಲ್ಲಿ ಜನರು ದಡಬಡನೆ ಓಡಾಡುತ್ತಿದ್ದ ಶಬ್ದ ಕೇಳಿಸಿತು. ತಕ್ಷಣ ಗೊಂದಲದಿಂದ ಚೀರುತ್ತಿದ್ದ ಸೇವಕರ ಧ್ವನಿಯೂ ಬಂತು.

"ರೋಮನ್ ಸೈನಿಕರು ಮನೆಯೊಳಗೆ ನುಗ್ಗಿದ್ದಾರೆ. ನಾವಿನ್ನು ತಪ್ಪಿಸಿಕೊಳ್ಳುವಂತಿಲ್ಲ," ಎಂದು ಜೂಡಾ ನಿಸ್ಸಹಾಯಕನಾಗಿ ನುಡಿದ.

ಜೂಡಾ ಕೆಳ ಅಂತಸ್ತಿನ ಕಡೆ ಧಾವಿಸಿದ. ತಿರ್ಜಾ ಅಣ್ಣನನ್ನು ಹಿಂಬಾಲಿಸಿದಳು. ಮನೆಯಲ್ಲಿ ಸೇವಕರು ಖಡ್ಗ ಹಿಡಿದು ನಿಂತ ರೋಮನ್ ಸೈನಿಕರ ಮುಂದೆ ಮಂಡಿಯೂರಿ ದೈನ್ಯದಿಂದ ಬೇಡುತ್ತಿದ್ದ ದೃಶ್ಯ ಕಣ್ಣಿಗೆ ಬಿತ್ತು. ತಾಯಿ ಕಿರುಚಿದ ಶಬ್ದ ಜೂಡಾನಿಗೆ ಕೇಳಿಸಿತು. ಮೂಲೆಯೊಂದರಲ್ಲಿ ರೋಮನ್ ಸೈನಿಕರು ತಾಯಿಯನ್ನು ಹಿಡಿದುಕೊಂಡಿದ್ದರು.

ತಾಯಿಯ ಕಡೆ ಜೂಡಾ ಧಾವಿಸುತ್ತಿದ್ದಂತೆಯೇ "ಅವನೇ ಹೆಂಚು ತೂರಿದವನು," ಎಂದು ಆಜ್ಞೆಯ ಧ್ವನಿಯಲ್ಲಿ ಹೇಳುತ್ತಿದ್ದ ಶಬ್ದ ಕೇಳಿಸಿತು. ಜೂಡಾ ಹಿಂತಿರುಗಿ ನೋಡಿದ. ಮೆಸ್ಸಲಾ ಜೂಡಾನ ಕಡೆ ಬೊಟ್ಟು ಮಾಡಿ ತೋರಿಸುತ್ತಿದ್ದ.

"ಏನು? ಇನ್ನೂ ಹುಡುಗ, ಇವನು ಕೊಲ್ಲುತ್ತಾನೆಯೇ?" ರೋಮನ್ ಸೈನಿಕರು ಸಂಶಯದಿಂದ ಮೆಸ್ಸಲಾನನ್ನು ಕೇಳಿದರು.

"ಕೊಲ್ಲಬೇಕಾದರೆ ವಯಸ್ಸಾಗಿರಬೇಕು ಎಂದು ಹೇಳಿದವರು ಯಾರು? ದ್ವೇಷವೊಂದು ಮನೆ ಮಾಡಿದರೆ ಯಾರು ಬೇಕಾದರೂ ಕೊಲ್ಲುತ್ತಾರೆ. ಈಗ ಇಡೀ ಕುಟುಂಬವನ್ನು ಬಂಧಿಸಿ," ಎಂದು ಮೆಸ್ಸಲಾ ತಣ್ಣಗೆ ಹೇಳಿದ.

ಮೆಸ್ಸಲಾ ಮಾಡಿದ ಮೋಸದ ಪರಿಯಿಂದ ಜೂಡಾನಿಗೆ ಸಿಟ್ಟು ಬಂತು. ಆದರೆ ತನ್ನ ತಂಗಿ ಮತ್ತು ತಾಯಿಗೆ ಒದಗಿರುವ ಪ್ರಾಣಾಪಾಯ ನೆನಪಿಗೆ ಬಂದ ಕೂಡಲೇ ಅವನು ವಂಚನೆಯನ್ನು ಮರೆತ. ಮೆಸ್ಸಲಾನ ಮುಂದೆ ಮಂಡಿಯೂರಿ ಕುಳಿತು, "ಮೆಸ್ಸಲಾ, ಸಹಾಯ ಮಾಡು. ನಿನಗೆ ಕೈಮುಗಿಯುತ್ತೇನೆ," ಎಂದು ದೈನ್ಯದಿಂದ ಬೇಡಿದ.

ಅವನ ಮಾತುಗಳನ್ನು ಕೇಳಿಸಿಕೊಳ್ಳದಂತೆ ನಟಿಸಿದ ಮೆಸ್ಸಲಾ ಹೊರನಡೆದ.

ಮಂಡಿಯೂರಿ ಕುಳಿತೇ ಇದ್ದ ಜೂಡಾ ಆಕಾಶದ ಕಡೆ ಮುಖ ಮಾಡಿ ದೇವರಲ್ಲಿ ಮೊರೆಯಿಟ್ಟ, "ಸೇಡು ತೀರಿಸಿಕೊಳ್ಳುವ ಕಾಲ ಬಂದರೆ, ಓ ದೇವರೇ, ಈ ನನ್ನ ಕೈಗಳು

ಮೆಸ್ಸೆಲಾನ ಮೇಲೆ ಪ್ರಹಾರ ಮಾಡಲಿ."

ಅನಂತರ ಜೂಡಾ ಎದ್ದು ನಿಂತ. ಸೈನಿಕರನ್ನು ಉದ್ದೇಶಿಸಿ, "ಗ್ರ್ಯಾಟಸ್‌ನನ್ನು ನಾನು ಕೊಲ್ಲಲು ಯತ್ನಿಸಿಲ್ಲ. ನೀವು ನನ್ನನ್ನು ನಂಬದೇ ಹೋದರೆ ನನ್ನನ್ನು ಬಂಧಿಸಿ, ಆದರೆ ನನ್ನ ಕುಟುಂಬವನ್ನು ಬಿಟ್ಟು ಬಿಡಿ," ಎಂದ.

ರೋಮನ್ನರು ಹಿಂದು ಮುಂದು ನೋಡಿದರು. ಅನಂತರ, "ಹೆಂಗಸರನ್ನು ಆಂಟೋನಿಯಾ ಗೋಪುರಕ್ಕೆ ಕರೆದುಕೊಂಡು ಹೋಗಿ. ಆದರೆ ಏನೂ ತೊಂದರೆ ಮಾಡಬೇಡಿ," ಎಂದು ಸೈನಿಕರಿಗೆ ಹೇಳಿದ.

ತನ್ನ ತಂಗಿ ಮತ್ತು ತಾಯಿಯನ್ನು ಸೈನಿಕರು ಎಳೆದೊಯ್ಯುತ್ತಿರುವುದನ್ನು ಜೂಡಾ ಕಣ್ಣು ಮಿಟುಕಿಸದೇ ಅವರು ಮರೆಯಾಗುವವರೆಗೂ ನೋಡಿದ.

ಆ ಸಮಯದಲ್ಲಿ ಜೂಡಾನ ಎಳೆತನ ಮಾಯವಾಗಿತ್ತು. ಯುವಕನ ದೃಢತೆ ಅವನಲ್ಲಿ ಮೂಡಿತ್ತು.

ಜೂಡಾನ ಕೈಗಳನ್ನು ಸೈನಿಕರು ಹಗ್ಗದಿಂದ ಕಟ್ಟುತ್ತಿರುವಾಗ ಕಣ್ಣುಗಳನ್ನು ಮುಚ್ಚಿ, "ಸೇಡು ತೀರಿಸಿಕೊಳ್ಳುವ ಕಾಲ ಬಂದಾಗ ಓ ದೇವರೆ, ಈ ಈ ಕೈಗಳು ಮೆಸ್ಸೆಲಾನ ಮೇಲೆ ಪ್ರಹಾರ ಮಾಡಲಿ," ಎಂದು ಮತ್ತೆ ಮತ್ತೆ ಹೇಳಿಕೊಂಡ.

ಹೆಂಗಸೊಬ್ಬಳ ಅಳುವಿನಿಂದ ಜೂಡಾ ಕಣ್ಣು ತೆರೆದ. ತನ್ನನ್ನು ಹಿಡಿದುಕೊಂಡಿದ್ದ ಸೈನಿಕರ ಬಂಧನವನ್ನು ಕಿತ್ತುಕೊಂಡು ಅಮ್ರಾ ಮನೆಯ ಹಿತ್ತಲಿನ ಕಡೆ ಓಡಿದಳು.

"ಅವಳು ಹೋಗಲಿ ಬಿಡು. ಮನೆಯನ್ನು ಸಂಪೂರ್ಣ ಮುಚ್ಚಿದ ನಂತರ ಹಸಿವಿನಿಂದ ಸಾಯುತ್ತಾಳೆ," ರೋಮನ್ ಅಧಿಕಾರಿಯೊಬ್ಬ ಹೇಳಿದ.

ಸೈನಿಕರು ಜೂಡಾ ಮತ್ತು ಆತನ ಸೇವಕರನ್ನು ಎಳೆದೊಯ್ದರು. ಮನೆಯ ಸಾಮಾನು ಸರಂಜಾಮನ್ನೆಲ್ಲಾ ಹೊರ ಸಾಗಿಸಿ "ಇದು ಚಕ್ರಾಧಿಪತಿಯ ಸ್ವತ್ತು," ಎಂಬ ಫಲಕವನ್ನು ಬಡಿದರು.

ಆಂಟೋನಿಯಾ ಗೋಪುರದ ಜೇಲಿನಲ್ಲಿ ಜೂಡಾನನ್ನು ಒಗೆದರು. ಆ ರಾತ್ರಿ ಚಳಿಯಲ್ಲಿ ಜೂಡಾ ಬರಿ ನೆಲದಲ್ಲೇ ಮಲಗಿದ. ಮಾರನೇ ದಿನ ಅವನ ಕೈಗಳನ್ನು ಕಟ್ಟಿ ಕುದುರೆಯ ಮೇಲೆ ಕುಳಿತ ಸೈನಿಕರು ಜೆರುಸಲೇಂನಿಂದ ನಜರೆತ್ ಕಡೆ ಎಳೆದೊಯ್ಯತೊಡಗಿದರು.

ನಡೆದೂ ನಡೆದೂ ಶಕ್ತಿಗುಂದಿದ ಜೂಡಾನ ಕಣ್ಣು ಮಂಜಾಗತೊಡಗಿತು. ಸೈನಿಕರು ಹಳ್ಳಿಯೊಂದರ ಬಾವಿ ಬಳಿ ನಿಂತು ನೀರು ಕುಡಿದು ಕುದುರೆಗಳಿಗೂ ನೀರು ನೀಡತೊಡಗಿದರು. ಬಾಯಾರಿಕೆಯಿಂದ ಸುಸ್ತಾಗಿದ್ದ ಜೂಡಾ ನೆಲಕ್ಕೆ ಕುಸಿದ. ಹಳ್ಳಿಗರಿಗೆ ಈ ಹುಡುಗನ ಬಗ್ಗೆ ಕರುಣೆ ಬಂದರೂ ಸೈನಿಕರಿಗೆ ಹೆದರಿ ಸಹಾಯ ಮಾಡಲಿಲ್ಲ. ಆದರೆ ಬಾವಿ ಬಳಿಗೆ ತನ್ನ ಮಗನೊಡನೆ ಬಂದ ಬಡಗಿಯೊಬ್ಬನಿಗೆ ಇಂಥ ಭಯವಿರಲಿಲ್ಲ.

"ಈ ಹುಡುಗ ಯಾವ ಅಪರಾಧ ಮಾಡಿದ?" ಎಂದು ನಜರೆತ್‌ನ ಬಡಗಿ ಜೋಸೆಫ್ ಕೇಳಿದ:

"ಅವನು ಕೊಲೆಗಾರ," ಸೈನಿಕನೊಬ್ಬ ಹೇಳಿದ.

"ಇಸ್ರೇಲಿಯೇ?" ಎಂದು ಜೋಸೆಫ್ ಕೇಳಿದ.

"ಅವನು ಯಹೂದಿ. ಜೆರುಸಲೇಂನ ಹರ್ ರಾಜಕುಮಾರ."

"ಅವನು ಮಾಡಿದ ತಪ್ಪೇನು?" ಜೋಸೆಫ್ ಕೇಳಿದ.

"ದಂಡಾಧಿಕಾರಿ ಗ್ರ್ಯಾಟಸ್‌ನ ತಲೆಗೆ ಗುರಿ ಹಿಡಿದು ಹೆಂಚು ಎಸೆದು ಕೊಲೆ ಮಾಡಲು ಯತ್ನಿಸಿದ."

"ಏನು ಶಿಕ್ಷೆ ಕೊಟ್ಟಿದ್ದಾರೆ?"

"ಸಾಯುವ ವರೆಗೂ ಹಡಗಿನ ಗುಲಾಮನಾಗಿರಬೇಕು."

"ದೇವರು ಅವನಿಗೆ ಸಹಾಯ ಮಾಡಲಿ," ಜೋಸೆಫ್ ಹೇಳಿದ.

ತಕ್ಷಣ ಜೋಸೆಫ್‌ನ ಮಗ ಬಾವಿಯ ಬಳಿ ಹೋದ. ಚರ್ಮದ ಚೀಲದಲ್ಲಿ ನೀರು ತುಂಬಿ ತಂದ ಜೂಡಾನಿಗೆ ಕುಡಿಯಲು ಕೊಟ್ಟ.

ಹುಡುಗನ ಕೈಯ ಸ್ಪರ್ಶದಿಂದ ಜೂಡಾನ ನಿಶ್ಶಕ್ತಿ ಕರಗಿತು. ಅವನು ಕಣ್ಣು ಬಿಟ್ಟು ಆ ಹುಡುಗನ ಹೊಳೆವ ನೀಲಿ ಕಣ್ಣುಗಳನ್ನೂ ಅದರೊಳಗಿನ ಕರುಣೆ, ಪ್ರೀತಿ, ವಾತ್ಸಲ್ಯದ ಸಾಗರ

ವನ್ನೂ ನೋಡಿದ.

ಜೂಡಾ ಬೆನ್-ಹರ್ ಮತ್ತು ನಜರೆತ್‌ನ ಜೀಸಸ್‌ನ ಪ್ರಥಮ ಭೇಟಿ ನಡೆದದ್ದು ಹೀಗೆ. ಜೂಡಾನ ಜೀವನದ ಮೇಲೆ ಮುಂದೆ ಭಾರೀ ಪ್ರಭಾವ ಬೀರಿದ್ದು ಇದೇ ಭೇಟಿ.

೩

ಹರ್ ಕುಟುಂಬ ಬಂಧನಕ್ಕೊಳಗಾಗಿ ಈಗಾಗಲೇ ಮೂರು ವರ್ಷ ಗತಿಸಿದ್ದವು.

ರೋಮನ್ ಸಾಮ್ರಾಜ್ಯ ಇನ್ನೂ ಹೆಚ್ಚು ವಿಸ್ತೃತವಾಗಿತ್ತು. ಆದರ ಹಡಗುಗಳು ವ್ಯಾಪಾರಕ್ಕಾಗಿ ಪ್ರಪಂಚದ ಎಲ್ಲೆಡೆ ಸುತ್ತಾಡುತ್ತಿದ್ದವು. ಆದರೆ ಅನೇಕ ದೇಶಗಳ ಹಡಗುಗಳ್ಳರು ಆಗಾಗ್ಗೆ ರೋಮನ್ ಹಡಗಿನ ಮೇಲೆ ದಾಳಿ ಮಾಡಿ ಸಾಮಾನುಗಳನ್ನು ಕೊಳ್ಳೆ ಹೊಡೆಯುತ್ತಿದ್ದರು.

ಕ್ವಿಂಟಸ್ ಅರ್‍ರಿಯಸ್ ಎಂಬ ರೋಮನ್ ಪ್ರಜಾರಕ್ಷಣಾಧಿಕಾರಿ ಗ್ರೀಕ್ ಹಡಗುಗಳ್ಳರನ್ನು ಮಟ್ಟ ಹಾಕಲು ನೇಮಿತವಾಗಿದ್ದ. ಆತನ ಸುಪರ್ದಿಗೆ ಹಡಗು ಪಡೆಯೊಂದನ್ನು ನೀಡಲಾಗಿತ್ತು.

ಹಡಗು ಪಡೆ ಯಾನ ಪ್ರಾರಂಭಿಸಿದ ತಕ್ಷಣ ಅರ್‍ರಿಯಸ್ ಹುಟ್ಟು ಹಾಕುವವರ ಕಡೆ ತನ್ನ ಗಮನ ಹರಿಸಿದ. ಈ ಹುಟ್ಟು ಹಾಕುವವರಲ್ಲಿ ಬಹುತೇಕ ಬಲಶಾಲಿಯಾದ ಶಿಕ್ಷೆಗೊಳಗಾದವರಿದ್ದರು. ಅವರ ಹೆಸರೇನು? ಎಲ್ಲಿಂದ ಬಂದರು. ಎಂದು ತಿಳಿಯುವ ಗೋಜಿಗೆ ಯಾರೂ ಹೋಗುತ್ತಿರಲಿಲ್ಲ. ಅವರ ಹೆಸರು ಹಿಡಿದೂ ಯಾರೂ ಕರೆಯುತ್ತಿರಲಿಲ್ಲ. ಅವರಿಗೆ ನೀಡಲಾದ ಸಂಖ್ಯೆಯಿಂದ ಅವರನ್ನು ಗುರುತಿಸಲಾಗುತ್ತಿತ್ತು. ತಮ್ಮ ಜೀವನದ ಕಾಲವನ್ನು ಹುಟ್ಟು ಹಾಕುವ ಕೋಲಿನ ಮುಂದೆ ಸವೆಸಿ ಕಡೆಗೊಂದು ದಿನ ನಿತ್ರಾಣದಿಂದ ಇಲ್ಲವೇ ಯುದ್ಧದಲ್ಲಿ ಮಡಿಯುತ್ತಿದ್ದ ಇವರ ಹೆಸರಿನ ಬಗ್ಗೆ ಯಾರಿಗೆ ತಾನೇ ಕಾಳಜಿ?

ಅರ್‍ರಿಯಸ್ ಬಲಶಾಲಿಯಾದವರು ಯಾರು, ನಿತ್ರಾಣವಾಗಿರುವವರು ಯಾರು ಎಂದು


# ರೂ, 1,00,000 ಮೌಲ್ಯದ ಬಹುಮಾನ ಗೆಲ್ಲಿರಿ

**ಪ್ರವೇಶ ಶುಲ್ಕವಿಲ್ಲ**

| | | |
|---|---|---|
| ೨೬ | ೩೧ | ೨೪ |
| ೨೫ | ೨೭ | ೨೯ |
| ೩೦ | ೨೩ | ೨೮ |

೧ನೇ ಬಹುಮಾನ : ರಾಜದೂತ ಮೋಟರ ಸೈಕಲ್ ಅಥವಾ ರೂ. ೧೦೦೦೦ ನಗದು. ಸಮಾಧಾನ ಬಹುಮಾನಗಳು : ಇತ್ತೀಚಿನ ಜಪಾನ ಮಾದರಿಯ ಆಮದಾದ ಟೂ-ಇನ್-ಒನ್ ರೂ. ೨೪೦/-ಕ್ಕೆ ಪರಸ್ಪರ ಲಾಭದಾಯಕ ಯೋಜನೆ (ಚೀನಪದ್ಧತಿ) ಮೇರೆಗೆ ನೀವು ಪಡೆಯಬಹುದು. ಮಾದರಿಯಲ್ಲಿಯಂತೆ

| | | |
|---|---|---|
| ೨೭ | | |
| | ೨೮ | |
| | | ೨೯ |

ಖಾಲಿ ಚೌಕ ಸಿದ್ಧ ಮಾಡಿ. ೨೪ ರಿಂದ ೩೨ ರೊಳಗಿನ ಅಂಕಿ ಬಳಸಿ. ಉದ್ದ, ಅಡ್ಡ ಹಾಗೂ ಕೋನಗಳಲ್ಲಿ ಹೇಗೆ ಕೂಡಿಸಿದರೂ ಒಟ್ಟು ೮೪ ಬರುವಂತೆ ರಚಿಸಿರಿ ಒಂದು ಅಂಕೆಯನ್ನು ಒಮ್ಮೆ ಮಾತ್ರ ಬಳಸಿ. ಪ್ರವೇಶಗಳು ಹದಿನೈದು ದಿನದೊಳಗೆ ತಲುಪಬೇಕು.

## GOOD LUCK CO. (KH)

136, New Layalpur, DELHI-110051.

ಹುಟ್ಟು ಹಾಕುವವರನ್ನು ಪರೀಕ್ಷಿಸುತ್ತಿದ್ದ. ಅರವತ್ತನೇ ಸಂಖ್ಯೆಯ ಕೈದಿಯ ಮೇಲೆ ಅವನ ದೃಷ್ಟಿ ಬಿತ್ತು. ಸ್ನಾಯುಗಳಿಂದ ಬಲವಾದ ದೇಹದ ಹುಡುಗನನ್ನು ತದೇಕ ಚಿತ್ತದಿಂದ ನೋಡಿದ.

ಆರ್ರಿಯಸ್ ತನ್ನನ್ನೇ ನೋಡುತ್ತಿದ್ದುದ್ದನ್ನು ಕಂಡ ಆತ ಗಂಭೀರನಾಗಿ ಆರ್ರಿಯಸ್‌ನನ್ನು ನೋಡಿದ.

ಹುಡುಗನ ದೈಹಿಕ ಲಕ್ಷಣ, ಬುದ್ಧಿವಂತಿಕೆಯ ನೋಟ ಮತ್ತು ಮುಖದಲ್ಲಿದ್ದ ಗಾಂಭೀರ್ಯವನ್ನು ಗಮನಿಸಿದ ಆರ್ರಿಯಸ್, 'ಈತ ಯಹೂದ್ಯ. ಈ ಹುಡುಗ ಹುಟ್ಟು ಹಾಕುವ ಕ್ಲಿಷ್ಟಕರವಾದ ಕೆಲಸವನ್ನು ತಾಳಿಕೊಂಡಿದ್ದಾನೆ, ಈತನ ಪೂರ್ವೇತಿಹಾಸ ತಿಳಿಯಬೇಕು,' ಎಂದುಕೊಂಡ. ಹುಟ್ಟು ಹಾಕುವವರ ಉಸ್ತುವಾರಿ ನೋಡಿ ಕೊಳ್ಳುವವನನ್ನು ಕರೆದ ಆರ್ರಿಯಸ್ ಆ ಹುಡುಗನ ಬಗ್ಗೆ ಕೇಳಿದ.

"ಹುಡುಗನಾದರೂ ಅತಿ ಬಲಶಾಲಿ. ಅಷ್ಟೇ ಅಲ್ಲ, ತುಂಬಾ ಬುದ್ಧಿವಂತ. ಜೊತೆಗೆ ಅತಿ ವಿನಯಿ. ಒಮ್ಮೆ ಆತ ಬಂದು ಪ್ರತಿಯೊಂದು ಸರದಿ ಬದಲಾದಾಗ ಹುಟ್ಟು ಹಾಕುವ ಜಾಗ ವನ್ನು ಎಡದಿಂದ ಬಲಕ್ಕೆ ಬಲದಿಂದ ಎಡಕ್ಕೆ ಬದಲಿಸುವಂತೆ ಕೇಳಿದ," ಎಂದ.

"ಹಾಗೆ ಕೇಳಲು ಕಾರಣವೇನು?" ಎಂದು ಆರ್ರಿಯಸ್ ಕೇಳಿದ.

"ಒಂದೇ ಕಡೆ ಹುಟ್ಟು ಹಾಕುತ್ತಿದ್ದರೆ ಹುಟ್ಟು ಹಾಕುವವರ ದೇಹ ಒಂದೇ ಕಡೆ ತಿರುಚಿ ಬಿಡುತ್ತದೆ. ತುರ್ತು ಸಮಯ ಬಂದಾಗ ಬೇರೆ ಕಡೆ ಅವರನ್ನು ಹುಟ್ಟು ಹಾಕಲು ಬಿಟ್ಟರೆ ಅವರು ನಿರುಪಯೋಗಿಗಳಾಗುತ್ತಾರೆ ಎಂದು ಅವನು ಹೇಳಿದ."

"ಒಳ್ಳೆ ಯೋಚನೆ. ನನ್ನ ಬಳಿ ಅವನನ್ನು ಕಳುಹಿಸು," ಎಂದು ಆರ್ರಿಯಸ್ ಆಜ್ಞಾಪಿಸಿದ.

ಅರವತ್ತನೇ ಕೈದಿ ಆರ್ರಿಯಸ್‌ನ ಬಳಿ ಬಂದ.

"ನಿಮ್ಮ ಉಸ್ತುವಾರಿಗಾರ ಹೇಳುತ್ತಾನೆ ನೀನು ತುಂಬಾ ಚೆನ್ನಾಗಿ ಹುಟ್ಟು ಹಾಕುತ್ತೀ-ಯಂತೆ," ಎಂದು ಆರ್ರಿಯಸ್ ಶ್ಲಾಘಿಸಿದ.

"ಅವರು ತುಂಬಾ ಒಳ್ಳೆಯವರು." ಎಂದ ಕೈದಿ.

"ಎಷ್ಟು ಕಾಲದಿಂದ ಈ ಕೆಲಸ ಮಾಡು-ತ್ತಿದ್ದಿ?" ಆರ್ರಿಯಸ್ ಕೇಳಿದ.

"ಒಂದು ದಿನವೂ ವಿಶ್ರಾಂತಿಯಿಲ್ಲದೆ ಮೂರು ವರ್ಷದಿಂದ ಸ್ವಾಮಿ."

"ಇದು ತುಂಬಾ ಕಷ್ಟವಾದ ಕೆಲಸ. ಎಷ್ಟೇ ಬಲಶಾಲಿಯಾ[illegible] ಒಂದೇ ವರ್ಷದಲ್ಲಿ ನಿತ್ರಾಣ ರಾಗುತ್ತಾರೆ. ನೀನೋ ಹುಡುಗ. ಮೂರು ವರ್ಷ ಹೇಗೆ ತಾಳಿಕೊಂಡೆ?"

"ನನ್ನ ದೃಢ ಧ್ಯೇಯ ನನ್ನನ್ನು ದೈಹಿಕವಾಗಿ ಬಲವಾಗಿಟ್ಟಿದೆ."

ಆರ್ರಿಯಸ್ ಸಂತೋಷಗೊಂಡ. "ನಿನ್ನ ದಿಟ್ಟ ಉತ್ತರ ಕೇಳಿದರೆ ನೀನು ಯಹೂದ್ಯನಿರ-ಬೇಕೆನಿಸುತ್ತದೆ."

"ನಾನು ಯಹೂದ್ಯ ಎಂದು ಹೇಳಿಕೊಳ್ಳಲು ಹೆಮ್ಮೆ. ಈಗ ನಾನೊಬ್ಬ ಗುಲಾಮ. ಆದರೆ ನನ್ನ ತಂದೆ ಸಮುದ್ರ ವ್ಯಾಪಾರಿ, ಶ್ರೀಮಂತ ರಾಜ-ಇತಾಮರ್, ಪ್ರಪಂಚವನ್ನೆಲ್ಲಾ ಸಮುದ್ರ ದಲ್ಲಿ ಸುತ್ತಿದ್ದ."

ಈ ಹೆಸರನ್ನು ಎಲ್ಲೋ ಕೇಳಿದ್ದೇನೆ ಅನಿಸಿತು, ಆರ್ರಿಯಸ್‌ಗೆ. ತಕ್ಷಣ ನೆನಪಾಯಿತು. "ಅಂದರೆ ನೀನು ಬೆನ್-ಹರ್! ಹಾಗಾದರೆ ಹಡಗಿನ ಗುಲಾಮ ಹೇಗಾದೆ?"

"ದಂಡಾಧಿಕಾರಿ ವಲೇರಿಯಸ್ ಗ್ರ್ಯಾಟಸ್-ನನ್ನು ಕೊಲ್ಲಲು ಯತ್ನಿಸಿದೆ ಎಂದು ಅಪರಾಧ ಹೊರಿಸಿ ಈ ಶಿಕ್ಷೆ ನೀಡಿದ್ದಾರೆ."

"ಓ! ಈ ಕತೆ ರೋಮ್ ನಗರದ ತುಂಬಾ ಹರಡಿದೆ. ಆದರೆ ನಿನ್ನ ಕುಟುಂಬವನ್ನು ನಿರ್ನಾಮ ಮಾಡಿರಬೇಕೆಂದುಕೊಂಡೆ," ಎಂದು ಆರ್ರಿಯಸ್ ಹೇಳಿದ.

ತನ್ನ ಕುಟುಂಬದ ಹೆಸರು ಹೇಳುತ್ತಲೇ ಬೆನ್-ಹರನ ಕಣ್ಣುಗಳು ತುಂಬಿ ಬಂದವು. "ಸ್ವಾಮಿ, ನನ್ನ ಕುಟುಂಬದ ಬಗ್ಗೆ ನಿಮಗೆ ಗೊತ್ತಿದ್ದರೆ ನನ್ನ ತಾಯಿ-ತಂಗಿ ಜೀವಂತ ಇದ್ದಾರೆಯೇ ತಿಳಿಸಿ. ಇದ್ದರೆ, ಎಲ್ಲಿದ್ದಾರೆ ಹೇಳಿ," ಎಂದು ಮೂರು ವರ್ಷದ ಹಿಂದಿನ ಘಟನೆಗಳನ್ನು ಹೇಳಿದ.

ಜೂಡಾ ಹೇಳುತ್ತಿರುವುದೆಲ್ಲ ನಿಜ ಎಂದು ಆರ್ರಿಯಸ್‌ಗೆ ಮನವರಿಕೆಯಾಯಿತು. ಅವನನ್ನು ದಾಸ್ಯದಿಂದ ವಿಮುಕ್ತಿ ಮಾಡುವ ಅಧಿಕಾರ ಇದ್ದರೂ ಈಗಲೇ ಮಾಡಬಾರದು ಎಂದು ಕೊಂಡ. ಗ್ರೀಕ್ ಹಡಗುಗಳ್ಳರನ್ನು ಸದೆಬಡಿಯಲು ಹಡಗು ನಡೆಸುವ ಬಲಶಾಲಿ ಹುಟ್ಟು ಹಾಕುವವರ ಅಗತ್ಯ ಅವನ ನಿರ್ಧಾರಕ್ಕೆ ಕಾರಣ. ಈ ಹುಡುಗನ ಮನೋಭಿಲಾಷೆಯನ್ನು ತಿಳಿದುಕೊಳ್ಳಲೆಂದು, "ನಿನಗೆ ಸ್ವಾತಂತ್ರ್ಯ ನೀಡಿದರೆ ಏನು ಮಾಡಬೇಕೆಂದಿದ್ದೀ?" ಎಂದು ಕೇಳಿದ.

"ನನ್ನ ತಂಗಿ–ತಾಯಿಯರನ್ನು ಹುಡುಕುತ್ತೇನೆ."

"ಅವರು ಸತ್ತು ಹೋಗಿದ್ದಾರೆ ಅಥವಾ ಅವರನ್ನು ನೀನು ಹುಡುಕಲಾಗಲಿಲ್ಲ ಎಂದಾದರೆ ಏನು ಮಾಡುತ್ತಿ?" ಆರ್ರಿಯಸ್ ಕೇಳಿದ.

"ರೋಮನ್ ಶಾಲೆಯಲ್ಲಿ ಸೈನಿಕ ತರಬೇತಿ ಪಡೆಯುತ್ತೇನೆ." ಜೂಡಾನ ಉತ್ತರ ಆರ್ರಿಯಸ್‌ಗೆ ಆಶ್ಚರ್ಯವುಂಟುಮಾಡಿತು. ಬಹುತೇಕ ಯಹೂದ್ಯರು ರೋಮನ್ನರನ್ನು ದ್ವೇಷಿಸುತ್ತಿದ್ದರು. ಯುದ್ಧದಲ್ಲಿ ರೋಮನ್ನರ ಕಡೆ ಹೋರಾಡಲು ನಿರಾಕರಿಸುತ್ತಿದ್ದರು. ಆದರೆ ಇವನೇಕೆ ಸೈನಿಕನಾಗುತ್ತಾನೆ? ಎಂಬ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ. ಆದರೆ ಮುಂದೆ ಪ್ರಶ್ನಿಸದೆ ಅವನನ್ನು ಕಳುಹಿಸಿಬಿಟ್ಟ.

ಕೆಲವು ದಿನಗಳ ನಂತರ ಹುಟ್ಟು ಹಾಕುವ ಕೈದಿಗಳ ಕಾಲಿಗೆ ಸರಪಳಿ ಬಿಗಿಯತೊಡಗಿದರು. ಹಡಗುಗಳ್ಳರೊಡನೆ ಯುದ್ಧ ಸಮೀಪಿಸಿದಾಗ ಹುಟ್ಟು ಹಾಕುವವರ ಕಾಲುಗಳಿಗೆ ಬೇಡಿ ತೊಡಿಸಲಾಗುತ್ತದೆ. ಯುದ್ಧಕಾಲದಲ್ಲಿ ಅವರು ತಪ್ಪಿಸಿಕೊಂಡು ಹೋಗಬಾರದೆಂದು ಈ ವಿಧಾನ. ಆದರೆ ಇದು ಅಪಾಯಕಾರಿ. ಏಕೆಂದರೆ ಹಡಗು ಮಗುಚಿದರೆ ಬೇಡಿ ತೊಡಿಸಿಕೊಂಡ ಎಲ್ಲರೂ ನೀರು ಪಾಲಾಗುವುದು ಖಂಡಿತ.

ಬೇಡಿ ತೊಡಿಸುತ್ತಿದ್ದವನು ಅರವತ್ತನೇ

ಸ್ಥಾಪನೆ : ೧೯೧೮

ಫೋನ್ | ಅಂಗಡಿ : ೨೨೧೬ | ಮನೆ : ೨೬೭೪

ಜವಳಿ ವ್ಯಾಪಾರದಲ್ಲಿ ಅಪೂರ್ವ ದಾಖಲೆ ನಿರ್ಮಿಸಿ ಮುನ್ನಡೆಯುತ್ತಿರುವ

ಟಿ. ಖಂಡೇರಾವ್ ಆ್ಯಂಡ ಸನ್ಸ್

ಕಲಾಬತ್ತು, ರೇಷ್ಮೆ ಜವಳಿ ವ್ಯಾಪಾರಿಗಳು

ಬಿ. ಹೆಚ್. ರಸ್ತೆ ಶಿವಮೊಗ್ಗ-೫೭೭೨೦೧.

T. Khanderao & Sons

Lace and Silk Cloth Merchants

B. H. Road, SHIMOGA-577201.

ಮಲೆನಾಡಿನ ಅತ್ಯಂತ ಹಿರಿಯ ಹಾಗೂ ಅತಿ ಹೆಚ್ಚಿನ ಮದುವೆ ಜವಳಿ ಹಾಗೂ ಅಪ್ಪಟ ರೇಷ್ಮೆ ಸೀರೆ ವಹಿವಾಟು ನಡೆಸುವ ಏಕೈಕ ಜವಳಿ ಸಂಸ್ಥೆ.

ಕೈದಿಯ ಬಳಿಗೆ ಬಂದಾಗ, "ಅವನಿಗೆ ಬೇಡಿ ತೊಡಿಸಬೇಡ," ಎಂದು ಆರ್ರಿಯಸ್ ಕೂಗಿ ಹೇಳಿದ.

ಅಂದು ರಾತ್ರಿ ಪಾಳಿಯ ನಡುವೆ ಜೂಡಾ ಬೆನ್-ಹರ್ ನಿರ್ಲಿಪ್ತನಾಗಿ ನಿದ್ರೆ ಮಾಡಿದ. ಅಂತೂ ತನ್ನ ಪ್ರಾರ್ಥನೆ ಈಡೇರುವ ಕಾಲ ಸನ್ನಿಹಿತವಾಗುತ್ತಿದೆ ಅನಿಸಿತು. ತಾನು ನಿರಪರಾಧಿ ಎಂದು ತಿಳಿದು ಆರ್ರಿಯಸ್ ಬಿಡುಗಡೆ ಮಾಡಬಹುದೆಂಬ ಆಸೆ ಚಿಗುರೊಡೆಯಿತು.

ಮರುದಿನ ಬೆಳಿಗ್ಗೆ, "ಹಡಗುಗಳ್ಳರು ಸಮೀಪದಲ್ಲೇ ಇದ್ದಾರೆ. ಎಚ್ಚರಗೊಳ್ಳಿ, ಸಿದ್ಧವಾಗಿ," ಎಂಬ ಕೂಗಿನಿಂದ ಜೂಡಾ ಎದ್ದು ಕುಳಿತ.

ಕಹಳೆಗಳು ಮೊಳಗಿದವು. ಹಡಗು ವೇಗ ಹೆಚ್ಚಿದಂತೆಲ್ಲಾ ಎಡಕ್ಕೆ ಬಲಕ್ಕೆ ತೂಗುಯ್ಯಾಲೆಯಾಡತೊಡಗಿತು, ಹುಟ್ಟುಗಳನ್ನು ನಿಯಂತ್ರಿಸುವುದರಲ್ಲಿ ಕೈದಿಗಳು ಸುಸ್ತಾದರು. ತಕ್ಷಣ ಹಡಗು ಏನೋ ವಸ್ತುವಿಗೆ ಬಡಿದು ಹಿಂದಕ್ಕೆ ಮುಂದಕ್ಕೆ ತೂಗಲಾರಂಭಿಸಿತು. ಹುಟ್ಟುಹಾಕುವವರು ತೊಡರಿಸಿ ಕೆಳಕ್ಕೆ ಬಿದ್ದರು. ಸೈನಿಕರು ಹತ್ತಿಯ ಉಂಡೆಗಳನ್ನು ಎಣ್ಣೆಯಲ್ಲಿ ಅದ್ದಿ ಹೊತ್ತಿಸಿ ಆ ದೊಂದಿಗಳನ್ನು ಶತ್ರು ಹಡಗಿನ ಮೇಲೆ ಎಸೆಯತೊಡಗಿದರು. ಆಕಾಶದಲ್ಲಿ ಬೆಂಕಿಯ ಚೆಂಡುಗಳು ನರ್ತನ ಮಾಡತೊಡಗಿದವು. ಹಡಗಿಗೂ ಬೆಂಕಿ ಬಿತ್ತು. ಬೇಡಿ ತೊಡಿಸಿಕೊಂಡಿದ್ದ ಕೈದಿಗಳು ಜೀವಸಹಿತ ಉರಿಯತೊಡಗಿದರು.

ರೋಮನ್ ಹಡಗಿನೊಳಕ್ಕೆ ಕಳ್ಳರು ಧುಮುಕಿದೊಡನೆ ಭಯ ಇಮ್ಮಡಿಯಾಯಿತು. ಜೂಡಾನಿಗಿದ್ದ ಭಯ ಆರ್ರಿಯಸ್‌ನ ಜೀವದ ಬಗ್ಗೆ. ಅವನೇನಾದರೂ ಸತ್ತರೆ ತನ್ನ ಕುಟುಂಬವನ್ನು ಪತ್ತೆ ಹಚ್ಚುವ ಕನಸು ಭಸ್ಮವಾಗುತ್ತದೆ ಎಂದು.

ಹಡಗು ತೂಗುಯ್ಯಾಲೆ ಆಡುತ್ತಲೇ ಇತ್ತು. ಜೂಡಾ ಮಲಗುವ ಕೋಣೆ ಬಿಟ್ಟು ಹಡಗಿನ ಅಟ್ಟವನ್ನೇರಿದ. ಹಡಗಿನ ಅನೇಕ ಭಾಗ ಹತ್ತಿಕೊಂಡು ಉರಿಯುತ್ತಿತ್ತು. ಕಳ್ಳರು ಮತ್ತು ಸೈನಿಕರ ನಡುವೆ ಖಡ್ಗ ಕಾಳಗ ಬಿರುಸಿನಿಂದ ಸಾಗಿತ್ತು.

ಇದ್ದಕ್ಕಿದ್ದಂತೆ ಅವನು ಏರುತ್ತಿದ್ದ ಅಟ್ಟ ಕುಸಿಯಿತು. ಮರದ ಹಲಗೆಗಳು ಪಟಪಟನೆ ಕಿತ್ತು ಬೀಳತೊಡಗಿದವು. ಜೂಡಾ ಹಿಮ್ಮುಖವಾಗಿ ನೀರಿಗೆ ಬಿದ್ದ.

ನೀರಿನಿಂದ ಮೇಲೆದ್ದು ತೇಲುತ್ತಿದ್ದ ಹಲಗೆಯ ತುಂಡನ್ನು ತಬ್ಬಿಕೊಂಡ. ಸಮುದ್ರ ಕಳ್ಳರ ಹಡಗುಗಳು ಅವನನ್ನು ಸುತ್ತುವರಿದವು. ತನ್ನ ಸಮೀಪ ನೀರಿನಲ್ಲಿ ಮುಳುಗುತ್ತಿದ್ದ ವ್ಯಕ್ತಿಯೊಬ್ಬನ ಕಡೆ ಗಮನ ಹರಿಸಿದ. ಅಲೆಗಳ ನಡುವೆ ಶಿರಸ್ತ್ರಾಣವಿದ್ದ ತಲೆಯೊಂದು ಮೇಲೆ ಬಂತು. ಜೂಡಾ ಅವನ ತಲೆಯನ್ನು ಹಿಡಿದು ಹಲಗೆಯ ಮೇಲಕ್ಕೆ ಎಳೆದುಕೊಂಡ. ಜೂಡಾನ ಮುಖ ಹೊಳೆಯಿತು. ಕ್ವಿಂಟಸ್ ಆರ್ರಿಯಸ್ ಸತ್ತಿರಲಿಲ್ಲ.

ಕೊನೆಗೆ ಯುದ್ಧ ಮುಗಿಯಿತು. ಆದರೆ ಹಡಗುಗಳು ಹೊರಡುವ ವೇಳೆಗೆ ರಾತ್ರಿಯಾಗಿತ್ತು. ಗೆದ್ದವರು ಕಳ್ಳರೋ ರೋಮನ್ನರೋ ಎಂಬ ಬಗ್ಗೆ ಬೆನ್-ಹರ್‌ಗೆ ತಿಳಿಯಲಿಲ್ಲ. ಆದರೆ ತಮಗೆ ಯಾರಾದರೂ ಸಹಾಯ ಮಾಡದಿದ್ದರೆ ಆರ್ರಿಯಸ್ ಸಾಯುತ್ತಾನೆಂದು ಬೆನ್-ಹರ್‌ಗೆ ತಿಳಿದಿತ್ತು. ದೇವರಲ್ಲಿ ಮೊರೆಯಿಡತೊಡಗಿದ.

ಸೂರ್ಯ ಉದಯಿಸಿದ. ಬೆಳಗಿನ ಹೊಂಗಿರಣಗಳು ಸಾವಿನ ನೆರಳಿನ ಮೇಲೆ ಬೆಳಕು ಬೀರಿದವು. ಸತ್ತವರ ದೇಹಗಳು ತೇಲುತ್ತಿದ್ದವು. ಹಡಗು ಚೂರಾಗಿತ್ತು. ಆದರೆ ಆರ್ರಿಯಸ್‌ಗೆ ನಿಧಾನವಾಗಿ ಪ್ರಜ್ಞೆ ಮರಳಿತು.

"ನಿನ್ನ ಜೀವನವನ್ನೆ ಪಣವೊಡ್ಡಿ ನನ್ನನ್ನು ರಕ್ಷಿಸಿದ್ದೀ." ಎಂದು ಆರ್ರಿಯಸ್ ಕ್ಷೀಣ ಧ್ವನಿಯಲ್ಲಿ ಹೇಳಿದ. "ಇದಕ್ಕಾಗಿ ನಾನು ಕೃತಜ್ಞ. ನಮ್ಮನ್ನು ಯಾರಾದರೂ ರಕ್ಷಿಸಿದರೆ ನಿನಗೊಂದು ಅತ್ಯುತ್ತಮ ಉಪಕಾರ ಮಾಡುತ್ತೇನೆ. ಆದರೆ ನೀನೂ ನನಗೊಂದು ಉಪಕಾರ ಮಾಡಬೇಕು," ಎಂದ.

"ನನ್ನ ಧರ್ಮ ಅದನ್ನು ಮಾಡಲು ಅನುಮೋದಿಸಿದರೆ ಮಾಡುತ್ತೇನೆ." ಜೂಡಾ ಹೇಳಿದ.

"ನಿನ್ನ ತಂದೆ ನನಗೆ ಚನ್ನಾಗಿ ಗೊತ್ತು. ಆತನ ಬಗ್ಗೆ ನನಗೆ ತುಂಬಾ ಗೌರವವಿತ್ತು."

ಬೆನ್-ಹರ್ ಆಶ್ಚರ್ಯಚಕಿತನಾದ. ಈ

ಮೊದಲು ಆರ್ರಿಯಸ್ ಈ ವಿಚಾರವಾಗಿ ಏನನ್ನೂ ಹೇಳಿರಲಿಲ್ಲ.

"ರಾಜ ಪದವಿ ಅಥವಾ ಶ್ರೀಮಂತ ವ್ಯಕ್ತಿಯಲ್ಲಿರುವವರು ಉಂಗುರ ಧರಿಸುವುದು ರೋಮ್‌ನಲ್ಲಿ ವಾಡಿಕೆ"— ತನ್ನ ಕೈ ತೋರಿಸುತ್ತಾ ಆರ್ರಿಯಸ್ ಹೇಳಿದ, "ನೀನು ನನ್ನ ಉಂಗುರವನ್ನು ಇಟ್ಟುಕೋ. ನಾನು ಸತ್ತರೆ ನಿನಗೆ ಉಪಯೋಗವಾಗುತ್ತದೆ. ನಾನು ತುಂಬಾ ಶ್ರೀಮಂತ. ಆದರೆ ನನಗೆ ಯಾರೂ ಇಲ್ಲ. ನನ್ನ ವ್ಯವಹಾರ ನೋಡಿಕೊಳ್ಳುವವನಿಗೆ ಈ ಉಂಗುರ ತೋರಿಸಿ ಅದು ನಿನಗೆ ಹೇಗೆ ಸಿಕ್ಕಿತೆಂದು ಹೇಳು. ನಿನಗೇನು ಬೇಕೋ ಅದನ್ನು ಕೇಳಿಕೋ".

ಸೂರ್ಯನ ಕಿರಣಕ್ಕೆ ಉಂಗುರ ಹೊಳೆಯುತ್ತಿತ್ತು. ತನ್ನ ಬೆರಳಿನಿಂದ ತೆಗೆದು ಆರ್ರಿಯಸ್ ಬೆನ್-ಹರ್‌ನ ಬೆರಳಿಗೆ ತೊಡಿಸಿದ.

"ನಾನು ಬದುಕಿದರೆ ನಿನ್ನನ್ನು ದಾಸ್ಯದಿಂದ ಮುಕ್ತಗೊಳಿಸಿ ನಿನ್ನ ಕುಟುಂಬವನ್ನು ಪತ್ತೆ ಹಚ್ಚಲು ಸಹಾಯ ಮಾಡುತ್ತೇನೆ. ಈಗ ನನಗೊಂದು ಉಪಕಾರ ಮಾಡಲು ವಚನ ನೀಡುವೆಯಾ?"

"ನಾನು ವಚನ ನೀಡುವ ಮೊದಲೇ ನಿಮ್ಮ ಇಚ್ಛೆಯೇನು ಹೇಳಿಬಿಡಿ. ಸ್ವಲ್ಪ ಇರಿ, ಉತ್ತರದ ಕಡೆಯಿಂದ ಹಡಗೊಂದು ಬರುತ್ತಿದೆ. ನಾವು ಬದುಕುಳಿದೆವು," ಎಂದ.

"ಹಡಗು ಬರುವ ಮುನ್ನ ನೀನು ನನಗೊಂದು ವಚನ ನೀಡಬೇಕು. ಆ ಹಡಗು ಶತ್ರುಗಳದ್ದಾಗಿದ್ದರೆ ನೀನು ನನ್ನನ್ನು ನೀರಿನೊಳಕ್ಕೆ ತಳ್ಳಿಬಿಡು. ನಾನು ಕಳ್ಳರಿಗೆ ಕೈದಿಯಾಗಲಾರೆ. ಧ್ವಂಸವಾದ ತನ್ನ ಹಡಗಿನ ಜೊತೆಯೇ ಅದರ ನಾಯಕನೂ ಸತ್ತ ಎಂಬ ಗೌರವಕ್ಕೆ ನಾನು ಪಾತ್ರನಾಗಬೇಕು. ಹಾಗೆಂದು ವಚನ ಕೊಡುವೆಯಾ?"

"ಕೊಡಲಾರೆ" ದೃಢವಾಗಿ ಹೇಳಿದ, "ನಾನು ಹಡಗಿನ ಗುಲಾಮನಾಗಿರಬಹುದು. ಆದರೆ ನಾನು ಯಹೂದ್ಯ ಕೂಡ. ಇಂಥ ಕಾರ್ಯ ಮಾಡಲು ಇಸ್ರೇಲ್ ಧರ್ಮ ಬಿಡುವುದಿಲ್ಲ. ನಿಮ್ಮ ವಚನ ಮತ್ತು ಉಂಗುರ ಎರಡನ್ನೂ ತೆಗೆದುಕೊಳ್ಳಿ" ಎಂದು ಬೆನ್-ಹರ್ ನೀಡಲು ಹೋದ.

ಆರ್ರಿಯಸ್ ಹಿಂತೆಗೆದುಕೊಳ್ಳಲು ನಿರಾಕರಿದಾಗ ಬೆನ್-ಹರ್ ಉಂಗುರವನ್ನು ಸಮುದ್ರದೊಳಕ್ಕೆ ಎಸೆದ.

"ಎಂಥ ಮೂರ್ಖ ಕೆಲಸ ಮಾಡಿದೆ. ಈಗ ನಾವಿಬ್ಬರೂ ನಾಶವಾಗುತ್ತೇವೆ," ಎಂದ ಆರ್ರಿಯಸ್.

"ಇರಬಹುದು, ಆದರೆ ನನ್ನ ಸಾವಿನೊಡನೆ ನೀವು ತೋರಿದ ಕರುಣೆ ವಾತ್ಸಲ್ಯವನ್ನು ಒಯ್ಯುತ್ತೇನೆ. ನನ್ನ ಮೂರು ವರ್ಷದ ಗುಲಾಮ ಜೀವನದಲ್ಲಿ ಸಹಾಯ ಮಾಡಿದ ವ್ಯಕ್ತಿಗಳು ಇಬ್ಬರೆ. ಒಂದು ನೀವು, ಮತ್ತೊಬ್ಬ ನಜರೆತ್ ಬಾವಿಯ ಬಳಿ ಹುಡುಗನೊಬ್ಬ"

ಬೆನ್-ಹರ್ ಹತ್ತಿರ ಬರುತ್ತಿದ್ದ ಹಡಗಿನ ಕಡೆ ನೋಡಿದ.

"ಆ ಹಡಗಿನ ಪಕ್ಕದಲ್ಲಿ ದೋಣಿಯಿದೆ. ಬದುಕಿರುವವರನ್ನು ಅದರಲ್ಲಿ ಎತ್ತುತ್ತಿದ್ದಾರೆ" ಎಂದು ಆರ್ರಿಯಸ್‌ಗೆ ಹೇಳಿದ.

"ಅಂದರೆ ಅದು ರೋಮನ್ನರ ಹಡಗು," ಎಂದು ಆರ್ರಿಯಸ್ ಸಂತೋಷದಿಂದ ಚೀರಿದ, "ಸಮುದ್ರಗಳ್ಳರು ಬದುಕಿರುವವರನ್ನು ರಕ್ಷಿಸುವುದಿಲ್ಲ. ನೀನು ನಿನ್ನ ದೇವರಿಗೆ ವಂದನೆ ಸಲ್ಲಿಸು. ನಾನು ಚಕ್ರವರ್ತಿಗೆ ಸಲ್ಲಿಸಿದ ಸೇವೆಗಾಗಿ ಚಕ್ರವರ್ತಿ ರೋಮ್ ರಾಜ್ಯದ ಡೂಮ್‌ವಿರ್ ಅಧಿಕಾರವನ್ನು ನೀಡುತ್ತಾರೆ. ನಿನ್ನನ್ನು ರೋಮ್‌ಗೆ ಕರೆದುಕೊಂಡು ಹೋಗಿ ನನ್ನ ಮಗನನ್ನಾಗಿ ಮಾಡಿಕೊಳ್ಳುತ್ತೇನೆ. ಹಡಗನ್ನು ಕೂಗು," ಎಂದು ಆರ್ರಿಯಸ್ ಹೇಳಿದ.

ಬೆನ್-ಹರ್ ರಕ್ಷಣೆಗಾಗಿ ಕೂಗಿದ. ಹಡಗು ಬಂತು. ಆರ್ರಿಯಸ್ ಮತ್ತು ಜೂಡಾನನ್ನು ಬಲವಾದ ಕೈಗಳು ಹಡಗಿನೊಳಕ್ಕೆ ಎಳೆದುಕೊಂಡವು. ರೋಮನ್ ಅಧಿಕಾರಿಗಳು ಆರ್ರಿಯಸ್‌ಗೆ ಹಾರ್ದಿಕ ಸ್ವಾಗತ ಕೋರಿದರು. ಹಡಗುಗಳ್ಳರ ಇಪ್ಪತ್ತು ಹಡಗುಗಳನ್ನು ವಶಪಡಿಸಿಕೊಂಡಿರುವುದಾಗಿ ಹೇಳಿದರು.

ಆರ್ರಿಯಸ್ ಸಂತಸದಿಂದ ಸುದ್ದಿ ಕೇಳಿದ, ಅನಂತರ ಜೂಡಾನನ್ನು ತೋರಿಸಿ, "ಗೆಳೆಯರೇ, ಈ ಹುಡುಗ ಈಗ ನನ್ನ ಮಗ ಮತ್ತು

ಉತ್ತರಾಧಿಕಾರಿ. ಈ ದಿನದಿಂದ ಆತ 'ಆರ್ರಿಯಸ್ ಪುತ್ರ' ಎಂದೇ ಪರಿಚಿತನಾಗಬೇಕು," ಎಂದ.

೪

ಮತ್ತೆ ಒಂಭತ್ತು ವರ್ಷ ಕಳೆದವು. ಬೆನ್-ಹರ್ ಕ್ವಿಂಟಸ್ ಆರ್ರಿಯಸ್‌ನ ಮಗನಾಗಿ ಒಳ್ಳೆಯ ಶಿಕ್ಷಣ ಪಡೆದ. ಉತ್ತಮ ಕ್ರೀಡಾಪಟು ಎಂದು ಪ್ರಸಿದ್ಧಿ ಪಡೆದ. ಸಮರ ತಂತ್ರಕಲೆಯನ್ನು ಕರಗತ ಮಾಡಿಕೊಂಡ. ಆದರೂ ಬೆನ್-ಹರ್ ಮಾನಸಿಕವಾಗಿ ತನ್ನ ಧರ್ಮಕ್ಕೆ ನಿಷ್ಠನಾಗಿ ಉಳಿದುಕೊಂಡ. ತನ್ನ ತಂಗಿ ಮತ್ತು ತಾಯಿಯು-ರನ್ನು ಹುಡುಕುವ ಆಸೆಯನ್ನು ಬಾಡಿಸದೇ ಉಳಿಸಿಕೊಂಡಿದ್ದ. ತಂಗಿ ಮತ್ತು ತಾಯಿಯರ ಅಗಲಿಕೆಯ ನೋವಿನಿಂದ ಜರ್ಜರಿತನಾಗಿದ್ದ ಅವನನ್ನು ಕ್ವಿಂಟಸ್ ಆರ್ರಿಯಸ್‌ನ ಮರಣ ಮತ್ತಷ್ಟು ಗಾಸಿಗೊಳಿಸಿತು. ತನ್ನ ಎರಡನೇ ತಂದೆ ಎಂದು ಅವನು ಭಾವಿಸಿದ್ದ.

ಆರ್ರಿಯಸ್‌ನ ಮರಣದಿಂದ ಆತನ ಸಮಸ್ತ ಆಸ್ತಿಯೆಲ್ಲಾ ಬೆನ್-ಹರ್‌ಗೆ ದಕ್ಕಿತು. ಈ ಶ್ರೀಮಂತಿಕೆಯಿಂದ ಆತ ಸಮರ ಕಲೆಯನ್ನು ಕಲಿಯಲು ಎಲ್ಲಾ ಕಡೆ ಪ್ರವಾಸ ಮಾಡುತ್ತಿದ್ದ.

ಹೀಗೆ ಒಮ್ಮೆ ಆಂಟಿಯೋಕ್ ಕಡೆ ಹೋಗು-ತ್ತಿದ್ದಾಗ ತನ್ನ ಕುಟುಂಬದ ಬಗ್ಗೆ ಮೊದಲ ಮಾಹಿತಿ ಸಿಕ್ಕಿತು. ಬೆನ್-ಹರ್ ತನ್ನ ಸಹಪ್ರಯಾ ಣಿಕನಾದ ಸ್ಯಾನ್ ಬ್ಯಾಲಟ್ ಎಂಬ ಯಹೂದಿ-ನೊಡನೆ ಹಡಗಿನಲ್ಲಿ ಪ್ರಯಾಣಿಸುತ್ತಿದ್ದ. ಮಾತು-ಕತೆಯ ನಡುವೆ ಹಡಗಿನ ಮಾಲೀಕನಾರು ಎಂದು ಬೆನ್-ಹರ್ ಸ್ಯಾನ್ ಬ್ಯಾಲಟ್‌ನನ್ನು ಕೇಳಿದ.

"ಆತನ ಹೆಸರು ಸೈಮೋನಿಡ್ಸ್," ಎಂದ ಸ್ಯಾನ್ ಬ್ಯಾಲಟ್, "ಆತ ಆಂಟಿಯೋಚ್‌ನ ಶ್ರೀಮಂತ ವಣಿಕ. ಆತನಿಗೆ ಇನ್ನೂ ಅನೇಕ ಹಡಗುಗಳೂ ಇತರ ವ್ಯಾಪಾರಗಳೂ ಉಂಟು," ಎಂದು ಹೇಳಿದ.

ಬೆನ್-ಹರ್ ಈ ಹಿಂದೆ ಎಲ್ಲೋ ಸೈಮೋ-ನಿಡ್ಸ್‌ನ ಹೆಸರನ್ನು ಕೇಳಿದ್ದ. ಆದರೆ ಎಲ್ಲಿ ಎಂದು ಸ್ಪಷ್ಟವಾಗಲಿಲ್ಲ.

"ಅವನು ಅದು ಹೇಗೆ ಅಷ್ಟು ದೊಡ್ಡ ಶ್ರೀಮಂತನಾದ"-? ಬೆನ್-ಹರ್ ಪ್ರಶ್ನಿಸಿದ.

"ಅದೊಂದು ದೊಡ್ಡ ಕತೆ. ಜೆರುಸಲೇಂನಲ್ಲಿ ಬಹಳ ಹಿಂದೆ ಹರ್ ಎಂಬ ರಾಜನಿದ್ದ. ಹತ್ತಾರು ಕಡೆ ವ್ಯಾಪಾರ ಮಾಡುತ್ತಿದ್ದ. ಆಂಟಿಯೋಕ್‌ನ ತನ್ನ ಮಳಿಗೆಯ ಉಸ್ತುವಾರಿ ನೋಡಿ ಕೊಳ್ಳಲು ಹರ್ ತುಂಬಾ ಪ್ರಾಮಾಣಿಕನಾಗಿದ್ದ ಈ ಸೈಮೊನೀಡ್ಸ್‌ನನ್ನು ಬಿಟ್ಟಿದ್ದ. ರಾಜ ಸಮುದ್ರದಲ್ಲಿ ಮುಳುಗಿದ ಮೇಲೆ ಸೈಮೋ ನಿಡ್ಸ್ ವ್ಯಾಪಾರವನ್ನು ರಾಜನ ಕುಟುಂಬದ ಪರ ಮುಂದುವರಿಸಿ ಯಶಸ್ವಿಯಾದ. ಆದರೆ ರಾಜನ ಕುಟುಂಬಕ್ಕೆ ಗ್ರಹಗತಿ ಸರಿಯಿರಲಿಲ್ಲ. ಆತನ ಒಬ್ಬನೇ ಮಗ, ದಂಡಾಧಿಕಾರಿ ವೆಲೇರಿ-ಯಸ್ ಗ್ರ್ಯಾಟಸ್‌ನನ್ನು ಕೊಲ್ಲಲು ಯತ್ನಿಸಿದ ಆಪಾದನೆಯ ಮೇರೆಗೆ ಹಡಗಿನ ಗುಲಾಮನಾದ. ರೋಮನ್ನರು ಹರ್ ಅರಮನೆಯನ್ನು ವಶ-ಮಾಡಿಕೊಂಡರು. ಅನಂತರ ಆ ಕುಟುಂಬದ ಸದಸ್ಯರು ಏನಾದರೋ ಗೊತ್ತಿಲ್ಲ. ರೋಮನ್ನ-ರಿಗೂ ಆ ಮನೆತನದವರಿಗೆ ಸೇರಿದ ಹಣವನ್ನು ಪತ್ತೆ ಹಚ್ಚಲಾಗಲಿಲ್ಲ. ಹರ್ ಕುಟುಂಬದ ಹಣ ಸೈಮೋನಿಡ್ಸ್ ಬಳಿ ಇರಬೇಕೆಂದು ಗ್ರ್ಯಾಟಸ್ ಎಣಿಸಿದ. ಅದಕ್ಕಾಗಿ ಆತ ಸೈಮೋನಿಡ್ಸ್‌ಗೆ ಬಗೆ ಬಗೆಯ ಹಿಂಸೆ ಕೊಟ್ಟ. ಆದರೆ ಈ ಹಿಂಸೆಯಿಂದ ಸೈಮೊನಿಡ್ಸ್ ಹೆಳವನಾದವನೇ ಹೊರತು ಕುಟುಂಬದ ಹಣದ ಬಗ್ಗೆ ಬಾಯಿ ಬಿಡಲಿಲ್ಲ. ಆದರೆ ಆತ ಸಂಪಾದಿಸಿದ ಹಣ ಎಲ್ಲಿ ಇಟ್ಟಿದ್ದಾನೆ ಎಂಬುದು ಇನ್ನೂ ನಿಗೂಢ."

ಸೈಮೋನಿಡ್ಸ್‌ಗೆ ತನ್ನ ಕುಟುಂಬದ ಬಗ್ಗೆ ಗೊತ್ತಿರಬೇಕೆಂದು ಬೆನ್-ಹರ್ ತರ್ಕಿಸಿ ಪುಲಕಿತ-ನಾದ. ಅಷ್ಟರಲ್ಲಿ ಆಂಟಿಯೋಕ್‌ಗೆ ಹಡಗು ಬಂತು. ಸೈಮೋನಿಡ್ಸ್ ಮನೆಯ ವಿಳಾಸವನ್ನು ಸ್ಯಾನ್ ಬ್ಯಾಲಟ್‌ನಿಂದ ಬೆನ್-ಹರ್ ಪಡೆದು ಕೊಂಡ.

ಸೈಮೋನಿಡ್ಸ್‌ನ ಮನೆ ಬಂದರಿಗೆ ಹತ್ತಿರದಲ್ಲೇ ಇತ್ತು. ಆತನ ಮನೆಗೆ ಬಂದಾಗ ಸೇವಕನೊಬ್ಬ ಮಹಡಿಯ ಮೇಲಿದ್ದ ಉಪ್ಪರಿಗೆಗೆ ಕರೆದುಕೊಂಡು ಹೋದ. ಎತ್ತರವಾದ ಕುರ್ಚಿಯಲ್ಲಿ ಹಾಕಿದ್ದ ಮೆತ್ತೆಯ ಮೇಲೆ ತಿರುಚಿಕೊಂಡ ದೇಹದ ಬಿಳಿ ಕೂದಲಿನ ವ್ಯಕ್ತಿಯೊಬ್ಬ ಕುಳಿತಿದ್ದ. ಆತನ ಹಿಂದೆ ಕರಿಗೂದಲಿನ ಸುಂದರ ತರುಣಿಯೊಬ್ಬಳು

ನಿಂತಿದ್ದಳು. ಅವಳನ್ನು ನೋಡುತ್ತಿದ್ದಂತೆಯೇ ಬೆನ್-ಹರ್‌ಗೆ ತನ್ನ ತಂಗಿಯ ನೆನಪು ಮರುಕಳಿಸಿತು.

"ಇಸ್ರೇಲಿನ ದೇವರಿಂದ ಶಾಂತಿ ತಮಗೆ ಲಭಿಸಲಿ," ಎಂದು ಬೆನ್-ಹರ್ ಹೇಳಿದ. ಮುದುಕ ವಿರೂಪಗೊಂಡಿದ್ದ ತನ್ನ ಕೈಯನ್ನು ಎತ್ತಿ ಸ್ವಾಗತ ಕೋರಿ." ನಾನು ಜರುಸಲೇಂನಲ್ಲಿ ಹರ್ ಅರಮನೆಯ ರಾಜನಾಗಿದ್ದ ಇತಾಮರ್‌ನ ಮಗ ಜೂಡಾ," ಎಂದು ಹೇಳಿದ.

ಸೈಮೋನಿಡ್ಸ್ ಈ ಮಾತು ಕೇಳಿ ಬೆರಗಾದ. ಹರ್ ಕುಟುಂಬ ಸಂಪೂರ್ಣ ನಾಶವಾಯಿತೆಂದೇ ಬಗೆಗಿದ್ದ. ಆದರೂ ಅವನು ನಿರ್ಲಿಪ್ತತೆಯಿಂದ "ಜೆರುಸಲೇಂನ ರಾಜರಿಗೆ ಇಲ್ಲಿ ಯಾವಾಗಲೂ ಸ್ವಾಗತ. ತಾವು ಬಂದ ಸಮಾಚಾರವೇನು ಹೇಳಿ," ಎಂದ.

"ನಿಮ್ಮ ಬಗ್ಗೆ ತಿಳಿದದ್ದು ಇಂದು ಹಡಗಿನಲ್ಲಿ ಪ್ರಯಾಣಿಸುತ್ತಿದ್ದಾಗ. ನಮ್ಮ ತಂದೆಗೆ ಅಂತ್ಯ ಕಾಲದಲ್ಲಿ ನಿಮ್ಮ ಹೆಸರಿನ ಒಬ್ಬ ನಂಬಿಗಸ್ತ ಸೇವಕನಿದ್ದನಂತೆ ಎಂದು ಇವತ್ತು ಗೊತ್ತಾಯಿತು," ಎಂದು ಬೆನ್-ಹರ್ ಹೇಳಿದ.

ರೋಮನ್ನರು ಸೈಮೋನಿಡ್ಸ್‌ಗೆ ಕೊಟ್ಟಿದ್ದ ಕಿರುಕುಳ ಅಷ್ಟಿಷ್ಟಲ್ಲ. ಇದರಿಂದಾಗಿ ಯಾರೇ ಅಪರಿಚಿತರು ಬಂದರೂ ಆತ ಸಹಜವಾಗಿಯೇ ಸಂದೇಹದಿಂದ ನೋಡುತ್ತಿದ್ದ. ಆದುದರಿಂದ ಒಂದೇ ಮಾತಿಗೆ ಬೆನ್-ಹರ್‌ನ ಮೇಲೆ ನಂಬಿಕೆ ಬಾರದೆ. "ನೀನು ಇಂಥವರ ಮಗನೇ ಎಂದು ಸಾಬೀತುಪಡಿಸಲು ಏನಾದರೂ ನಿನ್ನ ಬಳಿ ಲಿಖಿತ ದಾಖಲೆ ಇದೆಯೇ?" ಎಂದು ಕೇಳಿದ.

ಹಡಗಿನಲ್ಲಿ ಗುಲಾಮನಾಗಿ ದುಡಿದ ಮೇಲೆ ಶ್ರೀಮಂತರಿಗಿರಬೇಕಾದ ಮುಖಲಕ್ಷಣ ಬೆನ್-ಹರ್‌ನಲ್ಲಿ ಮಾಯವಾಗಿತ್ತು. ಈಗ ಅವನು ರೋಮ್‌ನಲ್ಲಿ ಅತ್ಯುತ್ತಮ ದರ್ಜೆಯ ಅಧಿಕಾರಿಯಾಗಿದ್ದ ಕ್ವಿಂಟಸ್ ಆರ್ರಿಯುಸ್‌ನ ಮಗನೆಂದೇ ಗುರುತಿಸಲ್ಪಡುತ್ತಿದ್ದ. ಆದುದರಿಂದ ಬೆನ್-ಹರ್, "ಸೈಮೋನಿಡ್ಸ್, ನಾನು ಯಾರು ಎಂದು ಹೇಳಲು ಪುರಾವೆಯೇನೂ ಇಲ್ಲ. ಆದರೆ ನನ್ನ ಕತೆಯನ್ನು ದಯವಿಟ್ಟು ಕೇಳಿ," ಎಂದ.

ಬೆನ್-ಹರ್‌ನ ಜೀವನದ ಕತೆಯನ್ನು ಸೈಮೋನಿಡ್ಸ್ ಮತ್ತು ಆತನ ಹಿಂದೆ ನಿಂತಿದ್ದ ಆತನ ಮಗಳು ಎಸ್ತರ್ ಆಸಕ್ತಿಯಿಂದ ಕೇಳಿದರು. ಕೊನೆಯಲ್ಲಿ ಬೆನ್-ಹರ್ ಹೇಳಿದ, "ನಿನ್ನ ಸ್ವಾತಂತ್ರ್ಯ ಅಥವಾ ಶ್ರೀಮಂತಿಕೆಯನ್ನು ಒಯ್ಯಲು ನಾನಿಲ್ಲಿ ಬರಲಿಲ್ಲ. ಹರ್ ರಾಜರಿಗೆ ಸೇರಬೇಕಾದ ಆಸ್ತಿಯ ಬಗ್ಗೆ ನನಗೆ ಆಸಕ್ತಿಯಿಲ್ಲ. ನಿಮಗೆ ನನ್ನ ತಂಗಿ-ತಾಯಿಯರ ಬಗ್ಗೆ ಏನಾದರೂ ಗೊತ್ತಿದೆಯೇ ಎಂದ ತಿಳಿಯಲು ಬಂದೆ," ಎಂದು.

ಸೈಮೋನಿಡ್ಸ್ ತಲೆಯನ್ನು ಅಲ್ಲಾಡಿಸಿ, "ಇಲ್ಲ. ಹರ್ ಕುಟುಂಬದ ಸದಸ್ಯರನ್ನು ಹುಡುಕಲು ನಾನು ತುಂಬಾ ಪ್ರಯತ್ನಿಸಿದೆ. ಆ ಘಟನೆ ನಡೆದ ಮೇಲೆ ಅವರು ಏನಾದರು ಎಂದು ಯಾರೂ ಹೇಳಲಿಲ್ಲ," ಎಂದ ದುಃಖದಿಂದ.

ಬೆನ್-ಹರ್‌ಗೆ ತುಂಬಾ ನಿರಾಸೆಯಾಯಿತು. ಇದ್ದ ಒಂದು ಭರವಸೆಯೂ ಸಾಯತೊಡಗಿತು. "ನಿಮಗೆ ತೊಂದರೆ ಕೊಟ್ಟಿದ್ದಕ್ಕಾಗಿ ಕ್ಷಮಿಸಿ. ನಾನು ಇನ್ನು ಬದುಕಬೇಕಿರುವುದು... ಸೇಡು ತೀರಿಸಿಕೊಳ್ಳಲು," ಎಂದು ವಂದಿಸಿ ಹೊರನಡೆದ.

ಬೆನ್-ಹರ್ ಹೊರಗೆ ಹೋದನಂತರ ಸೈಮೋನಿಡ್ಸ್ ತನ್ನ ಪ್ರಾಮಾಣಿಕ ಸೇವಕನಾದ ಮಲ್ಲುಚ್‌ನನ್ನು ಬರಹೇಳಿದ. ಸಾದಾ ಉಡುಪು ಧರಿಸಿದ್ದ ದೃಢಕಾಯನಾದ ಮಲ್ಲುಚ್ ತಕ್ಷಣ ಬಂದ.

"ನಾನು ಹೇಳುವುದನ್ನು ಸರಿಯಾಗಿ ಕೇಳು ಮಲ್ಲುಚ್. ಬಿಳಿ ಉಡುಪು ಧರಿಸಿದ್ದ ಸುಂದರ ದೇಹದ ಇಸ್ರೇಲಿಯಂತೆ ಕಾಣುವ ಯುವಕನೊಬ್ಬ ಈಗ ತಾನೆ ಈ ಮನೆಯಿಂದ ಹೊರ ಹೋಗುತ್ತಿದ್ದಾನೆ. ಅವನನ್ನು ಹಿಂಬಾಲಿಸು. ಅವನು ಎಲ್ಲಿಗೆ ಹೋಗುತ್ತಾನೆ, ಏನು ಮಾಡುತ್ತಾನೆ ಎಂಬುದನ್ನು ನನಗೆ ತಿಳಿಸು. ಅವಕಾಶ ಸಿಕ್ಕರೆ ಅವನ ಗೆಳೆತನ ಸಂಪಾದಿಸು. ಆದರೆ ನೀನು ನನ್ನ ಬಳಿ ಕೆಲಸ ಮಾಡುತ್ತಿದ್ದೇನೆ ಎಂಬುದನ್ನು ಹೇಳಬೇಡ. ಬೇಗ ಹೊರಡು," ಎಂದ ಸೈಮೋನಿಡ್ಸ್.

ಮಲ್ಲುಚ್ ಹೊರ ನಡೆದ. ಸೈಮೋನಿಡ್ಸ್ ಮಗಳು ಎಸ್ತರ್ ಕಡೆ ತಿರುಗಿದ. ಬೆನ್-ಹರ್‌ನ ಕತೆ ಕೇಳಿದ ನಂತರ ತಂದೆ ಬೇಹುಗಾರಿಕೆಗೆ ಮಲ್ಲುಚ್‌ನನ್ನು ಕಳುಹಿಸಿದ ಮೇಲೆ ತಮ್ಮ

ಮನೆತನದ ಬಗೆಗೆ ಅನೇಕ ಸಂದೇಹಗಳು ಅವಳ ತಲೆ ತಿನ್ನುತ್ತಿದ್ದವು.

ಮಗಳ ಪ್ರಶ್ನಾರ್ಥಕ ದೃಷ್ಟಿಯನ್ನು ಅರ್ಥ-ಮಾಡಿಕೊಂಡ ಸೈಮೋನಿಡ್ಸ್, "ಹೇಳುತ್ತೇನೆ ಕೇಳು ಮಗು. ನನ್ನ ತಂದೆ ತಾಯಿಯರು ಹಿಬ್ರೂ ಸೇವಕರು. ಹೆರಾಡ್ ರಾಜನ ಜೀತದಾಳುಗಳಾಗಿದ್ದರು. ಅವರು ನನ್ನನ್ನು ಹರ್ ರಾಜ ಇತಾಮರ್‌ಗೆ ಮಾರಿದರು. ಆತ ಮೋಸೆಸ್ ನಿಯಮಕ್ಕನುಸಾರ ಏಳು ವರ್ಷದ ನಂತರ ದಾಸ್ಯದಿಂದ ವಿಮುಕ್ತಿ ನೀಡಿದ. ನಾನು ಅನಂತರ ಆತನ ವ್ಯವಹಾರ ನೋಡಿಕೊಳ್ಳುವ ಮುಖ್ಯಸ್ಥನಾಗಿ ಆತನ ಸೇವೆ ನಡೆಸುತ್ತಾ ಬಂದೆ. ನಿಮ್ಮ ತಾಯಿ ಕೂಡ ಆತನ ಸೇವಕಿಯರಲ್ಲಿ ಒಬ್ಬಳು.

"ಇತಾಮರ್ ಸಮುದ್ರದಲ್ಲಿ ನಿಧನ ಹೊಂದಿದಾಗ ಆತನ ವಿಧವೆ ಪತ್ನಿ ಕುಟುಂಬದ ವಹಿವಾಟು ನಡೆಸುವಂತೆ ನನಗೇ ಹೇಳಿದರು. ನಾನು ಹತ್ತು ವರ್ಷ ಯಶಸ್ವಿಯಾಗಿ ವ್ಯಾಪಾರ ನಡೆಸಿದೆ. ಅನಂತರ ಆ ದುರದೃಷ್ಟ ಘಟನೆ ನಡೆಯಿತು. ಆ ದುಷ್ಟ ಗ್ರ್ಯಾಟಸ್ ಹುಡುಗನನ್ನು ಹಡಗಿನ ಗುಲಾಮಗಿರಿ ಮಾಡಲು ಶಿಕ್ಷೆ ನೀಡಿದ.


## ಸುವರ್ಣ ಸುಸಂಧಿ! ಅತಿ ಶೀಘ್ರ ಪರಿಹಾರ!!

**ದಾಂಪತ್ಯ ಸಮಸ್ಯೆಗೆ ನಂಬುಗೆಯ ಚಿಕಿತ್ಸೆ**

**ವಿವಾಹದ ಮೊದಲು** ಹಾಗೂ **ನಂತರದ ನಿಶ್ಯಕ್ತಿಗೆ ಉತ್ಕೃಷ್ಟ ಪರಿಹಾರ!**



ಸ್ವಪ್ನದೋಷ, ಶೀಘ್ರಸ್ಖಲನ, ನರಗಳ ದೌರ್ಬಲ್ಯತೆ ಚರ್ಮರೋಗ, ಹೊಟ್ಟೆನೋವು, ಬಿಳಿತೊನ್ನು, ಬಿಳಿಸೆರಗು ಮುಟ್ಟುದೋಷ, ಲೈಂಗಿಕವ್ಯಾಧಿ ಹಾಗೂ ಮೂಲವ್ಯಾಧಿಗೆ ಇಂದೇ ತಜ್ಞರಾದ, **ಡಾ. ಎಸ್. ಎಂ. ಯಾದಗೀರ** (Govt. Regd) ಇವರನ್ನು ಭೆಟ್ಟಿಯಾಗಿ.

**ಭೆಟ್ಟಿಯ ವೇಳೆ : ಮುಂ. ೮ ರಿಂದ ರಾತ್ರಿ ೮**

**ಬೆಂಗಳೂರು :** ಪ್ರತಿ ತಿಂಗಳು ೧-೨ರಂದು ಹೊಟೆಲ್ ಬ್ರಾಡವೇ, ಕೆಂಪೇಗೌಡ ರೋಡ. **ಮೈಸೂರು :** ಪ್ರತಿ ತಿಂಗಳು ೩ರಂದು ಇಂದ್ರಭವನ, ಧನವಂತ್ರಿ ರೋಡ. **ಹಾಸನ :** ಪ್ರತಿ ತಿಂಗಳು ೪ರಂದು ಹೊಟೆಲ ಹರ್ಷಮಹಲ **ಶಿವಮೊಗ್ಗ :** ಪ್ರತಿ ತಿಂಗಳು ೫ರಂದು ಹೊಟೆಲ್ ಸತ್ಕಾರ. **ಉಡಪಿ :** ಪ್ರತಿ ತಿಂಗಳು ೬ರಂದು ಹೋಟೆಲ್ ಅಶೋಕ. **ಮಂಗಳೂರು :** ಪ್ರತಿ ತಿಂಗಳು ೭ರಂದು ಉಡಲ್ಯಾಂಡ್ ಹೋಟೆಲ್. **ಬೆಳಗಾಂವ :** ಪ್ರತಿ ತಿಂಗಳು ೯ರಂದು ಸತ್ಕಾರ ಹೋಟೆಲ್ ಮಾರುತಿಗಲ್ಲಿ. **ವಿಜಾಪುರ :** ಪ್ರತಿ ತಿಂಗಳು ೧೦ರಂದು ಟೂರಿಸ್ಟ ಹೋಟೆಲ್. **ಗುಲಬರ್ಗಾ :** ಪ್ರತಿ ತಿಂಗಳ ೧೧ರಂದು ಮೋಹನ ಲಾಡ್ಜ. **ಹೊಸಪೇಟ :** ಪ್ರತಿ ತಿಂಗಳು ೧೨ ರಂದು ಮಲ್ಲಿಗೆ ಟೂರಿಸ್ಟ ಹೋಮ. **ದಾವಣಗೇರಿ :** ಪ್ರತಿ ತಿಂಗಳು ೧೩ ರಂದು ಸರ್ಕಲ್ ರೆಸ್ಟೋರೆಂಟ. **ಹುಬ್ಬಳ್ಳಿ :** ಪ್ರತಿ ತಿಂಗಳು ೨೧ರಿಂದ ೩೧ರ ವರೆಗೆ ಹೊಟೆಲ್ ಗೋವನ್ ಟಾವರ, ರೂಮ ನಂ. ೧೭, ಫೋನ : ೬೫೧೯೯ ಮನೆ ಫೋನ : ೬೬೬೭೮. ಸಮಕ್ಷಮ ಭೆಟ್ಟಿಯಾಗದವರು ೫೦ ಪೈಸೆ ಸ್ಟಾಂಪಿಟ್ಟು ಬರೆಯಿರಿ.

## ಡಾ. ಎಸ್. ಎಂ. ಯಾದಗೀರ ಆದರ್ಶ ಡಿಸ್ಪೆನ್ಸರಿ

**ಭಂಡಿವಾಡ ಬೇಸ, ಹುಬ್ಬಳ್ಳಿ-೫೮೦ ೦೨೦.**

ಅವನ ಕುಟುಂಬವನ್ನೇ ನಾಶ ಮಾಡಿದ. ನನ್ನನ್ನೂ ಸೇರಿದಂತೆ ಹರ್‌ನ ಎಲ್ಲಾ ಸೇವಕರನ್ನು ಜೈಲಿಗೆ ತಳ್ಳಿದ. ಹರ್ ಅರಮನೆಗೆ ಸೇರಿದ ಎಲ್ಲಾ ಹಣವನ್ನು ಕೊಟ್ಟು ಬಿಡುವಂತೆ ಒಪ್ಪಂದ ಪತ್ರಕ್ಕೆ ಸಹಿ ಹಾಕಲು ನನಗೆ ಹೇಳಿದರು. ಹರ್ ಕುಟುಂಬದ ಶ್ರೀಮಂತಿಕೆಯನ್ನು ಹಾಗೆಯೇ ಉಳಿಸಿ ಬೆಳಸಲು ಯೋಚಿಸಿ ಅವರ ಆಜ್ಞೆಯನ್ನು ನಿರಾಕರಿಸಿದೆ.

"ನನ್ನನ್ನು ಅನೇಕ ತಿಂಗಳ ಕಾಲ ಜೈಲಿನಲ್ಲಿ ಕೊಳೆ ಹಾಕಿ ವಿಧ ವಿಧ ಹಿಂಸೆ ನೀಡಿದರು. ಆದರೆ ನಾನು ಮಣಿಯಲಿಲ್ಲ. ಕೊನೆಗೆ ನನ್ನನ್ನು ಬಿಟ್ಟರು. ಮನೆಗೆ ಬಂದಾಗ ಭಯ ಮತ್ತು ದುಃಖ ತಾಳಲಾರದೇ ನಿನ್ನ ತಾಯಿ ಸತ್ತಿದ್ದಳು. ಕಡೆಗೆ ಪ್ರಪಂಚದಾದ್ಯಂತ ವ್ಯಾಪಾರ ನಡೆಸಲು ಚಕ್ರವರ್ತಿ ನನಗೆ ಅಪ್ಪಣೆ ಪತ್ರ ನೀಡಿದ. ಹರ್ ಕುಟುಂಬಕ್ಕೆ ಸೇರಿದ ಧನವನ್ನು ಇದರಿಂದ ವೃದ್ಧಿಸಿದ್ದೇನೆ," ಎಂದ ಸೈಮೋನಿಡ್ಸ್.

"ನಮ್ಮ ಹಣ, ಸ್ವತ್ತು ಎಲ್ಲವನ್ನೂ ಈಗ ನಾವು ಈ ಮನುಷ್ಯನಿಗೆ ನೀಡಬೇಕೇ?" ಎಂದು ಎಸ್ತರ್ ಕೇಳಿದಳು.

"ಮೊದಲು ಆತ ಹರ್ ಕುಟುಂಬದವನೇ ಅಲ್ಲವೇ? ರೋಮನ್ನರ ಮೇಲೆ ಸೇಡು ತೀರಿಸಿಕೊಳ್ಳಲು ಅವನು ಹೂಡಿರುವ ಹಂಚಿಕೆ ಏನು ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಮಲ್ಲುಚ್ ಏನು ವರದಿ ತರುತ್ತಾನೋ ಕಾಯೋಣ," ಎಂದ.

ಃ

ಸೈಮೋನಿಡ್ಸ್‌ನ ಮನೆಯನ್ನು ಬಿಟ್ಟ ನಂತರ ಅನೇಕ ಗಂಟೆಗಳ ಕಾಲ ಬೆನ್-ಹರ್ ಗೊತ್ತು ಗುರಿಯಿಲ್ಲದೇ ಅಲೆದ. ಕಡೆಗೆ ಅಂಟಿಯೋಚ್‌ನ ಹೊರವಲಯದಲ್ಲಿದ್ದ ಡಾಫ್ನೆ ತೋಪಿಗೆ ಬಂದ. ಅದೊಂದು ಸುಂದರ ಉದ್ಯಾನವನ.

ತೋಪಿನಲ್ಲಿ ಅಲೆಯುತ್ತಿದ್ದಾಗ ಕೆಂದು ಉಡುಪು ಧರಿಸಿದ್ದ ಮಲ್ಲುಚ್ ಎದುರಾದ. ಬೆನ್-ಹರ್‌ನನ್ನು ಮಾತನಾಡಿಸಿ, "ನಾನು ಅಂಟಿಯೋಕ್‌ನ ವ್ಯಾಪಾರಿ. ಈ ವನ ತುಂಬಾ ದೊಡ್ಡದು. ನಿನಗೇನಾದರೂ ಸಹಾಯ ಮಾಡಲೇ?" ಎಂದ.

"ನಾನು ರೋಮಿನ ಆರ್ರಿಯಸ್‌ನ ಮಗ," ಎಂದು ಪರಿಚಯಿಸಿಕೊಂಡ ಬೆನ್-ಹರ್, "ಮೊದಲು ಇಲ್ಲಿ ನೋಡುವಂಥಾ ಸ್ಥಳವೇನಿದೆ?" ಎಂದೂ ಕೇಳಿದ.

"ಈ ವನದಲ್ಲಿರುವ ದೊಡ್ಡ ಕ್ರೀಡಾಂಗಣದ ಕಡೆ ಹೋಗುತ್ತಿದ್ದೇನೆ. ಮುಂದೆ ನಡೆಯಲಿರುವ ಸರ್ಕಸ್-ರಥ ಪಂದ್ಯಕ್ಕಾಗಿ ಅಲ್ಲಿ ಸಾರಥಿಗಳು ಅಭ್ಯಾಸ ನಡೆಸುತ್ತಿದ್ದಾರೆ," ಎಂದ ಮಲ್ಲುಚ್.

"ರಥ ಸ್ಪರ್ಧೆಯಲ್ಲಿ ಭಾಗವಹಿಸಲು ನಾನೂ ತರಬೇತಿ ಪಡೆದಿದ್ದೇನೆ. ಕ್ರೀಡಾಂಗಣಕ್ಕೆ ಹೋಗೋಣ," ಎಂದ ಬೆನ್-ಹರ್.

ಕ್ರೀಡಾಂಗಣಕ್ಕೆ ಇಬ್ಬರೂ ಬಂದಾಗ ಅನೇಕ ಸಾರಥಿಗಳು ಅಭ್ಯಾಸದಲ್ಲಿ ನಿರತರಾಗಿದ್ದರು. ರಥವನ್ನೆಳೆಯುತ್ತಿದ್ದ ನಾಲ್ಕು ಕುದುರೆಗಳು ಅವನ ಗಮನ ಸೆಳೆದವು. ಅವುಗಳ ನಿಲುವು ಮತ್ತು ಸೌಂದರ್ಯಕ್ಕೆ ಬೆನ್-ಹರ್ ಮಾರು ಹೋದ. ರಥವನ್ನೆಳೆಯುತ್ತಿದ್ದ ಅವುಗಳನ್ನು ಸಾರಥಿ ನಿಯಂತ್ರಿಸಲಾರದೆ ಹಗ್ಗವನ್ನು ಬಿಟ್ಟು ಬಿಟ್ಟ. ಪ್ರೇಕ್ಷಕರ ಗ್ಯಾಲರಿಯಲ್ಲಿ ಕುಳಿತಿದ್ದ ಮುದುಕನೊಬ್ಬ ಎದ್ದು ನಿಂತು ರಥವನ್ನು ನಡೆಸುತ್ತಿದ್ದ ರೋಮನ್ ಸಾರಥಿಯನ್ನು ಬಾಯಿಗೆ ಬಂದಂತೆ ಬೈಯತೊಡಗಿದ.

ಬೈಯುತ್ತಿದ್ದ ಮುದುಕನನ್ನು ತೋರಿಸಿ ಮಲ್ಲುಚ್ ಹೇಳಿದ, "ಅವನ ಹೆಸರು ಷೇಖ್ ಇಲ್ಡರಿಂ. ಮರುಭೂಮಿಯ ಶ್ರೀಮಂತ. ಅವನ ಬಳಿ ಪ್ರಪಂಚದಲ್ಲೇ ಅತ್ಯುತ್ತಮವಾದ ಪಂದ್ಯ ಕುದುರೆಗಳಿವೆ," ಎಂದು.

ಕೋಪದಿಂದ ಬುಸುಗುಡುತ್ತಿದ್ದ ತನ್ನ ಕುದುರೆಗಳನ್ನು ಸಂತೈಸಲು ಷೇಖ್ ಅವುಗಳ ಬಳಿ ಹೋದ; ಆಗ ಸುಂದರವಾದ ರಥವೊಂದು ಮೈದಾನಕ್ಕೆ ಬಂತು. ಪ್ರೇಕ್ಷಕರು ಹರ್ಷೋದ್ಗಾರಗಳಿಂದ ಸಾರಥಿಯನ್ನು ಸ್ವಾಗತಿಸಿದರು. ಸಾರಥಿಯ ಮುಖ ಮೈಕಟ್ಟು ಬೆನ್-ಹರ್‌ಗೆ ಪರಿಚಿತವೆನಿಸಿತು. ಅವನ ಮುಖವನ್ನು ಸರಿಯಾಗಿ ದಿಟ್ಟಿಸಿದ ನಂತರ 'ಮೆಸ್ಸಲ್ಲಾ' ಎಂಬ ಶಬ್ದ ಅವನ ಬಾಯಿಂದ ಹೊರಟಿತು.

ಆಗ ಷೇಖ್ ಇಲ್ದರಿಂ ಪತ್ರದ ಸುರುಳಿಯನ್ನು ಬಿಡಿಸಿ ಪ್ರೇಕ್ಷಕರನ್ನು ಉದ್ದೇಶಿಸಿ ಹೇಳತೊಡಗಿದ, "ರೋಮನ್ ಪ್ರಜೆಗಳೇ ಕೇಳಿ. ಮುಂದಿನ ಸರ್ಕಸ್‌ನಲ್ಲಿ ನನ್ನ ಕುದುರೆಗಳನ್ನು ಗೆಲ್ಲಿಸಿದರೆ ನಾನು ಷೇಕ್ ಇಲ್ದರಿಂ. ಅಂಥ ಸಾರಥಿಗೆ ಹಣದ ಗಡಿಗೆಯನ್ನೇ ನೀಡುತ್ತೇನೆ."

"ಇದು ಯೋಚನೆ ಮಾಡಬೇಕಾದ ವಿಷಯ; ಈ ಸವಾಲನ್ನು ಸ್ವೀಕರಿಸಬಹುದು"—ಮಲ್ಲುಚ್ ಬೆನ್‌–ಹರ್‌ಗೆ ಹೇಳಿದ.

ಬೆನ್‌–ಹರ್ ನಕ್ಕ. "ಈಗೆಲ್ಲಿ ಹೋಗೋಣ?" ಎಂದು ಕೇಳಿದ.

"ಕ್ಯಾಸ್ಟಿಲಿಯಾದ ಬಳಿ ಇರುವ ಪ್ರಸಿದ್ಧ ಕಾರಂಜಿಯ ಬಳಿ ಹೋಗೋಣ" ಎಂದ.

ಕಾರಂಜಿಯ ಬಳಿ ಇಬ್ಬರೂ ಬರುತ್ತಿದ್ದಾಗ ಬಿಳಿ ಒಂಟೆಯೊಂದು ಚೌಕಕ್ಕೆ ಬಂತು. ಅದಕ್ಕೆ ಮುಂದೆ ಕುದುರೆ ಸವಾರನೊಬ್ಬ ದಾರಿ ತೋರಿಸುತ್ತಾ ಬರುತ್ತಿದ್ದ. ಒಂಟೆಯ ಮೇಲೆ ಚಿನ್ನದ ದೊಡ್ಡ ಅಂಬಾರಿಯೊಂದಿತ್ತು. ಅಂಬಾರಿಯೊಳಗೆ ಮುದುಕ ಹಾಗೂ ಒಬ್ಬಳು ಸುಂದರ ತರುಣಿ ಕುಳಿತಿದ್ದರು.

ಕುದುರೆ ಸವಾರ ಕೆಳಗಿಳಿದು ನೀರು ಕುಡಿಸಲು ಒಂಟೆಯನ್ನು ಕಾರಂಜಿಯ ಕಡೆ ಎಳೆ ತರತೊಡಗಿದ.

ಆ ಸಮಯದಲ್ಲಿ ರಥದ ಗಾಲಿಯ ಶಬ್ದ ಮತ್ತು ಕುದುರೆಗಳ ಗೊರಸಿನ ಸಪ್ಪಳ ಕೇಳಿ ಬಂತು. ಜನರೆಲ್ಲ ಗೊಂದಲದಿಂದ ದಿಕ್ಕು ತಪ್ಪಿ ಓಡತೊಡಗಿದರು. ಕಾರಂಜಿಯ ಬಳಿ ಇದ್ದ ಗುಂಪಿನ ಮೇಲೆ ಹರಿಹಾಯುವಂತೆ ಸಾರಥಿ ಕುದುರೆಗಳನ್ನು ಓಡಿಸುತ್ತಿದ್ದ.

"ಈ ರೋಮನ್ನರು ನಮ್ಮನ್ನು ಸಾಯಿಸಿ ಬಿಡುತ್ತಾರೆ," ಎಂದು ಮಲ್ಲುಚ್ ಕೂಗಿದ.

ಬೆನ್‌–ಹರ್ ರಥದ ಕಡೆ ನೋಡಿದ. ಸಂದೇಹವೇ ಇಲ್ಲ. ಸಾರಥಿ ಬೇರೆ ಯಾರೂ ಅಲ್ಲ. ಮೆಸ್ಸೆಲಾ!

ನೀರು ಕುಡಿಯಲು ಮಂಡಿಯೂರಿ ಕುಳಿತಿದ್ದ ಒಂಟೆಯ ಮೇಲಿನ ಅಂಬಾರಿಯನ್ನು ಕುದುರೆಗಳು ಇನ್ನೇನು ತುಳಿಯುವುದರಲ್ಲಿದ್ದವು. ಬೆನ್‌–ಹರ್ ಜಿಗಿದು ಕುದುರೆಯ ಕಡಿವಾಣಕ್ಕೆ ಜೋತು ಬಿದ್ದ, "ರೋಮನ್ ನಾಯಿ, ಮನುಷ್ಯರ ಜೀವ ಎಂದರೆ ನಿನಗೆ ಹುಡುಗಾಟವೇ?" ಎಂದು ಕೆಕ್ಕರಿಸಿ ಕೂಗಿದ.

ಕುದುರೆಗಳು ತಕ್ಷಣ ನಿಂತವು. ಆದರೆ ಮೆಸ್ಸೆಲಾ ಇನ್ನೇನು ಬೀಳುವುದರಲ್ಲಿದ್ದವನು ಸುಧಾರಿಸಿಕೊಂಡು ಕೆಳಗಿಳಿದ. ಬೆನ್‌–ಹರ್‌ನನ್ನೇ ನೋಡುತ್ತಿದ್ದ ಅಂಬಾರಿಯೊಳಗಿದ್ದ ತರುಣಿಯ ಬಳಿ ನಡೆದ.

ಆ ಸುಂದರ ತರುಣಿಯನ್ನು ನೋಡುತ್ತಾ ಮೆಸ್ಸೆಲಾ ಮತ್ತನಾದ. ತುಂಬಾ ಗಾಂಭೀರ್ಯದಿಂದ ಅವಳನ್ನು ಉದ್ದೇಶಿಸಿ, "ದಯವಿಟ್ಟು ಕ್ಷಮಿಸಿ, ನನ್ನ ಹೆಸರು ಮೆಸ್ಸೆಲಾ, ನಾನು ನೀವಿರುವುದನ್ನು ಗಮನಿಸಲಿಲ್ಲ. ಕ್ಷಮಿಸಿ," ಎಂದ.

ಬೆನ್‌–ಹರ್‌ನನ್ನೇ ನೋಡುತ್ತಿದ್ದ ತರುಣಿ ತನ್ನ ಬಟ್ಟಲನ್ನು ಆತನಿಗೆ ಕೊಟ್ಟು ನೀರು ತರುವಂತೆ ಹೇಳಿದಳು.

ನೀರು ತರಲು ಕಾರಂಜಿಯ ಬಳಿ ಹೋದಾಗ ಬೆನ್‌–ಹರ್ ಮೆಸ್ಸೆಲಾ ಮುಖಾಮುಖಿಯಾದರು. ಬೆನ್‌–ಹರ್‌ನನ್ನು ಗುರುತಿಸದ ಮೆಸ್ಸೆಲಾ ಭುಜ ಕುಣಿಸಿ ರಥವೇರಿದ. ಆದರೆ ಆತ ಬೆನ್‌–ಹರ್‌ನ ಕಣ್ಣುಗಳಲ್ಲಿ ಕಿಡಿಯಾಡುತ್ತಿದ್ದ ದ್ವೇಷದ ಕಿಚ್ಚನ್ನು ಕಾಣಲಿಲ್ಲ.

ಅಂಬಾರಿಯೊಳಗಿದ್ದ ಮುದುಕ ಬೆನ್‌–ಹರ್‌ಗೆ ವಂದನೆ ಸಲ್ಲಿಸಿದ. "ನಮ್ಮನ್ನು ಅಪಾಯದಿಂದ ಪಾರು ಮಾಡಿದ್ದೀರಿ. ನಾನು ನಿಮಗೆ ಕೃತಜ್ಞ. ನನ್ನ ಹೆಸರು ಬಲ್ತಾಸರ್. ಈಜಿಪ್ಟಿನವನು. ಇವಳು ನನ್ನ ಮಗಳು ಇರಾಸ್. ನಾವಿಬ್ಬರೂ ಷೇಖ್ ಇಲ್ದರಂನ ಅತಿಥಿಗಳು. ಆತನ ಡೇರೆ ಖರ್ಜೂರ ವನದಲ್ಲಿದೆ. ನೀವು ನಮ್ಮ ಜತೆ ಬನ್ನಿ. ಅಲ್ಲಿ ನಿಮ್ಮನ್ನು ಉಪಚರಿಸಬಹುದು," ಎಂದು ಆಹ್ವಾನಿಸಿದ.

ಬೆನ್‌–ಹರ್ ಅವರ ಆಹ್ವಾನವನ್ನು ಅಂಗೀಕರಿಸಿದ. ಬಲ್ತಾಸರ್ ಮತ್ತವನ ಮಗಳು ನಿರ್ಗಮಿಸಿದ ಮೇಲೆ ಮಲ್ಲುಚ್ ಕಡೆ ತಿರುಗಿದ. "ನೀನು ನನ್ನಂತೆಯೇ ಯಹೂದ್ಯ. ನಾವಿಬ್ಬರೂ ಗೆಳೆಯರಾದೆವು ಅನಿಸುತ್ತಿದೆ. ಈ ಪ್ರದೇಶದಲ್ಲಿ ಮಾತನಾಡಲು ನಂಬಿಕೆಯ ಸ್ನೇಹಿತರು ಬೇಕು."

ಎಂದು ತನ್ನ ಕತೆ ಹೇಳತೊಡಗಿದ.

ಮಲ್ಲುಚ್ ಬೆನ್-ಹರ್ ಕತೆ ಮೆಸ್ಸೆಲಾನ ವಂಚನೆ, ತಾನು ಗುಲಾಮನಾಗಿ ಅನುಭವಿಸಿದ ಕಷ್ಟವನ್ನು ಹೇಳತೊಡಗಿದ.

"ನನ್ನ ಕುಟುಂಬ ಏನಾಯಿತೆಂದು ಮೆಸ್ಸೆಲಾನಿಗೆ ಗೊತ್ತಿದೆ. ಆದರೆ ನಾನು ಯಹೂದ್ಯ ಎಂದು ಗೊತ್ತಾದರೆ ಹೇಳುವುದಿಲ್ಲ. ಆದಕ್ಕಾಗಿ ಈ ರೋಮನ್‌ನ ವೇಷ, ಎಂದ ಮೆಸ್ಸೆಲಾ ನಿನ್ನನ್ನು ಗುರುತಿಸಲಾರನೇ?"

"ಆದರೆ ಹೇಗೆ ಸಾಧ್ಯ? ನಾನು ಗುಲಾಮನಾಗಿ ಹಡಗಿನಲ್ಲೇ ಸತ್ತಿರಬೇಕೆಂದು ತಿಳಿದಿದ್ದಾನೆ," ಎಂದ ಬೆನ್-ಹರ್.

"ನೀನು ಅವನನ್ನು ಈಗ ಏಕೆ ಹೊಡೆಯಲಿಲ್ಲ?"

"ಅವನನ್ನು ಹೊಡೆದರೆ ನನ್ನ ಉದ್ದೇಶ ಈಡೇರದು. ನನ್ನ ಕುಟುಂಬ ಎಲ್ಲಿದೆ ಎಂಬ ರಹಸ್ಯ ಬಾಯಿ ಬಿಡುವವರೆಗೆ ಅವನ ಜೀವಕ್ಕೇನೂ ಅಪಾಯವಿಲ್ಲ," ಎಂದ.

ಈ ಯುವಕ ನಿಜವನ್ನೇ ಹೇಳುತ್ತಿದ್ದಾನೆ ಎಂದು ಮಲ್ಲುಚ್‌ಗೆ ಮನವರಿಕೆಯಾಯಿತು. "ನಾನು ಯಹೂದ್ಯ. ಮೆಸ್ಸೆಲಾ ರೋಮನ್. ಅವನಿಗೆ ಶಿಕ್ಷೆ ವಿಧಿಸಲು ನಿನಗೆ ಸಹಾಯ ಮಾಡುತ್ತೇನೆ," ಎಂದು ಮಾತು ಕೊಟ್ಟ.

"ಮಲ್ಲುಚ್, ಈ ದಿನ ಅಭ್ಯಾಸ ನಡೆಸಿದ ಎಲ್ಲಾ ಸಾರಥಿಗಳೂ ಪಂದ್ಯದಲ್ಲಿ ಭಾಗವಹಿಸುತ್ತಾರಾ?"

"ಹೌದು."

"ಮೆಸ್ಸೆಲಾ ಕೂಡ?"

"ಹೌದು...ನಿಮ್ಮ ಮನಸ್ಸಿನಲ್ಲಿ ಏನಿದೆ ಎಂದು ತಿಳಿಯಿತು. ಪಂದ್ಯದಲ್ಲಿ ಭಾಗವಹಿಸಬೇಕೆಂದು ನಿಮಗೂ ಅನಿಸಿದೆ. ಆದರೆ ಆತನೊಡನೆ ಹೋರಾಡಿ ಗೆಲ್ಲುವ ಚಾಕಚಕ್ಯ ನಿಮ್ಮಲ್ಲಿದೆಯೇ?" ಎಂದು ಕೇಳಿದ.

"ಭಯಪಡಬೇಡ ಗೆಳೆಯಾ. ರೋಮ್‌ನಲ್ಲಿ ನಡೆದ ಸರ್ಕಸ್ ಮ್ಯಾಕ್ಸಿಮಸ್ ಪಂದ್ಯದಲ್ಲಿ ಚಕ್ರವರ್ತಿಯೇ ನನ್ನ ಕೌಶಲ ನೋಡಿ ಮೆಚ್ಚಿದರು. ಅವರ ಕುದುರೆಯನ್ನು ಗೆಲ್ಲಿಸುವುದಾದರೆ ತಮ್ಮ ಆಶ್ರಯಕ್ಕೆ ನನ್ನನ್ನು ಕರೆದುಕೊಳ್ಳುವುದಾಗಿ ಹೇಳಿದರು."

"ನೀವು ಸ್ಪರ್ಧಿಸಲಿಲ್ಲವೇ?"

"ಇಲ್ಲ. ನನಗೆ ರೋಮನ್‌ನ ಹೆಸರಿದೆ, ಆದರೆ ನಾನು ಯಹೂದ್ಯ. ಸಾರಥಿ ವೃತ್ತಿಯನ್ನು ಕೈಗೊಂಡರೆ ನನ್ನ ತಂದೆಗೆ ಅವಮಾನ ಮಾಡಿದಂತೆ. ಈ ಬಾರಿ ಪಂದ್ಯಕ್ಕೆ ಹೋಗುವುದು ಹಣ ಗಳಿಸುವುದಕ್ಕಲ್ಲ. ನನ್ನ ಶತ್ರುವನ್ನು ಸಾರ್ವಜನಿಕರೆದುರಿನಲ್ಲಿ ಅಪಮಾನಗೊಳಿಸಬೇಕು ಶೇಖ್ ಇಲ್ಡರಿಂನ ಕುದುರೆಗಳನ್ನು ಓಡಿಸಲು ಬೇರೆ ಯಾರಾದರೂ ಒಪ್ಪಿಕೊಳ್ಳುವ ಮುನ್ನ ನಾನಲ್ಲಿಗೆ ಹೋಗಬೇಕು. ಪಂದ್ಯ ನಡೆಯಲು ಇನ್ನು ಆರೇ ದಿನ ಉಳಿದಿವೆ, ನಾನು ಸಾಕಷ್ಟು ಅಭ್ಯಾಸ ಮಾಡಬೇಕು," ಎಂದ.

೩

ಅಂದು ಮಧ್ಯಾಹ್ನ ಬೆನ್-ಹರ್, ಮಲ್ಲುಚ್ ಎರಡು ಒಂಟೆಗಳನ್ನು ಬಾಡಿಗೆಗೆ ಪಡೆದು ಷೇಖ್ ಇಲ್ಡರಿಂನ ಖರ್ಜೂರದ ತೋಟಕ್ಕೆ ಹೊರಟರು. ಷೇಖ್‌ನ ಮನೆತನಕ್ಕೆ ಆ ಖರ್ಜೂರದ ವನವನ್ನು ರೋಮನ್ ಚಕ್ರವರ್ತಿ ಬಳುವಳಿಯಾಗಿ ಕೊಟ್ಟನೆಂದು ಮಲ್ಲುಚ್ ಹೇಳಿದ.

"ಆದರೆ ಇಂದು ಕ್ರೀಡಾಂಗಣದಲ್ಲಿ ಷೇಖ್ ರೋಮನ್ನರನ್ನು ಬಾಯಿಗೆ ಬಂದಂತೆ ಬೈಯುತ್ತಿದ್ದನಲ್ಲ?" ಬೆನ್-ಹರ್ ಕೇಳಿದ.

"ಏಕೆಂದರೆ ರಾಜ ಹೆರೋಡ್ ಷೇಖ್‌ನ ಕೆಲವು ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡ. ಷೇಖ್ ಚಕ್ರವರ್ತಿಗೆ ದೂರು ನೀಡಿದ. ಆದರೆ ಚಕ್ರವರ್ತಿ ಆ ಬಗ್ಗೆ ಕಿವಿಗೊಡಲಿಲ್ಲ. ಇದರಿಂದಾಗಿ ರೋಮನ್‌ರ ಬಗ್ಗೆ ಅವನಿಗೆ ಅಸಹನೆ."

"ಇದೆಲ್ಲ ನಿನಗೆ ಹೇಗೆ ಗೊತ್ತಾಯಿತು ಮಲ್ಲುಚ್?"

"ನಾನು ಸೈಮೋನಿಡ್ಸ್ ಬಳಿ ಹಲವಾರು ವರ್ಷಗಳಿಂದ ದುಡಿಯುತ್ತಿದ್ದೇನೆ. ಷೇಖ್ ಇಲ್ಡರಿಂ ಸೇರಿದಂತೆ ಸೈಮೋನಿಡ್ಸ್‌ನ ಅನೇಕ ಸ್ನೇಹಿತರು ನನಗೆ ಗೊತ್ತು. ಷೇಖ್ ಇಲ್ಡರಿಂ ಇತ್ತೀಚೆಗೆ ಯಹೂದ್ಯರ ಉದ್ಧಾರಕ್ಕೆ ಸಂಬಂಧಿಸಿದಂತೆ ಕತೆಯೊಂದನ್ನು ಹೇಳಿದ."

"ನನಗೂ ಆ ಕತೆ ಹೇಳು," ಎಂದು ಬೆನ್-

ಹರ್ ಒತ್ತಾಯಿಸಿದ.

"ಅನೇಕ ವರ್ಷಗಳ ಹಿಂದೆ ಮೂವರು-ಒಬ್ಬ ಈಜಿಪ್ಷಿನವನು, ಮತ್ತೊಬ್ಬ ಹಿಂದು, ಇನೊಬ್ಬ ಗ್ರೀಕ್-ಜೆರುಸಲೆಂಗೆ ಹೋಗುತ್ತಿರುವಾಗ ಮಾರ್ಗ ಮಧ್ಯದಲ್ಲಿ ಷೇಖ್‌ನ ಬಿಡಾರಕ್ಕೆ ಬಂದರು. ಪ್ರತಿಯೊಬ್ಬರಿಗೂ ಯಹೂದ್ಯರ ಹೊಸ ರಾಜ ಜೆರುಸಲೇಂನಲ್ಲಿ ಹುಟ್ಟುವುದರಿಂದ ಅಲ್ಲಿಗೆ ಹೋಗುವಂತೆ ಅಶರೀರವಾಣಿ ಕೇಳಿಸಿತ್ತು."

"ಹೊಸ ರಾಜನನ್ನು ಅವರು ಕಂಡರೇ?"

"ಬೆತ್ಲೆಹೇಂನ ಕುದುರೆ ಲಾಯವೊಂದರಲ್ಲಿ ಆಗ ತಾನೆ ಹುಟ್ಟಿದ್ದ ಮಗುವನ್ನು ಅವರು ಯಹೂದ್ಯರ ದೊರೆಯೆಂದು ಪೂಜಿಸಿದರು. ಆದರೆ ಹೆರೋಡ್ ರಾಜನಾದ್ದರಿಂದ ಇನ್ನೊಬ್ಬ-ರನ್ನು ಪೂಜಿಸಿದ್ದನ್ನು ತಿಳಿದರೆ ತಮ್ಮನ್ನು ಕೊಲ್ಲಬಹುದೆಂದು ಷೇಖ್‌ನ ಬಿಡಾರಕ್ಕೆ ಬಂದರು. ಯಹೂದಿಗಳ ರಾಜನ ಹುಟ್ಟು ರೋಮನ್ ಸಾಮ್ರಾಜ್ಯದ ಪತನಕ್ಕೆ ನಾಂದಿ ಹಾಡುವುದೆಂದು ಷೇಖ್ ಬಲವಾಗಿ ನಂಬಿದ್ದಾನೆ."

"ಆ ಮೂವರು ಹಾಗೂ ಆ ಯಹೂದ್ಯರ ದೊರೆ ಏನಾದರು?" ಬೆನ್-ಹರ್ ಕೇಳಿದ.

"ಈಜಿಪ್ಟ್‌ನ ಬಲ್ತಾಸರ್ ಕೆಲವು ವರ್ಷಗಳ ಹಿಂದೆ ಷೇಖ್‌ನ ಬಿಡಾರಕ್ಕೆ ಬರುವ ವರೆಗೂ ಷೇಖ್‌ನಿಗೆ ಏನೂ ಗೊತ್ತಾಗಿರಲಿಲ್ಲ."

"ಈ ದಿನ ಕಾರಂಜಿಯ ಬಳಿ ಅಂಬಾರಿಯಲ್ಲಿ ಇದ್ದನಲ್ಲ, ಅವನೇ ಬಲ್ತಾಸರ್," ಎಂದು ಬೆನ್-ಹರ್ ಹೇಳಿದ.

"ನಿಜ ನೋಡು, ತೋಪಿಗೆ ಬಂದೆವು" ಎಂದು ಹೇಳಿ ಮಲ್ಲುಚ್ ಬೆನ್-ಹರ್‌ನನ್ನು ಷೇಖ್‌ನ ಬಿಡಾರದ ಬಳಿ ಬಿಟ್ಟು ವಿಷಯ ತಿಳಿಸಲು ಸೈಮೋನಿಡ್ಸ್ ಮನೆಗೆ ಧಾವಿಸಿದ.

ಆ ದಿನ ನಡೆದ ಘಟನೆಯನ್ನೆಲ್ಲ ಸೈಮೋ-ನಿಡ್ಸ್‌ಗೆ ತಿಳಿಸಿದ ಮೇಲೆ ಮಲ್ಲುಚ್ ಖಂಡಿತವಾದ ಧ್ವನಿಯಲ್ಲಿ, "ಆ ಯುವಕನೇ ನಮ್ಮ ಯಜಮಾನ" ಎಂದು ಘೋಷಿಸಿದ.

"ಅವನೇ ಇತಾಮರ್ ಮಗನೆಂದು ಹೇಗೆ ಹೇಳುತ್ತೀಯೇ?"-ಸೈಮೋನಿಡ್ಸ್ ಕೇಳಿದ.

"ಅನೇಕ ವರ್ಷಗಳ ಹಿಂದೆ ಯಹೂದ್ಯ ರಾಜನನ್ನು ಹುಡುಕಿಕೊಂಡು ಬಂದಿದ್ದ ಮೂವರು ಅಪರಿಚಿತರ ಕತೆಯನ್ನೂ, ರೋಮನ್ ಸಾಮ್ರಾಜ್ಯ ಪತನವಾಗುತ್ತದೆಂಬ ಷೇಖ್‌ನ ನಂಬಿಕೆಯನ್ನೂ ಹೇಳಿದೆ. ಹೊಸ ರಾಜನಿಗೆ ಅವಕಾಶ ಮಾಡಿಕೊಡಲು ರೋಮನ್ ಸಾಮ್ರಾಜ್ಯ ಉರುಳುವ ಕನಸಿನ ಬಗ್ಗೆ ಆತ ಆಸಕ್ತಿ ತಾಳಿದ. ಅದಲ್ಲದೆ ಅವನ ಮುಖ್ಯ ಯೋಚನೆ ಒಂದೇ: ತನ್ನ ಕುಟುಂಬವನ್ನು ಹುಡುಕುವುದು ಮತ್ತು ಮೆಸ್ಸೆಲಾನ ಮೇಲೆ ಸೇಡು ತೀರಿಸಿಕೊಳ್ಳುವುದು. ರಥ ಪಂದ್ಯದಲ್ಲಿ ಅವನು ಮೆಸ್ಸೆಲಾನ ಜತೆ ಹೋರಾಡಲಿದ್ದಾನೆ. ಷೇಖ್ ಇಲ್ಡರೀನ ಕುದುರೆಗಳನ್ನು ಪಂದ್ಯದಲ್ಲಿ ಓಡಿಸಲಿದ್ದಾನೆ."

ಮಲ್ಲುಚ್ ಹೊರಹೋದ ನಂತರ ಮಗಳ ಕಡೆ ತಿರುಗಿದ ಸೈಮೊನಿಡ್ಸ್, "ಯಹೂದ್ಯರ ರಾಜ ಹುಟ್ಟಿದ್ದಾನೆ. ಅವನಿಗೀಗ ಇಪ್ಪತ್ತೇಳು ವರ್ಷವಾಗಿರಬೇಕು. ಆದರೆ ಈ ರೋಮನ್ ಸಾಮ್ರಾಜ್ಯ ನಿಜವಾಗಲೂ ಪತನವಾಗುವುದೇ?" ಎಂದ.

ಎಸ್ತರ್‌ಗೆ ರೋಮನ್ ಸಾಮ್ರಾಜ್ಯದ ಪತನ ಅಥವಾ ಯಹೂದ್ಯರ ರಾಜನ ಉದಯದ ಬಗ್ಗೆ ಆಸಕ್ತಿ ಇರಲಿಲ್ಲ. ಆಕೆಯ ಕಾಳಜಿ ಇದ್ದದ್ದು ಬೆನ್-ಹರ್ ಬಗ್ಗೆ. "ಆ ಯುವಕನನ್ನು ಕರೆಸಿರಿ. ರಥ ಪಂದ್ಯಕ್ಕೆ ಹೋಗುವುದನ್ನು ತಡೆಯಿರಿ. ಇಸ್ರೇಲಿಗೆ ಈ ರಥ ಪಂದ್ಯ ಹೇಳಿ ಮಾಡಿಸಿದ್ದಲ್ಲ," ಎಂದು ತಂದೆಗೆ ಹೇಳಿದಳು.

"ಎಸ್ತರ್, ಈ ಯುವಕನ ಬಗ್ಗೆ ಏಕಿಷ್ಟು ಕಾಳಜಿ? ನನ್ನ ಹಣ ಮತ್ತು ಮಗಳು ಇಬ್ಬರನ್ನೂ ಆತನಿಗೆ ಕೊಡಲು ಸಾಧ್ಯವೇ?" ಎಂದು ಕೇಳಿದ.

"ಯೋಚನೆ ಮಾಡಬೇಡಿ. ನನ್ನ ಹೃದಯ ಬೆನ್-ಹರ್ ಬಳಿ ಇರಬಹುದು. ಆದರೆ ನಾನು ಎಂದಿಗೂ ನಿಮ್ಮ ಜೊತೆಯಲ್ಲಿಯೇ ಇರುತ್ತೇನೆ. ವಿಶ್ರಾಂತಿ ತೆಗೆದುಕೊಳ್ಳಿ."

*

ಮುಂದಿನ ರಥಪಂದ್ಯದ ಬಗ್ಗೆ ಉತ್ಸಾಹಿತರಾಗಿದ್ದ ಮೆಸ್ಸೆಲಾ ಮತ್ತವನ ಗೆಳೆಯರು ಕುಡಿಯುತ್ತಾ, ಜೂಜಾಡುತ್ತಾ, ಕಾಲ ಕಳೆಯುತ್ತಿದ್ದರು. ಇದ್ದಕ್ಕಿದ್ದಂತೆ ಮೆಸ್ಸೆಲಾನ ಗೆಳೆಯ ಡ್ರೂಸೆಸ್, "ಕ್ವಿಂಟಸ್ ಅರ್ರಿಯಸ್‌ನ ಮಗನನ್ನು

ಎಂದಾದರೂ ನೋಡಿದ್ದೀಯಾ?" ಎಂದ ಕೇಳಿದ.

"ಆರ್ರಿಯಸ್‌ಗೆ ಮಗ ಇದ್ದನೆಂಬುದೇ ಗೊತ್ತಿಲ್ಲ," ಮೆಸ್ಸೆಲಾ ಹೇಳಿದ.

"ಇದ್ದಾನೆ. ಇಂದು ಬೆಳಿಗ್ಗೆ ಆತ ಬಂದ. ಅವನು ಮೆಸ್ಸೆಲಾನಂತೆಯೇ ಕಾಣುತ್ತಾನೆ."

"ಮೆಸ್ಸೆಲಾನಂತೆ ಕಾಣುತ್ತಾನಾ! ಅಸಾಧ್ಯ. ಉಡುಪು ತೊಟ್ಟರೆ ಯಹೂದ್ಯನಂತೆ ಕಾಣುತ್ತಾನೆ." ಅಸಹನೆಯಿಂದ ಇನ್ನೊಬ್ಬ ಹೇಳಿದ.

"ಅವನು ರೋಮನ್ನನಾದರೂ ಆಗಿರಲಿ, ಯಹೂದಿಯಾದರೂ ಆಗಿರಲಿ, ಆದರೆ ಆರ್ರಿಯಸ್‌ನ ಮಗ ತುಂಬಾ ಸುಂದರವಾಗಿದ್ದಾನೆ. ಧೈರ್ಯಶಾಲಿ. ಅವನು ಅನೇಕ ಭಾಷೆಗಳನ್ನು ಮಾತನಾಡುವುದಷ್ಟೇ ಅಲ್ಲ, ಕುದುರೆ ನಡೆಸುವ ಚಾಕಚಕ್ಯವೂ ಅವನಿಗಿದೆ. ಆದರೆ ಆತನ ಹಿನ್ನೆಲೆ ಮಾತ್ರ ನಿಗೂಢ," ಡ್ರೂಸಸ್ ಹೇಳಿದ.

ತಕ್ಷಣ ಮೆಸ್ಸೆಲಾ ಹೇಳಿದ: "ಇಂದು ಕಾರಂಜಿಯ ಬಳಿ ನನ್ನ ಕುದುರೆಗಳನ್ನು ತಡೆದವನು ರೋಮನ್‌ನಂತೆ ಕಾಣುತ್ತಿದ್ದ. ಆದರೆ ಯಹೂದ್ಯನಂತೆ ಉಡುಪು ಧರಿಸಿದ್ದ. ರಥವನ್ನು ತಿರುಗಿಸುವುದು ಕುದುರೆಗಳನ್ನು ಹಿಡಿದು ನಿಲ್ಲಿಸುವುದು ಅವನಿಗೆ ಗೊತ್ತು. ಬಹುಶಃ ಅವನೇ ಇರಬೇಕು. ಆರ್ರಿಯಸ್ ಮಗನ ಬಗ್ಗೆ ನಿನಗೇನು ಗೊತ್ತು? ಅವನ ನಿಗೂಢ ಹಿನ್ನೆಲೆಯೇನು?"

"ಕಳ್ಳರ ಜತೆ ಸಮುದ್ರದಲ್ಲಿ ನಡೆದ ಹೋರಾಟದಲ್ಲಿ ಬದುಕುಳಿದವರು ಆರ್ರಿಯಸ್ ಮತ್ತೆ ಈ ಹುಡುಗ ಇಬ್ಬರೇ ಎಂದು ಹೇಳುತ್ತಾರೆ. ರೋಮನ್ ಹಡಗೊಂದು ಹಲಗೆ ಹಿಡಿದು ತೇಲುತ್ತಿದ್ದ ಇವರಿಬ್ಬರನ್ನು ಕರೆ ತಂದಿತಂತೆ. ಆದರೆ ಅವನನ್ನು ರಕ್ಷಿಸಿದವರು ಹೇಳುತ್ತಾರೆ, ಆರ್ರಿಯಸ್‌ನ ಜತೆಯಲ್ಲಿದ್ದ ಹುಡುಗ ಯಹೂದ್ಯನೆಂದು ಅಷ್ಟೇ ಅಲ್ಲ, ಅವನು ಹುಟ್ಟುಹಾಕುತ್ತಿದ್ದ ಗುಲಾಮನಂತೆ.

"ಯಹೂದ್ಯ? ಹಡಗಿನ ಗುಲಾಮ?"—ಮೆಸ್ಸೆಲಾನಿಗೆ ಉಸಿರು ಸಿಕ್ಕಿಹಾಕಿಕೊಂಡಿತು. ಅವನ ಮನಸ್ಸನ್ನು ಅನೇಕ ನೆನಪುಗಳು ಕಾಡತೊಡಗಿದವು. ಮೌನ ತಾಳಿದ.

*

ಇದೇ ಸಮಯದಲ್ಲಿ ಬೆನ್-ಹರ್ ಷೇಖ್ ಇಲ್ಡರಿಂನ ಗುಡಾರವನ್ನು ಪ್ರವೇಶಿಸಿದ.

"ನನ್ನ ಪ್ರಾಣ ರಕ್ಷಿಸಿದ ಯುವಕ ಇವನೇ?" ಎಂದು ಬಲ್ತಾಸರ್ ಷೇಖ್‌ಗೆ ಪರಿಚಯಿಸಿ ಆ ದಿನ ಕಾರಂಜಿಯ ಬಳಿ ನಡೆದ ಘಟನೆ ಹೇಳಿದ.

ಮೂವರು ಅಪರಿಚಿತರು ಇದೇ ಬಿಡಾರಕ್ಕೆ ಇಪ್ಪತ್ತೇಳು ವರ್ಷಗಳ ಹಿಂದೆ ಬಂದ ಘಟನೆಯನ್ನು ಷೇಖ್ ಹೇಳತೊಡಗಿದ.

"ಯಹೂದ್ಯರ ರಾಜ ಏನಾದ ಎಂದು ನಿಮಗೆ ಗೊತ್ತೇ?" ಬೆನ್-ಹರ್ ಕೇಳಿದ.

"ಅವನನ್ನು ಹುಡುಕಲು ಯತ್ನಿಸಿದೆ.




"ಹಾಗೇ ನಮ್ಮ ಪರಿಸ್ಥಿತಿನೂ ಸುಧಾರಣೆಯಾಗಬಹುದು ಓಬಣ್ಣಾ..."

ಹೆರಾಡ್ ಅವನನ್ನು ಕೊಲ್ಲಿಸಿದ ಎಂದು ಕೆಲವರು ಹೇಳುತ್ತಿದ್ದರೂ ನನಗೆ ನಂಬಿಕೆಯಿಲ್ಲ. ರೋಮನ್ನರಿಗಿಂತಲೂ ಉತ್ತಮ ಸಾಮ್ರಾಜ್ಯ ರೂಪಿಸಲು ಆತ ಈಗ ಸಿದ್ಧತೆಯಲ್ಲಿರಬಹುದು."

ಷೇಖ್ ಇಲ್ಡರಿಂ ಮತ್ತು ಬಲ್ತಾಸರ್ ಅವರು ಹೊಸ ಸಾಮ್ರಾಜ್ಯ ಉದಯವಾಗುವುದರ ಬಗ್ಗೆ ತಾಳಿದ್ದ ಕನಸನ್ನು ಕಂಡ ಬೆನ್-ಹರ್ ರೋಮನ್ನರ ಪತನಕ್ಕೆ ತಾನೂ ನೆರವಾಗುವ ಬಯಕೆಯನ್ನು ತೋಡಿಕೊಂಡ.

"ಷೇಖ್ ಇಲ್ಡರಿಂ, ನನ್ನನ್ನು ಆರ್ರಿಯಸ್ ಎಂಬ ರೋಮನ್ ಹೆಸರಿಂದ ಬಲ್ಲಿರಿ. ಆದರೆ ನಾನು ಜೂಡಾ ಬುಡಕಟ್ಟಿನ ಇಸ್ರೇಲಿ; ಯಹೂದ್ಯ. ನಾನೂ ನಿಮ್ಮಂತೆ ಈ ರೋಮನ್ನರ ಮೇಲೆ ಸೇಡು ತೀರಿಸಿಕೊಳ್ಳಲಿದ್ದೇನೆ. ನಾನು ಸೇಡು ತೀರಿಸಿಕೊಳ್ಳಲು ನೀವು ಸಹಾಯ ಮಾಡಬಲ್ಲಿರಿ."

"ನಿನಗೆ ಹೇಗೆ ಸಹಾಯ ಮಾಡಬಲ್ಲೆ?" ಷೇಖ್ ಕುತೂಹಲದಿಂದ ಕೇಳಿದ.

"ನಿಮ್ಮ ರಥವನ್ನು ನಡೆಸಲು ಸಾರಥಿ ಬೇಕೆಂದು ನೀವು ಕ್ರೀಡಾಂಗಣದಲ್ಲಿ ಹೇಳಿದಿರಿ. ನಾನು ಅಶ್ವ ತಂತ್ರ ಬಲ್ಲೆ. ನಿಮ್ಮ ಕುದುರೆಗಳು ನನ್ನ ಮೇಲೆ ಪ್ರಭಾವ ಬೀರಿವೆ. ನಾನು ನಿಮ್ಮ ಕುದುರೆಗಳನ್ನು ಓಡಿಸಬಹುದೇ?"

ಷೇಖ್ ಬಲ್ತಾಸರ್ ಕಡೆ ನೋಡಿದ. ಬಲ್ತಾಸರ್ ಒಪ್ಪಿಗೆ ನೀಡಲು ಸೂಚಿಸಿದ.

"ನೀನು ನನ್ನ ಕುದುರೆಗಳ ವಿಶ್ವಾಸವನ್ನು ಗೆಲ್ಲುವುದಾದರೆ ಪಂದ್ಯದಲ್ಲಿ ಓಡಿಸು. ನಾಳೆಯಿಂದ ಅಭ್ಯಾಸ ಸಾಗಲಿ," ಎಂದು ಷೇಖ್ ಒಪ್ಪಿಗೆ ಕೊಟ್ಟ.

## ೭

ಹಿಂದಿನ ದಿನದ ಮದ್ಯದ ಮತ್ತು ಇಳಿದಿತ್ತು. ಆರ್ರಿಯಸ್‌ನ ಮಗನ ಬಗ್ಗೆ ತಿಳಿದುಬಂದ ಮಾಹಿತಿಯನ್ನೆಲ್ಲಾ ಮೆಸ್ಸಲಾ ತಾಳೆ ಹಾಕಿ ನೋಡತೊಡಗಿದ. ಅವನ ಬಗ್ಗೆ ಸಂದೇಹ ಬಲವಾದಂತೆಲ್ಲಾ ಮೆಸ್ಸಲಾ ಒಂದೇ ಬಗೆಯ ಎರಡು ಸಂದೇಶ ಪತ್ರಗಳನ್ನು ಬರೆದ. ಎರಡನ್ನೂ-ಒಂದನ್ನು ರಸ್ತೆಯ ಮೂಲಕ ಮತ್ತೊಂದನ್ನು ಸಮುದ್ರದ ಮೂಲಕ- ಜೂಡಿಯಾದ ದಂಡಾಧಿಕಾರಿ ವೆಲೇರಿಯಸ್ ಗ್ರ್ಯಾಟಸ್‌ಗೆ ಬೆನ್-ಹರ್‌ನ ತಾಯಿ ತಂಗಿ ಏನಾಗಿದ್ದಾರೆ ಎಂದು ತಿಳಿಯಲು ರವಾನಿಸಿದ.

ಸಂದೇಶದಲ್ಲಿ. "ಅಪರಾಧಿ ಜೂಡಾ ಬೆನ್-ಹರ್‌ನನ್ನು ಹಡಗಿನಲ್ಲಿ ಗುಲಾಮನಾಗಿರಲು ಶಿಕ್ಷೆ ನೀಡಿದ್ದು ಸರಿಯಷ್ಟೆ. ಇಲ್ಲಿಯವರೆಗೂ ಹರ್ ಕುಟುಂಬದ ಆಸ್ತಿಯನ್ನು ಅಡೆತಡೆಯಿಲ್ಲದೆ ಇಬ್ಬರೂ ಅನುಭವಿಸಿದ್ದೇವೆ. ಗತಿಸಿದ ರೋಮನ್ ಅಧಿಕಾರಿ ಕ್ವಿಂಟಸ್ ಆರ್ರಿಯಸ್‌ನ ಮಗ ಇಲ್ಲಿಗೆ ಬಂದಿದ್ದಾನೆ. ಆತ ನೀನು ಶಿಕ್ಷೆ ವಿಧಿಸಿದ ಜೂಡಾ ಬೆನ್-ಹರ್ ಆಗಿರಬೇಕೆಂದು ನನ್ನ ಊಹೆ. ತನ್ನ ಕುಟುಂಬವನ್ನು ನಾಶಪಡಿಸಿದ ನನ್ನ ಮೇಲೆ ಸೇಡು ತೀರಿಸಿಕೊಳ್ಳಲು ಆತ ಬಂದಿರಬಹುದು. ನನಗೆ ನಿಜವಾಗಿಯೂ ಭಯವಾಗಿದೆ. ಇದೇ ಮನುಷ್ಯ ಈಗ ಆ ವಂಚಕ ಷೇಖ್ ಇಲ್ಡರಿಂ ಜತೆ ಸ್ನೇಹ ಬೆಳೆಸಿದ್ದಾನೆ. ಇವನ ವಿರುದ್ಧ ಏನು ಕ್ರಮ ತೆಗೆದುಕೊಳ್ಳಬೇಕು ಎಂದು ನೀವು ತಿಳಿಸುವುದನ್ನೆ ಕಾಯುತ್ತಿದ್ದೇನೆ," ಎಂದು ಬರೆಯಲಾಗಿತ್ತು.

ಹೀಗೆ ಮೆಸ್ಸಲಾ ಸಂದೇಶಗಳನ್ನು ರವಾನಿಸುತ್ತಿರುವಾಗ ಅದೇ ವೇಳೆಯಲ್ಲಿ ಸೈಮೋನಿಡ್ಸ್ ಷೇಖ್‌ಗೆ ಸಂದೇಶಗಳನ್ನು ಕಳುಹಿಸಿದ್ದ: ಒಂದು ಬೆನ್-ಹರ್‌ಗೆ ಅಗತ್ಯವಾದ ಸಹಾಯವನ್ನು ಮಾಡುವಂತೆ ಮನವಿ; ಮತ್ತೊಂದು ರೋಮನ್ ಸಾಮ್ರಾಜ್ಯದಲ್ಲಿರುವ ಷೇಖ್‌ನ ಆಸ್ತಿಪಾಸ್ತಿಯನ್ನು ವಶಪಡಿಸಿಕೊಳ್ಳಲು ಜೂಡಿಯಾವನ್ನು ಆಳುತ್ತಿರುವವರು ಮಾಡಿರುವ ಮುಸಲತ್ತು ಕುರಿತು ಷೇಖ್‌ಗೆ ತಿಳುವಳಿಕೆ ನೀಡುವಂಥದ್ದು.

"ನಮ್ಮ ಆಳುಗಳ ರಸ್ತೆಯನ್ನು ಕಾಯಲು ಹೇಳಿ. ಅಂಟಿಯೋಕ್‌ನ್ನು ಬಿಡುವ ಜನರ ಮೇಲೆ ಅವರ ಕಣ್ಣಿರಲಿ. ನಿಮಗೆ ಸಂಬಂಧಿಸಿದಂತೆ ಯಾವುದಾದರೂ ರಹಸ್ಯ ಪತ್ರವನ್ನು ಒಯ್ಯುತ್ತಿದ್ದರೆ ಅದನ್ನು ಪಡೆಯುವಂತೆ ತಿಳಿಸಿ. ಎಚ್ಚರಿಕೆಯಿಂದಿರಿ," ಸೈಮೋನಿಡ್ಸ್ ತಿಳಿಸಿದ್ದ.

ರಸ್ತೆಯನ್ನು ಕಾಯಲು ಷೇಖ್ ತನ್ನ ಆಳುಗಳನ್ನು ಕಳುಹಿಸಿದ ನಂತರ ಬಯಲಿನಲ್ಲಿ ಬೆನ್-ಹರ್ ರಥದ ಅಭ್ಯಾಸ ಮಾಡುತ್ತಿರುವುದನ್ನು

ನೋಡಲು ಹೋದ. ತನ್ನ ಮಣಿಸಲಾಗದ ಕುದುರೆಗಳನ್ನು ಬೆನ್-ಹರ್ ಪಳಗಿಸುತ್ತಿದ್ದ ವಿಧಾನದಿಂದ ಷೇಖ್ ಸಂತೃಪ್ತಿಗೊಂಡ.

ಮೊದಲನೇ ದಿನದ ಅಭ್ಯಾಸ ಮುಗಿಯಿತು. ಬೆನ್-ಹರ್ ತನ್ನ ಬಿಡಾರಕ್ಕೆ ಬಂದ. ಬಲ್ತಾಸರ್‌ನ ಮಗಳು ಇರಾಸ್‌ನಿಂದ ಅವನಿಗೊಂದು ಪತ್ರ ಬಂದಿತ್ತು. ಸನಿಹದಲ್ಲೇ ಇದ್ದ ನದಿಯಲ್ಲಿ ದೋಣಿ ವಿಹಾರ ಮಾಡಲು ಆಕೆ ಆಹ್ವಾನಿಸಿದ್ದಳು. ಇರಾಸ್ ಸೌಂದರ್ಯಕ್ಕೆ ಬೆನ್-ಹರ್ ಮನಸೋತಿದ್ದ. ತಕ್ಷಣ ಹೊರಟ.

ಮೆತ್ತನೆಯ ಆಸನವಿದ್ದ ದೋಣಿಯಲ್ಲಿ ಇರಾಸ್ ಕುಳಿತಿದ್ದಳು. ಆಕೆ ಈಜಿಪ್ಟ್ ಬಗ್ಗೆ ಮೆಚ್ಚುಗೆಯಿಂದ ಮಾತನಾಡಿದಳು. ಮಧ್ಯದಲ್ಲೇ ವಿಷಯ ಬದಲಿಸುತ್ತಾ "ನಮ್ಮ ಮೇಲೆ ಏರಿ ಬಂದಿದ್ದ ರಥ ಓಡಿಸುತ್ತಿದ್ದ ಆ ರೋಮನ್ ಬಗ್ಗೆ ಹೇಳು. ಆತ ಉತ್ತಮ ಕುಲದಿಂದ ಬಂದವನೇ?" ಎಂದು ಕೇಳಿದಳು.

ಮೆಸ್ಸಲಾ ಬಗ್ಗೆ ಅವಳ ಆಸಕ್ತಿ ಕಂಡು ಬೇಸರಗೊಂಡ ಬೆನ್-ಹರ್, "ನನಗೆ ಗೊತ್ತಿಲ್ಲ." ಎಂದ.

"ಅವನ ಕುದುರೆಗಳು ಎಷ್ಟು ಚೆನ್ನಾಗಿದ್ದವು; ಅವನ ರಥದ ಆಸನ ಚಿನ್ನದ್ದು. ಚಕ್ರಗಳು ದಂತದವು," ಎಂದು ಹೊಗಳಲು ಆರಂಭಿಸಿದಳು. ಬೆನ್-ಹರ್ ಮೌನವಾದ.

ದೋಣಿ ತೀರಕ್ಕೆ ಬಂತು. ಇರಾಸ್ ಬಗ್ಗೆ ಬೆನ್-ಹರ್‌ಗೆ ಅಸಹನೆಯುಂಟಾಯಿತು.

ಮರುದಿನ ರಸ್ತೆ ಕಾಯುತ್ತಿದ್ದ ಆಳೊಬ್ಬ ಷೇಖ್ ಬಳಿ ಬಂದ. ರಸ್ತೆಯಲ್ಲಿ ಸಂದೇಶ ಪತ್ರ ಒಯ್ಯುತ್ತಿದ್ದ ಮನುಷ್ಯನಿಂದ ಅದನ್ನು ಕಸಿದುಕೊಂಡು ಬಂದಿದ್ದ. ಅದು ಗ್ರ್ಯಾಟಸ್‌ಗೆ ಲ್ಯಾಟಿನ್ ಭಾಷೆಯಲ್ಲಿ ಮೆಸ್ಸಲಾ ಬರೆದ ಪತ್ರ. ಲ್ಯಾಟಿನ್ ಬಾರದ ಷೇಖ್ ಅದನ್ನು ಬೆನ್-ಹರ್‌ಗೆ ತೋರಿಸಿದ. ಬೆನ್-ಹರ್ ಗಟ್ಟಿಯಾಗಿ ಓದುತ್ತಿದ್ದ. ತನ್ನ ಕುಟುಂಬದ ಪ್ರಸ್ತಾಪ ಬಂದಾಗ ಕಣ್ಣುಗಳು ಹನಿದುಂಬಿ ಬಂದವು. ಷೇಖ್‌ನನ್ನು ವಂಚಕ ಎಂದು ಓದಿದಾಗ ಷೇಖ್ ಕೋಪೋದ್ರಿಕ್ತನಾದ.

"ಹರ್, ನಾನು ನಿನ್ನಂತೆ ಯುವಕನಾಗಿ ಬಲಶಾಲಿಯಾಗಿದ್ದರೆ ಈ ರೋಮನ್‌ರ ಮೇಲೆ ಸೇಡು ತೀರಿಸಿಕೊಳ್ಳುತ್ತಿದ್ದೆ."

"ನೀವು ನನ್ನನ್ನು ನಿಜವಾದ ಹೆಸರಿನಿಂದ ಕರೆದಿರಿ. ನಾನು ನಿಮಗೆ ಆರ್ರಿಯಸ್‌ನ ಮಗ ಎಂದಷ್ಟೇ ಹೇಳಿದ್ದು. ನನ್ನ ನಿಜ ಹೆಸರು ಹೇಗೆ ತಿಳಿಯಿತು?" ಆಶ್ಚರ್ಯದಿಂದ ಬೆನ್-ಹರ್ ಕೇಳಿದ.

"ಅದನ್ನು ಈಗಲೇ ಹೇಳುವುದಿಲ್ಲ. ಆದರೆ ಇಂದು ಸೈಮೋನಿಡ್ಸ್‌ನ ಮನೆಗೆ ಹೋದಾಗ ನಿನಗೇ ತಿಳಿಯುತ್ತದೆ. ನೀನು ತುಂಬಾ ಎಚ್ಚರಿಕೆಯಿಂದಿರು. ನಿನ್ನ ಇರುವಿಕೆ ಶತ್ರುಗಳಿಗೆ ತಿಳಿದಿದೆ."

"ನಾನು ಎಲ್ಲಿದ್ದೀನೆ ಎನ್ನುವುದೂ ಅವರಿಗೆ ಗೊತ್ತು. ಈ ರೋಮನ್ನರು ಕುತಂತ್ರಿಗಳು, ಬಲಶಾಲಿಗಳು. ನೀವು ಸಹ ಎಚ್ಚರಿಕೆಯಿಂದ ಇರಬೇಕು. ನಿಮ್ಮ ಕುದುರೆಗಳನ್ನು ಜೋಪಾನವಾಗಿ ನೋಡಿಕೊಳ್ಳಬೇಕು."

ಶತ್ರುಗಳ ಕಣ್ಣಿಗೆ ಬೀಳದಂತೆ ಬೆನ್-ಹರ್ ಅಡ್ಡದಾರಿ ಹಿಡಿದು ಸೈಮೋನಿಡ್ಸ್‌ನ ಮನೆಗೆ ಬಂದ. ಸೈಮೋನಿಡ್ಸ್, ಎಸ್ತರ್ ಮತ್ತು ಷೇಖ್ ಅವನಿಗಾಗಿ ಕಾಯುತ್ತಿದ್ದರು.

ಊನಗೊಂಡಿದ್ದ ದೇಹವನ್ನು ಮುಂದಕ್ಕೆ ಚಾಚಿ ಬೆನ್-ಹರ್‌ನನ್ನೆ ನೋಡುತ್ತಾ ಸೈಮೋನಿಡ್ಸ್ "ಹರ್ ದೊರೆಯೆ, ನೀವೇ ನನ್ನ ಯಜಮಾನ, ನಾನು ನಿಮ್ಮ ಸೇವಕ. ನನ್ನ ಬಳಿ ಇರುವ ಸೊತ್ತೆಲ್ಲ ತಮ್ಮದೆ," ಎಂದು ಹೇಳಿ ಎಸ್ತರ್‌ಗೆ ಸಂಜ್ಞೆ ಮಾಡಿದ.

ಗೋಡೆಯ ಸಂದಿಯಲ್ಲಿ ರಹಸ್ಯವಾಗಿಟ್ಟಿದ್ದ ಜಂಬು ಕಾಗದದ ಪತ್ರವನ್ನು ಎಸ್ತರ್ ತಂದು ತಂದೆಗೆ ಕೊಟ್ಟಳು.

"ಇದರಲ್ಲಿ ನನ್ನ ಆಸ್ತಿ ಮತ್ತು ಹಣದ ಪಟ್ಟಿಯಿದೆ." ಎಂದು ಸೈಮೋನಿಡ್ಸ್ ಓದತೊಡಗಿದ. ಕೊನೆಯಲ್ಲಿ "ಎಲ್ಲಾ ಆಸ್ತಿಯು ಒಟ್ಟು ಮೊತ್ತ ೬೭೩ ಟ್ಯಾಲೆಂಟ್‌ಗಳು. ಈ ಸಾಮ್ರಾಜ್ಯದ ಅತ್ಯಂತ ಶ್ರೀಮಂತ ಮನುಷ್ಯ ನೀನು! ಇದರ ಜತೆಗೆ ನೀವು ಅಮ್ರಾ, ನಾನು ಮತ್ತು ನನ್ನ ಮಗಳು ಸೇವಕರಾಗಿರುತ್ತೇವೆ."

"ನನ್ನನ್ನು ನಂಬಿ, ಇಷ್ಟು ದೊಡ್ಡ ಆಸ್ತಿಯನ್ನು ಕೊಡುತ್ತಿರುವುದಕ್ಕೆ ವಂದನೆ. ನನ್ನ ಕುಟುಂಬಕ್ಕೆ ಈ ಮೊದಲು ಇದ್ದ ಹಣ ೧೨೦

DAVANGERE



ಸೀರೆಗಳು, ಸೂಟಿಂಗ್‌ಗಳು,

ದಾವಣಗೆರ

ಶರ್ಟಿಂಗ್‌ಗಳು, ಡ್ರೆಸ್ ಮಟೀರಿಯಲ್‌ಗಳು.

ದಾವಣಗೆರೆ ಕಾಟನ್ ಮಿಲ್ಸ್ ಲಿಮಿಟೆಡ್ ಹನುಮಂತಪ್ಪ ಬಿಲ್ಡಿಂಗ್ಸ್, ಚಿತ್ರದುರ್ಗ ರೋಡ್, ದಾವಣಗೆರೆ 577 002

ಶೋರೂಮ್‌ಗಳು: ಕಾವೇರಿ ಭವನ್, ಬೆಂಗಳೂರು 560 009 ದಾಜಿಬನ್‌ಪೇಟ್, ಹುಬ್ಬಳ್ಳಿ 580 0

ಚಿತ್ರದುರ್ಗ ರೋಡ್, ದಾವಣಗೆರೆ 577 002

ಟ್ಯಾಲೆಂಟ್‌ಗಳನ್ನು ಮಾತ್ರ ನಾನು ತೆಗೆದು ಕೊಳ್ಳುತ್ತೇನೆ. ಉಳಿದದ್ದು ಈ ವರ್ಷಗಳಲ್ಲಿ ನೀವು ಸಂಪಾದಿಸಿದ್ದು. ಅದು ನಿಮ್ಮದೆ. ಹಾಗೆಯೇ ನಮ್ಮ ನಡುವೆ ಯಜಮಾನ-ಸೇವಕನ ಸಂಬಂಧ ವನ್ನು ನಾನು ಒಪ್ಪುವುದಿಲ್ಲ."

"ಹಾಗಾದರೆ ನಾನು ನಿಮ್ಮ ಆಸ್ತಿಯ ಮೇಲ್ವಿಚಾರಕನಾಗಿಯೇ ಮುಂದುವರಿಯುತ್ತೇನೆ," ಎಂದು ಸೈಮೋನಿಡ್ಸ್ ಬೇಡಿದ. ಬೆನ್-ಹರ್ ಒಪ್ಪಿದ.

"ಮಲ್ಲುಚ್ ನನ್ನ ಬಳಿ ಕೆಲಸಮಾಡುತ್ತಿದ್ದಾನೆ. ಅವನೇ ನನ್ನ ಕಣ್ಣು ಕೈ ಎಲ್ಲ. ಅವನೇ ನನಗೆ ನಿಮ್ಮ ಬಗ್ಗೆ ಮನವರಿಕೆ ಮಾಡಿಕೊಟ್ಟದ್ದು."

ಬೆನ್-ಹರ್ ಷೇಖ್‌ನನ್ನು ಕೇಳಿದ, "ಅಂದರೆ ನಾನಾರು ಎಂದು ನಿಮಗೆ ಮಲ್ಲುಚ್ ಹೇಳಿದನೋ?" ಷೇಖ್ ಕಣ್ಣು ಮಿಟುಕಿಸಿ ನಗೆಯಾಡಿದ.

"ಜೂಡಾ, ನಿಮ್ಮ ಬಲ, ಕಲಿಕೆ ಮತ್ತು ಬುದ್ಧಿಶಕ್ತಿಯಿಂದ ರೋಮ್ ಸಾಮ್ರಾಜ್ಯವನ್ನು ಪತನಗೊಳಿಸಬೇಕು," ಸೈಮೋನಿಡ್ಸ್ ನುಡಿದ.

ಬೆನ್-ಹರ್ ತಲೆ ತಗ್ಗಿಸಿ ಹೇಳಿದ: "ಯಹೂದ್ಯರ ರಾಜ ಉದಯಿಸಿದ್ದಾನೆ ಎಂಬ ನಿಮ್ಮ ನಂಬಿಕೆ ನನಗೆ ಗೊತ್ತು. ಆದರೆ ಆತ ಏನಾದ ಎಂದೂ ಯಾರಿಗೂ ಸ್ಪಷ್ಟವಾಗಿ ತಿಳಿಯದಿದ್ದರೂ ನಾನು ನನ್ನ ಬಲ, ಹಣ ಎಲ್ಲವನ್ನೂ ಅವನ ಸೇವೆಗಾಗಿ ಮುಡಿಪಿಡುತ್ತೇನೆ. ರೋಮನ್ನರ ವಿರುದ್ಧ ಹೋರಾಡುತ್ತೇನೆ. ನನ್ನ ಕುಟುಂಬ ವನ್ನು ನಿರ್ನಾಮಗೊಳಿಸಿದ ರೋಮನ್ನರ ಮೇಲೆ ಇದೇ ನನ್ನ ಸೇಡು."

"ಷೇಖ್ ಇಲ್ದರಿಂ ಮತ್ತು ಅವನ ಜನಾಂಗ ನಿಮ್ಮ ಜನತೆಗಿರುತ್ತದೆ. ಅವರು ಮತ್ತು ನೀವು ಎಲ್ಲಾ ಕಡೆ ಸುತ್ತಾಡಿ ಇಸ್ರೇಲ್ ಜನರನ್ನು ಸಂಘಟಿಸಿ ಹೋರಾಡಲು ತರಬೇತಿ ನೀಡಿ. ನಾನು ಇಲ್ಲಿ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿ ಅಡಗಿಸಿಡುತ್ತೇನೆ," ಷೇಖ್ ಆಶ್ವಾಸನೆಯಿತ್ತ.

"ಒಪ್ಪಿದೆ," ಎಂದು ಬೆನ್-ಹರ್.

ಬೆನ್-ಹರ್‌ನ ಮಾತು ಕೇಳಿ ಎಸ್ತರ್ ಅಳಲು ಶುರುಮಾಡಿದಳು. ಅವಳ ಕಡೆ ತಿರುಗಿ ಹೇಳಿದ, "ನನಗಾಗಿ ಅಳುವವರು ಒಬ್ಬರಿದ್ದಾರೆ ಎಂದರೆ ಈ ಕಷ್ಟಗಳನ್ನೆಲ್ಲ ಸೈರಿಸುವುದು ತುಂಬಾ ಸುಲಭ," ಎಂದು ಅವಳ ಹಸ್ತವನ್ನು ಚುಂಬಿಸಿದ. ಮತ್ತೆ ಸೈಮೋನಿಡ್ಸ್ ಕಡೆ ತಿರುಗಿ, "ನಾವೀಗ ಮಾತ್ರ ಎಚ್ಚರಿಕೆಯಿಂದ ಇರಬೇಕು. ಮೆಸ್ಸಲಾ, ಗ್ರ್ಯಾಟಸ್‌ಗೆ ಬರೆದಿರುವ ಪತ್ರದಿಂದ ರೋಮನ್ನರು ನಮ್ಮ ಶತ್ರುಗಳೆಂದು ಸ್ಪಷ್ಟವಾಗಿವೆ. ಈ ದೃಷ್ಟಿಯಿಂದ ನಾವು ಯೋಚನೆ ರೂಪಿಸೋಣ. ಗ್ರ್ಯಾಟಸ್‌ಗೆ ಸಮುದ್ರದ ಮೂಲಕ ಕಳುಹಿಸಿರುವ ಪತ್ರಕ್ಕೆ ಉತ್ತರ ಬರುವವರೆಗೆ ಮೆಸ್ಸಲಾ ನಮಗೇನೂ ಮಾಡಲಾರ."

"ನಾವು ವ್ಯವಹಾರದ ಕಡೆ ಗಮನ ಕೊಡಬೇಕು. ದೊರೆ ಆರ್ರಿಯಸ್‌ನಿಂದ ನಿಮಗೆ ಬಂದ ಹಣ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಈ ರೋಮನ್ ದರೋಡೆಗಾರರು ಯತ್ನಿಸುತ್ತಾರೆ. ಆದುದರಿಂದ ತಕ್ಷಣ ಅದನ್ನು ಮಾರಿ ಅವರಿಗೆ ಸಿಗದಂತೆ ಹಣವನ್ನು ನಾನು ಇಡುತ್ತೇನೆ," ಎಂದ ಸೈಮೋನಿಡ್ಸ್.

ಬೆನ್-ಹರ್ ಈ ಯೋಜನೆಗೆ ಒಪ್ಪಿದ. ಶ್ರೀಮಂತಿಕೆ ಮತ್ತು ಸುಖಕರ ಜೀವನವನ್ನು ಬಿಟ್ಟು ರೋಮನ್ ಸಾಮ್ರಾಜ್ಯದ ಪತನಕ್ಕೆ ಮತ್ತು ಯಹೂದ್ಯ ದೊರೆಯ ಸೇವೆಗಾಗಿ ಅಪಾಯಕರ ಜೀವನವನ್ನು ಕೈಗೊಂಡ.

ಮುಂದಿನ ದಿನಗಳು ತುಂಬ ಸಂದಿಗ್ಧ ದಿನಗಳು. (ಇನ್ನೂ ಇದೆ)

Edited, printed and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli-580 020 Phone: 64307. Rept: Bombay, V. Satyamurthy Phone: 5510502, Calcutta: H. Majumdar Phone: 46-42331 Madras: K. A. Subramanian Phone: 842201; New Delhi; V. K. Chopra Phone: 7114785.

*Registered with the Regitrar of Newspapers for India under No. 3539/57*

